# ನಗೆ-ಕೇದಿಗೆ

(ಹಾಸ್ಯ ಪ್ರಬಂಧಗಳು)

ಲೇಖಕರು :

ಜ್ಯೋತ್ಸ್ನಾ ಕಾಮತ

೧೯೯೬




ಮನೋಹರ ಗ್ರಂಥಮಾಲಾ

ಲಕ್ಷ್ಮೀಭವನ, ಸುಭಾಸ ರಸ್ತೆ

ಧಾರವಾಡ - ೫೮೦ ೦೦೧

**NAGE-KEDIGE :** (Kannada)

Humourous Essays

Author : Jyotsna Kamat

Publisher :

**Manohara Grantha Mala,**
Laxmi Bhavan, Subhas Road,
Dharwad–580 001. (Ph : 0836–441822)

D.T.P & Printers :

**Twaritha Mudrana Offset Printers**
Gadag–582 101.

Edition : First Year : 1999

Pages : viii + 134 = 142

Price : 75–00





(ಗ್ರಂಥ ಮಾಲೆಯ ವಾರ್ಷಿಕ ಚಂದಾಹಣ : ೨೦೦/– ರೂ. + ಅಂಚೆ ವೆಚ್ಚ ಪ್ರತ್ಯೇಕ)

ಪ್ರಕಾಶನ :

ಮನೋಹರ ಗ್ರಂಥಮಾಲಾ,
ಸುಭಾಸ ರಸ್ತೆ, ಧಾರವಾಡ–೫೮೦ ೦೦೧.
✆ : 0836–441822 (O) 347002 (R)

ಮುದ್ರಣ :

ಫ. ಶಿ. ಯವರ ✆ : 38617
ತ್ವರಿತ ಮುದ್ರಣ ಆಫ್‌ಸೆಟ್ ಪ್ರಿಂಟರ್ಸ್
ಕಾಗದಗೇರಿ ಓಣಿ, ಗದಗ–೫೮೨ ೧೦೧.
✆ : 37566, 35509 (O) 36578 (R)

ISBN : 81–85728–63–1

# ಸಂಪಾದಕರ ಮಾತು

ಗ್ರಂಥಮಾಲೆಯ ೫೩ನೆಯ ಗ್ರಂಥ ವರ್ಷ (೧೯೯೯–೨೦೦೦)ದ ಎರಡನೆಯ ಗ್ರಂಥವನ್ನಾಗಿ ಶ್ರೀಮತಿ ಜ್ಯೋತ್ಸ್ನಾ ಕಾಮತರ ''ನಗೆ–ಕೇದಿಗೆ'' ಎಂಬ ಹಾಸ್ಯ ಪ್ರಬಂಧಗಳ ಸಂಕಲನವನ್ನು ನಮ್ಮ ಚಂದಾದಾರರಿಗೆ ಸಲ್ಲಿಸುತ್ತಿರುವದಕ್ಕೆ ಅತ್ಯಂತ ಸಂತೋಷವೆನಿಸುತ್ತಿದೆ.

ಶ್ರೀಮತಿ ಜ್ಯೋತ್ಸ್ನಾ ಕಾಮತ ಹಾಗೂ ಕೃಷ್ಣಾನಂದ ಕಾಮತರದು ಅಪರೂಪದ ದಾಂಪತ್ಯ ಜೋಡಿ. ಅವರು ಆಕಾಶವಾಣಿಯಲ್ಲಿ ಕೆಲಸ ಮಾಡುತ್ತಿರುವಾಗಲೇ ತಮ್ಮ ಸಾಹಿತ್ಯ ಪ್ರತಿಭೆಯನ್ನು ಬದಿಗಿಟ್ಟು ಕೃಷ್ಣಾನಂದರ ಸಾಹಿತ್ಯವನ್ನು ಮುಂದಕ್ಕೆ ತರುವದರಲ್ಲಿ ಸಾಕಷ್ಟು ತೆರೆಯ ಮರೆಯ ಕೆಲಸ ಮಾಡಿದ್ದಾರೆ. ಅದಕ್ಕೆ ಕಾರಣ ಕೃಷ್ಣಾನಂದರ ಸಂಕೋಚ ಸ್ವಭಾವ ಹಾಗೂ ಪ್ರಸಿದ್ಧಿಯಿಂದ ಮುದುಡಿಕೊಳ್ಳುವ ವ್ಯಕ್ತಿತ್ವ. ಅನೇಕ ವರ್ಷಗಳವರೆಗೆ ಅವರ ಹಸ್ತಪ್ರತಿಗಳನ್ನು ಮುದ್ರಣಕ್ಕಾಗಿ ಮತ್ತೆ ಬರೆದು ತೆಗೆಯುವ ಕಾರ್ಯ ಶ್ರೀಮತಿ ಜ್ಯೋತ್ಸ್ನಾ ಅವರದು. ಅಂಥದರಲ್ಲಿಯೇ ಅವರು ಪಿ.ಎಚ್.ಡಿ. ಪ್ರಬಂಧ ಬರೆದು ಮುಗಿಸಿ ಡಾಕ್ಟರೇಟ್ ಪಡೆದುಕೊಂಡು, ಇತ್ತೀಚಿನ ವರ್ಷಗಳಲ್ಲಿ ಸ್ವಂತ ಬರವಣಿಗೆಯ ಕಡೆಗೆ ಲಕ್ಷ್ಯ ಹಾಕಿದರೂ ಅವರ ಬರವಣಿಗೆಯಲ್ಲಿ ಕೃಷ್ಣಾನಂದ ಕಾಮತರ ಸ್ವಭಾವ, ವ್ಯಕ್ತಿತ್ವ, ನಿರಾಡಂಬರ ಜೀವನ, ಅಲ್ಪತೃಪ್ತಿ ಜೀವನವನ್ನು ನೋಡುವ, ಎದುರಿಸುವ ದೃಷ್ಟಿಕೋನ–ಮೊದಲಾದವುಗಳ ಅನೇಕ ರೂಪಗಳ ಹಾಸ್ಯ ಮಿಶ್ರಿತ, ತಿಳಿನಗೆಯ ಸಾಹಿತ್ಯ ನಿರ್ಮಿತವಾಗಿದೆ.

ಈಗಾಗಲೇ ಅವರು ತಮ್ಮ ಎರಡು ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ಆದರೆ ದಿ. ಜಿ. ಬಿ. ಜೋಶಿಯವರ ಒತ್ತಾಯದ ಆಗ್ರಹದ ಮೇರೆಗೆ ಈಗ ಅವರು ತಮ್ಮ ಈ ಗ್ರಂಥವನ್ನು ಗ್ರಂಥಮಾಲೆಯಲ್ಲಿ ಪ್ರಕಟಿಸಲು ಒಪ್ಪಿದ್ದಾರೆ. ಕೃಷ್ಣಾನಂದರೇ ಆಗಲಿ, ಶ್ರೀಮತಿ ಜ್ಯೋತ್ಸ್ನಾ ಅವರೇ ಆಗಲಿ, ಗಡಿಯಾರದಂತೆ ಹೊತ್ತಿಗೆ ಸರಿಯಾಗಿ ಕೆಲಸ ಮಾಡುವ ಪ್ರವೃತ್ತಿಯವರು. ಹೀಗಾಗಿ ತಮ್ಮ ಹಸ್ತಪ್ರತಿಯನ್ನು ಹೇಳಿದ ಹೊತ್ತಿಗೆ ಕಳುಹಿಸಿ, ಈ ವರ್ಷದಲ್ಲಿ ಅವರ ಪುಸ್ತಕವನ್ನು ಸೇರಿಸುವಲ್ಲಿ ಅನುವು ಮಾಡಿಕೊಟ್ಟಿದ್ದಾರೆ. ಅವರಿಗೆ ಗ್ರಂಥಮಾಲೆ ಚಿರಋಣಿಯಾಗಿದೆ. ಜೀಬಿ–ಕಾಮತ ಬಾಂಧವ್ಯ ಅವಿಸ್ಮರಣೀಯವಾದ ಬೆಸುಗೆಯಾಗಿದೆ. ಜಿ. ಬಿ ನಂತರವೂ ಅವರು ಗ್ರಂಥಮಾಲೆಗೆ ಅದೇ ರೀತಿಯ ನಂಟನ್ನು ಮುಂದುವರಿಸಿಕೊಂಡು ಹೋಗಿದ್ದಾರೆ.

ಈ ಗ್ರಂಥಕ್ಕೆ ಅಂದವಾದ ಮುಖಚಿತ್ರವನ್ನು ಒದಗಿಸಿಕೊಟ್ಟ ಡಾ. ಕೃಷ್ಣಾನಂದ ಕಾಮತರಿಗೆ ಕೃತಜ್ಞತೆಗಳು.

ಹೊತ್ತಿಗೆ ಸರಿಯಾಗಿ ಮುದ್ರಿಸಿಕೊಟ್ಟ ಗದುಗಿನ ತ್ವರಿತ ಮುದ್ರಣ ಆಫ್‌ಸೆಟ್ ಪ್ರಿಂಟರ್ಸ್‌ದವರಿಗೂ, ಮುಖಪುಟ ಮುದ್ರಿಸಿಕೊಟ್ಟ ಬೆಂಗಳೂರಿನ ಲಾವಣ್ಯ ಮುದ್ರಣದವರಿಗೂ ಕೃತಜ್ಞರಾಗಿದ್ದೇವೆ.

ರಮಾಕಾಂತ ಜೋಶಿ
ವ್ಯವಸ್ಥಾಪಕ ಸಂಪಾದಕ

# ಹಿನ್ನೆಲೆಯಾಗಿ

ಬಡವರು, ಸಿರಿವಂತರು ಎಂಬ ಭೇದವಿಲ್ಲದೇ ಜೀವನದಲ್ಲಿ ಎಲ್ಲರೂ ಕಷ್ಟನಷ್ಟಗಳನ್ನು ಅನುಭವಿಸಲೇ ಬೇಕಾಗುತ್ತದೆ. ವಿನೋದ ಪ್ರವೃತ್ತಿಯನ್ನು ಬೆಳೆಸಿಕೊಂಡವರಿಗೆ ಎಂಥ ಬಿಕ್ಕಟ್ಟಿನ ಪ್ರಸಂಗ ಬಂದರೂ ಅದನ್ನು ಸುಲಭವಾಗಿ ಎದುರಿಸಲು ಸಾಧ್ಯವಾಗುತ್ತದೆ. ನಮ್ಮ ಮಟ್ಟಿಗೆ ಈ ಸೂತ್ರ, ಅರ್ಥಪೂರ್ಣ ಜೀವನ ನಡೆಸಲಿಕ್ಕೆ ಗಡಚಾದ ಸನ್ನಿವೇಶಗಳನ್ನು ಹಗುರಾಗಿ ಎದುರಿಸಲಿಕ್ಕೆ ಸಹಾಯವಾಗಿದೆ. ನಮ್ಮ ಕೆಲ ಅನುಭವಗಳನ್ನೇ, ಹಾಸ್ಯಭರಿತ ಸಂಭಾಷಣೆ, ನಿರೂಪಣೆಯ ರೂಪದಲ್ಲಿ ಪ್ರಕಟಿಸಿದಾಗ ಅವು ಅತ್ಯಂತ ಜನಪ್ರಿಯವಾದವು. ವಿವಿಧ ಕನ್ನಡ ಪತ್ರಿಕೆಗಳಿಂದ ಬೇಡಿಕೆ ಬರಲಾರಂಭಿಸಿತು. ಸಾಹಿತ್ಯ ಅಕಾಡೆಮಿಯು ಕಳೆದ ಕೆಲವರ್ಷಗಳಿಂದ ವರ್ಷದ ಉತ್ತಮ ಪ್ರಬಂಧಗಳಲ್ಲಿ ಸೇರಿಸಲು ಹಲವನ್ನು ಆಯ್ಕೆ ಮಾಡುತ್ತಲಿದೆ. ಮೊಟ್ಟಮೊದಲಿಗೆ ದಿವಂಗತ ಚದುರಂಗರು, ಈ ಪ್ರಬಂಧಗಳು ಪುಸ್ತಕ ರೂಪದಲ್ಲಿ ಪ್ರಕಟವಾಗಲು ಹೆಚ್ಚಿನ ಪ್ರೋತ್ಸಾಹ ಇತ್ತರು. ಹೀಗಾಗಿ 'ಸಂಸಾರದಲ್ಲಿ ಸ್ವಾರಸ್ಯ' ಕೃತಿ ಹೊರಬೀಳುವಂತಾಯಿತು. ಶೀಘ್ರದಲ್ಲಿಯೇ ಅದು ಮರು ಮುದ್ರಣವನ್ನು ಕಂಡುದರಿಂದ ನಗೆಲೇಖಗಳಿಗೆ ಎಷ್ಟೊಂದು ಬೇಡಿಕೆ ಇದೆ ಎಂದು ತಿಳಿಯುವಂತೆ ಆಯಿತು. 'ಹೀಗಿದ್ದೇವೆ ನಾವು' ಇಂಥ ಲಘು ಲೇಖಗಳ ದ್ವಿತೀಯ ಸಂಕಲನವಾಗಿ ಹೊರ ಬಂದಿತು.

ಲಘು ಪ್ರಬಂಧಗಳಿಗೆ ಬೇಡಿಕೆಯೇನೋ ವಿಪುಲವಾಗಿದೆ. ಆದರೆ ಬರೆಯುವದು ಅಷ್ಟು ಸುಲಭವಲ್ಲ ಎಂದು ಯತ್ನಿಸಿದಾಗಲೇ ತಿಳಿಯಬೇಕು. ಧಾರವಾಡದ ಮನೋಹರ ಗ್ರಂಥಮಾಲೆಯ ದಿ। ಜಿ. ಬಿ. ಜೋಶಿ ಅವರು ತಮ್ಮ ಮಾಲೆಗಾಗಿ ಹಾಸ್ಯಲೇಖಗಳ ಹಸ್ತಪ್ರತಿ ಕೊಡಲು ತುಂಬ ಹಿಂದೆಯೇ ಸೂಚಿಸಿದ್ದರೂ ಆ ಯೋಗ ಕೂಡಿ ಬಂದಿರಲಿಲ್ಲ. ಡಾ। ರಮಾಕಾಂತ ಜೋಶಿ ಅವರು, ತಮ್ಮ ಪಿತರು ತುಳಿದ ದಾರಿಯಲ್ಲೇ ಹೊರಟು ಬಂದು, ನನ್ನ ಪ್ರಕಟಿತ, ಅಪ್ರಕಟಿತ ಲೇಖನಗಳನ್ನು ಗ್ರಂಥರೂಪದಲ್ಲಿ ಹೊರತರಲು ಒಪ್ಪಿದ್ದರಿಂದ ಮೂರನೆಯ ಸಂಕಲನವಾಗಿ ಈ ಕೃತಿ ಹೊರಬರಲು ಸಾಧ್ಯವಾಗಿದೆ. ಕಳೆದ ಮೂರು ದಶಕಗಳಿಂದ ಮನೋಹರ ಗ್ರಂಥಮಾಲೆಯೊಂದಿಗೆ ಬೆಳೆದು ಬಂದ ನಂಟು ಮುಂದುವರಿಯುವಂತಾದದ್ದಕ್ಕೆ ಸಂತೋಷವಾಗಿದೆ. ನನ್ನ ಪತಿ ಡಾ. ಕೃಷ್ಣಾನಂದ ಕಾಮತ (ಲೇಖನಗಳಲ್ಲಿ ರಾಯರು)ರ ಐದು ಕೃತಿಗಳನ್ನು, ಈ ಮೊದಲು ಶ್ರೀ ಜಿ. ಬಿ. ಜೋಶಿಯವರೇ ಪ್ರಕಟಿಸಿದ್ದಾರೆ ಎಂದು ಇಲ್ಲಿ ಸ್ಮರಿಸಿಕೊಳ್ಳಬಹುದು.

ಈ ಪ್ರಬಂಧಗಳೆಲ್ಲ ನಮ್ಮಿರ್ವರ ಸುತ್ತಲೂ ಹೆಣೆದವುಗಳೇ ಆಗಿವೆ. ಆದರೆ ಇವೆಲ್ಲ ಪ್ರತಿದಿನ ನಡೆದ ಘಟನೆಗಳ ದಿನಚರಿಯಲ್ಲಿ. ಬರಹ ರೂಪದಲ್ಲಿ ಹಾಸ್ಯ ಮೂಡಿ ಬರಬೇಕಾದರೆ, ಕಲ್ಪನಾಶಕ್ತಿಯ ಬಲಬೇಕು. ಹೀಗಾಗಿ ದೈನಂದಿನ ಚಟುವಟಿಕೆಗಳನ್ನೇ ವಕ್ರೀಕರಿಸಿ, ಅತಿಶಯೋಕ್ತಿಯ ಅಲಂಕಾರ ಹಾಕಿದಾಗ ನಗೆ, ಕಾಣಿಸಿಕೊಳ್ಳಲು ಸಾಧ್ಯ. ಹೀಗೆ ಮಾಡಲೆತ್ನಿಸಿದಾಗ ಪ್ರಮಾದವಾಗುವದೂ ಉಂಟು. ಕೆಲವು ಓದುಗರು, ಬರಹದಲ್ಲಿ ಚಿತ್ರಿತವಾದಂತೆಯೇ ನಾವುಗಳು ಜೀವನವನ್ನು ನಡೆಸುತ್ತೇವೆ ಎಂದು

ಭಾವಿಸಿದ್ದು ಇದೆ ! ಇನ್ನೂ ಕೆಲವರು ನಿಜಕ್ಕೂ ನನ್ನ ರಾಯರು, ಲೇಖಗಳಲ್ಲಿ ಕಾಣಿಸಿದಂತೆಯೇ ಇದ್ದಾರೆ ಎಂದು ನಂಬಿದ್ದೂ ಇದೆ ! ಆದರೆ ಈ 'ರಾಯರು' ವಿಜ್ಞಾನಿ, ಕಲಾಕಾರ, ಛಾಯಾಚಿತ್ರಕಾರ, ಬರಹಗಾರ, ಅವರಿಗೆ ರಾಜ್ಯ, ರಾಷ್ಟ್ರ ಈಗ ಮಗನು ತುಂಬ ಯಶಸ್ವಿಯಾಗಿ ಪ್ರಸಾರ ಮಾಡುತ್ತಿರುವ ಇಂಟರ್‌ನೆಟ್ ವೆಬ್ ಮೂಲಕ ಅಂತರ್‌ರಾಷ್ಟ್ರೀಯ ಮನ್ನಣೆಯೂ ದೊರೆತಿದೆ. ವಿನೋದಕ್ಕೆಂದೇ ಅವರ ವ್ಯಕ್ತಿತ್ವವನ್ನು ವಕ್ರೀಕರಿಸಿದ್ದು ಇದೆ. ಇದರಿಂದ ತಮ್ಮ ವ್ಯಕ್ತಿತ್ವಕ್ಕೆ ಕುಂದು ಬಂತೆಂದು ಅವರು ಭಾವಿಸಿದವರಲ್ಲ, ಹಾಗಿದ್ದರೆ ಇವಾವ ಲೇಖಗಳೂ ಮೈತಾಳಿ ಬರುತ್ತಿರಲಿಲ್ಲ! ಅವರ ತೀರ ಸಹಜ ಹಾಸ್ಯ ಪ್ರವೃತ್ತಿಯೇ ಈ ಬರವಣಿಗೆಯ ಜೀವಾಳ. ಮೂಲ ಸ್ಫೂರ್ತಿ ಕೂಡ ಎಂದರೆ ತಪ್ಪಾಗಲಾರದು.

ಈ ಲೇಖಗಳಲ್ಲಿ ಹಾಸ್ಯದೊಂದಿಗೆ ದೈನಂದಿನ ಬವಣೆಯ ಸನ್ನಿವೇಶಗಳನ್ನು ಹಾಸು ಹೊಕ್ಕಾಗಿ ಹೆಣೆಯಲು ಯತ್ನಿಸಿದ್ದೇನೆ. ಮುಟ್ಟಿದರೆ ಸ್ನಾನ ಮಾಡಬೇಕಾದಷ್ಟು ಕೊಳಕಾಗುತ್ತ ನಡೆದ ಚಿಂದಿ ನೋಟುಗಳ ಅಂತರಂಗ 'ನೋಟುಗಳ ನವೀಕರಣ' ದಲ್ಲಿದೆ. ಹಣದಾಸೆ, ಸಾಹಿತಿಗಳನ್ನು ಬಿಟ್ಟಿಲ್ಲ ಎಂಬುದು 'ಸಾಹಿತಿಯೂ ಸಿರಿವಂತ ನಾಗಬಲ್ಲ! ' ಎಂಬ ವ್ಯಂಗ್ಯ ಚಿತ್ರದಲ್ಲಿ ಬಂದಿದೆ. ಬ್ಯಾಂಕ್ ಹಗರಣ, ಮೇವು ಹಗರಣ, ಶ್ಯೂ ಹಗರಣ, ಗೊಬ್ಬರದ ಸ್ಕ್ಯಾಮ್‌ಗಳಿಂದ ದೇಶದ ಜನತೆ ತಲ್ಲಣಗೊಂಡಿದ್ದೇ 'ಸ್ಕ್ಯಾಮ್ ತಂದ ಸಂಕಟ' ಕ್ಕೆ ಕಾರಣವಾಗಿದೆ. ವಿದ್ಯುತ್ ಪೂರೈಕೆಯ ಅಭಾವದಿಂದ ಘಾಸಿಯಾದ ನಾಗರಿಕರಿಗೆ 'ಕೆಇಬಿಗೆ ಕೃತಜ್ಞತೆಗಳು !' ನಗೆಯ ಮಿನುಗು ನೀಡಿದ್ದು ನಿಜ ! ಆದಾಯಕರ, ತೆರಿಗೆಯವರ ಜಾಲದಿಂದ ದೊಡ್ಡ ಮೀನುಗಳು ಜಾರಿ ಹೋಗುತ್ತವೆ. ಕಾನೂನು ಪಾಲಿಸುವವರಿಗೇ ಕುತ್ತು ಕಾದಿರುತ್ತದೆ ಎಂಬುದು ಹದಿನಾರರಲ್ಲಿ ಒಂದು........ಲೇಖದಲ್ಲಿ ಬಂದಿದೆ. ಕಾನೂನು ರಕ್ಷಕರು, ಪೌರಾಡಳಿತಗಾರರು ಇವರ ಕಾರ್ಯ ವೈಖರಿಯ, ವಿಡಂಬನೆಯ ಮೊನಚು ಅಲ್ಲಲ್ಲಿ ಓದುಗರಿಗೆ ಗೋಚರಿಸುತ್ತದೆ.

'ನಗೆ–ಕೇದಿಗೆ' ಶೀರ್ಷಿಕೆ ವರಕವಿ ಬೇಂದ್ರೆಯವರ 'ನಗೀಕ್ಯಾದಗಿ'ಯಿಂದ ಪ್ರೇರಿತವಾಗಿದೆ. ಕೇದಿಗೆಯಂತೆ ಇಲ್ಲಿಯದು ಚುಚ್ಚುನಗೆಯೆಂದು ಭಾವಿಸಿದ್ದೇನೆ.

ಅತ್ಯಲ್ಪ ಸಮಯದಲ್ಲಿ ಆಕರ್ಷಕವಾಗಿ ಈ ಕೃತಿಯನ್ನು ಹೊರತಂದ ಡಾ। ರಮಾಕಾಂತ ಜೋಶಿ ಅವರಿಗೆ ಅತ್ಯಂತ ಕೃತಜ್ಞಳಾಗಿದ್ದೇನೆ. ಓದುಗರು ತಮ್ಮ ಅನಿಸಿಕೆಗಳನ್ನು ಈ ಕೆಳಗೆ ಕಾಣಿಸಿದ ವಿಳಾಸಕ್ಕೆ ಬರೆದು ತಿಳಿಸಬೇಕಾಗಿ ಕೋರಿಕೆ.

೨೫–೧೧–೧೯೯೮

ಡಾ। ಜ್ಯೋತ್ಸ್ನಾ ಕಾಮತ
೧೧೦, ಶಶಿಕಿರಣ್
೧೮ನೇ ಕ್ರಾಸ್ ಮಲ್ಲೇಶ್ವರಂ,
ಬೆಂಗಳೂರು–೫೬೦ ೦೫೫.

# ಪರಿವಿಡಿ

# ೧. ಕೀಟಪ್ರಿಯರನ್ನು ವರಿಸಿದಾಗ....

ನಾನು ಪಾಂಡಿತ್ಯಪ್ರೇಮಿ ! ವರಿಸಿದರೆ, ವಿದ್ವಾಂಸನೊಬ್ಬನನ್ನೇ ವರಿಸುವುದು! ಎಂದು ಚಿಕ್ಕಂದಿನಿಂದಲೇ ನಿರ್ಧರಿಸಿದ್ದೆ. ಹೀಗಾಗಿ ಅಮೇರಿಕೆಯಲ್ಲಿ ಡಾಕ್ಟರೇಟು ಮಾಡಿದಾತ, ಘನ ವಿದ್ವಾಂಸನೇ ಸರಿ, ಎಂದು ಹಿಂದೆ-ಮುಂದೆ ವಿಚಾರಿಸದೇ ರಾಯರನ್ನು ಬಾಳ ಸಂಗಾತಿಯನ್ನಾಗಿ ಮಾಡಿಕೊಂಡಿದ್ದೆ. ಆದರೆ ಮದುವೆಯಾದ ಹೊಸದರಲ್ಲೇ ಅವರು ನುಸಿ, ನೊಣ, ಸೊಳ್ಳೆ, ಜಿರಳೆಗಳ ಪಂಡಿತರು, ಎಂದು ತಿಳಿದು ಮೋಸ ಹೋದದ್ದು ಅರಿವಾಯಿತು ! "ಪಾಲಿಗೆ ಬಂದದ್ದೇ ಪಂಚಾಮೃತ" ಎಂದು ಸಮಾಧಾನ ಮಾಡಿಕೊಳ್ಳದೇ ನಿರ್ವಾಹವೇ ಇರಲಿಲ್ಲ. ಅಂತೆಯೇ ಅವರು ರಾಜಸ್ಥಾನದ ಕೃಷಿ ವಿಶ್ವವಿದ್ಯಾಲಯದಲ್ಲಿ ಕೀಟ ಪಂಡಿತರು ಎಂದು ನೌಕರಿಗೆ ಸೇರಿಕೊಂಡಾಗ ರಾಮನನ್ನು ನಂಬಿದ ಸೀತೆ ವನವಾಸಕ್ಕೆ ಹೊರಟಂತೆ ನಾನೂ ನೀರಿಲ್ಲದ, ಮರು ಭೂಮಿಯ ಒಣವಾಸಕ್ಕೆ ರಾಯರನ್ನು ಅನುಸರಿಸಿದ್ದೆ. ಆ ರೇಗಿಸ್ತಾನದಲ್ಲಿ ಅತ್ಯುಗ್ರ ಒಣ ಹವೆಗೆ ಕೀಟಗಳು ಬದುಕುಳಿಯದೇ ಅವುಗಳ ಬಾಧೆ ಇರಲಿಕ್ಕಿಲ್ಲ! ಹೀಗಾಗಿ ಕೀಟಗಳಿಗೆ ಮೀಸಲಾದ ಅವರ ಗಮನ, ಲಕ್ಷ-ಆರೈಕೆಗಳು ಇನ್ನು ಮುಂದೆ ನನಗೇ ಮೀಸಲು ! ಎಂದು ಭಾವಿಸಿದ್ದೆ. ನನ್ನ ಸಕಲ ಊಹೆಗಳೂ ಹುಸಿ ಹೋದಾಗ. ನವ ವಿವಾಹಿತೆಯ ಮನಃಸ್ಥಿತಿ ಊಹಿಸುವುದು ಇತರರಿಗೆ ಬಿಟ್ಟದ್ದು !

ಬೆಡ್‌ರೂಮಿನ ತುಂಬ ಮಾಟವಾದ ತೇಗಿನ ಅಂದ-ಚಂದದ ಪೆಟ್ಟಿಗೆಗಳನ್ನು ರಾಯರು ಓರಣವಾಗಿ ಜೋಡಿಸಿಟ್ಟಿದ್ದರು. ಒಳ್ಳೆಯ ಛಾಯಾಚಿತ್ರಕಾರರೆಂದು ಗೊತ್ತಿದ್ದರಿಂದ ಅವುಗಳಲ್ಲಿ ಸುಂದರವಾದ ಛಾಯಾಚಿತ್ರಗಳಿರಬಹುದು, ಕೆಲವುಗಳ ಲ್ಲಾದರೂ ನೋಟಿನ ಕಂತೆಗಳನ್ನೋ, ಬೆಳ್ಳಿಯ ನಾಣ್ಯಗಳನ್ನೋ ಇಟ್ಟಿರಬಹುದು ಎಂದು ಪುಳಕಗೊಂಡಿದ್ದೆ. ಕೆಲ ದಿನ ಕಳೆದ ಬಳಿಕ ಕುತೂಹಲ ತಡೆಯದೇ ಕೇಳಿಯೂ ಬಿಟ್ಟೆ. ಉತ್ತರ ರೂಪದಲ್ಲಿ ನಸುನಗುತ್ತಾ ರಾಯರು ಆ ಪೆಟ್ಟಿಗೆಗಳನ್ನು ಇಳಿಸಿ ಹಾಸಿಗೆಯ ಮೇಲೆ ಇರಿಸಿ ಮುಚ್ಚಳ ತೆಗೆದರು. ವ್ಯಾಕ್ ! ನಾನು ಹೆದರುತ್ತಿರುವ, ಅಸಹ್ಯಪಟ್ಟುಕೊಳ್ಳು ತ್ತಿರುವ, ಕೀಟ ಕೋಟಿಯ ಕೆಲ ಮಾದರಿಗಳು ಪೆಟ್ಟಿಗೆಯಲ್ಲಿ ವಿರಾಜಮಾನವಾಗಿದ್ದವು! ಮುಖ ಗಂಟಿಕ್ಕಿ ಅಲ್ಲಿಂದ ಕಂಬಿ ಕೀಳಲಿದ್ದಾಕೆಯನ್ನು ಇವರು ತೋಳು ಹಿಡಿದು ನಿಲ್ಲಿಸಿದರು. "ಇವು, ನನಗೆ ಪಂಚಪ್ರಾಣ ! ಇನ್ನು ಮುಂದೆ ನೀನು ನನಗಿಂತ ಮಿಗಿಲಾಗಿ ಈ ಕೀಟ-ಧನವನ್ನು ಪ್ರಯತ್ನಪೂರ್ವಕವಾಗಿ ಪ್ರೀತಿಸು" ಎಂದು ಅನುನಯದಲ್ಲೇ ಕೇಳಿಕೊಂಡರು. ಕೀಟಪ್ರಿಯರನ್ನು ಪ್ರಿಯತಮನನ್ನಾಗಿಸಿ ಆರಿಸಿದ್ದಕ್ಕೆ ಈ ಬೆಲೆ ಅಲ್ಲವೇ !

ಇದು ಕ್ರಿಮಿ ಸಮಾನ ! ಎಂದೆನಿಸಿ ಆಗಲಿ ! ಎಂದೆ. ''ಒಳ್ಳೆ ಹುಡುಗಿ''! ಎಂದು ಬೆನ್ನು ತಟ್ಟಿದರು. ಅಲ್ಲಿಂದ ನನಗೆ ಕೀಟ ಲೋಕದ ಪರಿಚಯ ನೀಡಲಾರಂಭಿಸಿದರು.

ಒಂದು ರವಿವಾರ, ತಮ್ಮ ''ಕೀಟ ಖಜಾನೆ''ಯ ೧೩ನೇ ನಂಬರ ಪೆಟ್ಟಿಗೆಯನ್ನು ಪ್ರದರ್ಶಿಸುತ್ತ ವಿವರಣೆ ನೀಡಲಾರಂಭಿಸಿದರು. ''ನಮ್ಮದು ಬಡದೇಶವೆಂದು ಪಾಶ್ಚಿಮಾತ್ಯರು ಹೇಳುತ್ತ ಬಂದರೂ, ಇಂಥ ಜೀವಕೋಟಿಯಲ್ಲಿ ನಮ್ಮನ್ನು ಸರಿಗಟ್ಟುವವರು ಬೇರಾರೂ ಇಲ್ಲ. ನಮ್ಮಲ್ಲಿರುವ ಕೀಟ ವೈವಿಧ್ಯದಿಂದ ಅಮೇರಿಕನ್ನರಿಗೆ ಹೊಟ್ಟೆಕಿಚ್ಚಾಗಿದೆ ! ಅವುಗಳನ್ನು ಅಪಹರಿಸಲೆಂದೇ, ಮುಹಮ್ಮದ ಗಝನಿಯನ್ನು ಮೀರಿಸಿ ಐವತ್ತು ಬಾರಿ ಭಾರತಕ್ಕೆ ದಾಳಿ ಮಾಡಿದರೆ ಆಶ್ಚರ್ಯವಿಲ್ಲ! ಆದರೆ ಈ ವೈಜ್ಞಾನಿಕ ದಾಳಿ, ಬೆಳ್ಳಿ–ಬಂಗಾರಗಳಿಗಾಗಿ ಅಲ್ಲವಾದ್ದರಿಂದ ಯಾರ ಗಮನಕ್ಕೂ ಬರುವದಿಲ್ಲ! ಆದ್ದರಿಂದ ಮೊದಲೇ ಎಚ್ಚರ ನೀಡುತ್ತೇನೆ. ನಮ್ಮಲ್ಲಿರುವ ಕೀಟಸಂಪತ್ತಿನ ಕುರಿತು ಯಾರಲ್ಲಿಯೂ ಬಾಯಿ ಬಿಡಕೂಡದು ! ಬಚ್ಚಿಟ್ಟ ಬೆಳ್ಳಿ, ಬಂಗಾರ ಮುತ್ತು, ರತ್ನ, ಆಸ್ತಿ–ಪಾಸ್ತಿಗಳಿಗಾಗಿ ಆದಾಯಕರ ಇಲಾಖೆಯವರು ಸಂದೇಹಾಸ್ಪದ ಜನರ ವಾಸ ಸ್ಥಾನಗಳ ಮೇಲೆ ದಾಳಿ ಮಾಡುವಂತೆ ಶೀಘ್ರದಲ್ಲಿ ಈ ಅಪೂರ್ವ ಕೀಟ ಸಂಗ್ರಹಕ್ಕಾಗಿ ದಾಳಿ ಪ್ರಾರಂಭವಾದರೆ ಆಶ್ಚರ್ಯವೇ ಇಲ್ಲ!'' ಎನ್ನುತ್ತ ಪೆಟ್ಟಿಗೆಗಳನ್ನು ತೆರೆಯಲಾರಂಭಿಸಿದರು.

''ಇಕೋ ! ಈ ಜಿಟ್ಟೆ ನೋಡು, ಜಗತ್ತಿನಲ್ಲೇ ಅತಿ ವಿರಳವಾದ ಜಾತಿಯದು. ಬಂಗಾರದಲ್ಲಿ ತುಲಾಭಾರ ಮಾಡಬೇಕಾದದ್ದು ! ಮತ್ತೆ ಈ ಜೀರುಂಡೆ; ಅಮೇರಿಕೆಯ ಸೂರ್ಚಿಪರ್ಣಿ ವೃಕ್ಷಗಳನ್ನು ಭಕ್ಷಿಸುವ ಕೀಟಗಳನ್ನು ನಿಯಂತ್ರಿಸುತ್ತದೆ. ಈ ಜೈವಿಕ ನಿಯಂತ್ರಣ ಪ್ರಯೋಗಕ್ಕಾಗಿ ಇದರ ಸಂತಾನಕ್ಕೆ ವಿಪರೀತ ಬೇಡಿಕೆ ! ಚಿನ್ನದ ಮೊಟ್ಟೆಯಿಡುವ ಕುಕ್ಕುಟ ಎಂದೇ ತಿಳಿ ! ಅನುಕೂಲ ಕೂಡಿ ಬಂದಾಗ ಅವುಗಳ ಸಂತಾನಾಭಿವೃದ್ಧಿ ಕೈಕೊಂಡು ಅಮೇರಿಕೆಗೆ ಅವನ್ನು ರಫ್ತು ಮಾಡಿ ಕೈತುಂಬ ಸಂಪಾದನೆ ಮಾಡಬೇಕು ಎಂದು ಕನಸು ಕಟ್ಟಿದ್ದೇನೆ.... ಈಜಿಪ್ತಿನ ಕ್ಲಿಯೋಪಾತ್ರಳಿಗೂ ಮುಜುಗರ ಉಂಟಿಸುವ ಸುವರ್ಣಾಭರಣಗಳನ್ನು ನಿನಗೆ ತೋಡಿಸುತ್ತೇನೆ'' ಎಂದು ಅಭಿಮಾನದಿಂದ ನುಡಿದರು. ''ಕ್ಲಿಯೋಪಾತ್ರಳ ಆಭರಣಗಳು ಅಷ್ಟೊಂದು ವೈಶಿಷ್ಟ್ಯಪೂರ್ಣವಾದವೆ ?'' ಎಂದು ಆತಂಕದಿಂದ ವಿಚಾರಿಸಿದಾಗ, ಅಲ್ಲವೇ ಮತ್ತೇ ? ಕೈರೋ ವಸ್ತು ಸಂಗ್ರಹಾಲಯದಲ್ಲಿ ಅವನ್ನು ಕಣ್ಣಾರೆ ಕಂಡಿದ್ದೇನೆ ! ಸುವರ್ಣದಲ್ಲಿ ಜೀರುಂಡೆಗಳನ್ನು ನಿರ್ಮಿಸಿ, ವಜ್ರ–ವೈಢೂರ್ಯಗಳಿಂದ ಕೆಚ್ಚಿ ಕೊರಳ ಸರಗಳನ್ನು ಕಲಾತ್ಮಕವಾಗಿ ರಚಿಸಿದ್ದಾರೆ. ಇಂದು ಅಂಥ ಒಂದೇ ಒಂದು ಸರ ನಿರ್ಮಿಸಲು ಕನಿಷ್ಠ ೧೦ ಲಕ್ಷ ರೂಪಾಯಿ ಬೇಕು.... ಎನ್ನುತ್ತಿದ್ದಂತೆ, ''ಅವು ನಿಜವಾದ ಕೀಟಗಳಲ್ಲವಲ್ಲ ! ಆದ್ದರಿಂದ ನನಗೂ ಅಂಥ ಕಂಠಾಭರಣ ಧರಿಸುವ ಆಸೆ ! ರಾಯರು ಮಾಡಿಸಿದ್ದು ! ಎಂದು ತೊಟ್ಟು ಅಭಿಮಾನದಿಂದ ಮೆರೆಯುತ್ತೇನೆ!'' ಎಂದು ಮುಗ್ಧತೆಯಿಂದ ನುಡಿದಾಗ ''ಕೀಟ ವ್ಯಾಪಾರದಿಂದ ಕೋಟಿಗಳಿಸುವ ಸಂದರ್ಭ ಬಂದಲ್ಲಿ ಖಂಡಿತ ಎರಡಳೆಯ ಜೀರುಂಡೆಯ ಸರ ಮಾಡಿಸುತ್ತೇನೆ ! ಎಂದು ಖಚಿತ ವಾಗ್ದಾನ ಮಾಡಿದಾಗ ಉಬ್ಬಿ ಹೋಗಿದ್ದೆ.

ಸಾಯಂಕಾಲ. ತಮ್ಮ ಕೃಷಿ ವಿಶ್ವ–ವಿದ್ಯಾಲಯದ ಆಸ್ತಿ–ಪಾಸ್ತಿ ಚಟುವಟಿಕೆಗಳ ಕಲ್ಪನೆ ಕೊಡಲು, "ವಿಹಾರ"ಕ್ಕೆ ಕರೆದೊಯ್ದರು. ಜೋಬನೇರದ ಹಳ್ಳಿಗೆ ಹೊಂದುವ ಯಾವ ಸೀರೆ–ರವಿಕೆ ಧರಿಸಲಿ ? ಎಂದು ಯೋಚಿಸುತ್ತಿದ್ದಾಗ, " ನಿನ್ನನ್ನು ಅಲ್ಲಿ ಯಾರೂ ನೋಡುವದಿಲ್ಲ ! ಆ ಪ್ರಾಣಿ ಪ್ರಪಂಚವನ್ನು ನೀನೇ ಕಣ್ಣಾರೆ ನೋಡಬೇಕು! ಎಂದು ಹಾಸ್ಯ ಮಾಡಿದರು. ಯಥೇಚ್ಛ ತಿಂದುಂಡು ಆನೆಗಳಂತೆ ಬೆಳೆದು ನಿಂತಿದ್ದ ಗೋವುಗಳನ್ನು ನೋಡಿ ತಬ್ಬಿಬ್ಬಾದೆ. (ಕರಾವಳಿಯ ಆಡುಗಳಂತಹ ಆಕಳು ನೋಡಿದಾಕೆ ನಾನು!) ರಾಯರು 'ಗುಲಾಬ್ ಸಿಂಗ್, ಸುಖವಾಗಿದ್ದೀಯಾ? ದನಕರುಗಳ ಉಣ್ಣೆ ಕಾಟ ಹೇಗಿದೆ?" ಎಂದು ವಿಚಾರಿಸಿದರು. "ನಿಮ್ಮ ನಿವಾರಣೋಪಾಯದಿಂದ ಈಗ ನಿಯಂತ್ರಣಗೊಂಡಿದೆ. ಬಾಬೂಜಿ!" ಎಂದು ವಿನಯದಿಂದ ಉತ್ತರಿಸಿದ. ಮುಂದೆ ಕುಕ್ಕುಟ ರಾಜ್ಯಕ್ಕೆ ಹೋದೆವು. ಅಲ್ಲಿಯ ಅಧಿಪತಿ, ಭಂವರ್ ಲಾಲ್‌ನಿಗೆ "ಕೋಳಿಗಳ, ಹೇನು–ಬಾಧೆ ಹೇಗಿದೆ ? ಎಂದು ಕೇಳಿದರು. " ಈಗ ಅದೆಷ್ಟೋ ವಾಸಿ !" ಎಂದು ಆತ ಉತ್ತರಿಸಿದ. ಮೊಣಕೈ ಉದ್ದದ ಬೆಂಡೆಕಾಯಿ, ಹಾಲುಗುಂಬಳದ ಅಳತೆಯ ಬದನೆಕಾಯಿ, ಭಾರವಾಗಿ ಬೆಳೆದು ನಿಂತ ಕೋಸು, ಅರೆಯುವ ಕಲ್ಲಿನ ಆಕಾರದ ಹೂಗೋಸು, ಬಂಗಾರದ ತೆನೆಯಂತೆ ಹೊಳೆಯುತ್ತಿದ್ದ ಗೋದಿಯ ತೆನೆಗಳನ್ನು ಹೊತ್ತು ನಿಂತ ಹೊಲಗಳು, ಕಣ್ಣಿಗೆ ಹಬ್ಬವುಂಟು ಮಾಡಿದವು.

ಅಡಿಗೆ ಮನೆಯಲ್ಲಿ ನನ್ನ ಕೈಗೆ ಸುಲಭವಾಗಿ ಎಟುಕದಷ್ಟು ಎತ್ತರದ ನಾಗೊಂದಿಗೆಯ ಮೇಲೆ ಗಾಜಿನ ಭರಣಿಗಳನ್ನು ಸಾಲಾಗಿ ಜೋಡಿಸಿಟ್ಟಿದ್ದರು. ಒಮ್ಮೆ ಸ್ಟೂಲು ಹತ್ತಿ ಅವನ್ನು ಇಳಿಸಲು ಯತ್ನಿಸುವಷ್ಟರಲ್ಲಿ ರಾಯರು ಪ್ರತ್ಯಕ್ಷರಾದರು ! "ಮುಟ್ಟಬೇಡ, ಅವುಗಳಲ್ಲಿರುವ ಕೀಟಗಳನ್ನು ಕ್ರಮವಾಗಿ ಅರ್ಥೈಸುತ್ತಿದ್ದೇನೆ" ಎಂದರು. ವಿವಿಧ ಬಾಟ್ಲಿಗಳಲ್ಲಿದ್ದ ಕೀಟ ಧನವನ್ನು ಪರಿಚಯಿಸಲಾರಂಭಿಸಿದರು. "ಇದು ಪಚ್ಚೆಸರಿನ ಕೀಟ. ಕಾಳುಗಳ ಮೇಲೆ ಮೂರು–ನಾಲ್ಕು ಮೊಟ್ಟೆ ಇಡುತ್ತದೆ. ಅವುಗಳಿಂದ ಹೊರ ಬಂದ ಕೀಟ ಮರಿಗಳು ಒಳಸೇರಿ ಪಿಷ್ಟ ಪದಾರ್ಥವನ್ನೆಲ್ಲ ತಿಂದು ದಷ್ಟಪುಷ್ಟವಾಗಿ ಬೆಳೆದು ಕಾಳನ್ನು ಪೋಲು ಮಾಡುತ್ತವೆ. ಸಕಾಲದಲ್ಲಿ ಸಂಗ್ರಹವನ್ನು ಪರೀಕ್ಷಿಸದಿದ್ದರೆ, ಏನೂ ಉಳಿಯುವದಿಲ್ಲ ! ಇಲ್ಲಿ ನೋಡು, ವಟಾಣೆ ಕಾಳಿನಿಂದ ಹೊರಬಂದ ಕೀಟಗಳು, ಪ್ರಣಯದಾಟ ನಡೆಸಿವೆ ! ಮತ್ತೆ ಈ ಅಕ್ಕಿ–ಕೀಟಗಳು ತಮ್ಮ ಎಂಜಲಿನಿಂದ ಹೊರ ಹೊಮ್ಮಿಸಿದ ರೇಶಿಮೆಯಂಥ ಎಳೆಯಿಂದ ಹತ್ತಾರು ಕಾಳುಗಳನ್ನು ಜೋಡಿಸಿ ಅದರಲ್ಲಿ ಮೊಟ್ಟೆ ಇಟ್ಟು ಮರಿ ಮಾಡುತ್ತವೆ. ಮೈದಾ, ಗೋದಿ ಹಿಟ್ಟುಗಳಲ್ಲಿ ಬರಿಗಣ್ಣಿಗೆ ಕಾಣಿಸದ ಸೂಕ್ಷ್ಮ ಕೀಟಗಳು ಅಸಂಖ್ಯ ಪ್ರಮಾಣದಲ್ಲಿರುತ್ತವೆ... ಎಂದೆಲ್ಲ ಹೇಳುತ್ತಿರುವಾಗಲೇ ಅವುಗಳ ಬಗ್ಗೆ ಜಿಗುಪ್ಸೆ ಉಂಟಾಗಿ..." ಇವುಗಳೆಲ್ಲ ನನ್ನ ಅಡಿಗೆ ಮನೆಯಲ್ಲಿ ಬೇಡವೇ ಬೇಡ ! ನಿಮ್ಮ ಅಧ್ಯಯನ ಕೊಠಡಿಗೆ ವರ್ಗಾಯಿಸಿ ! ಎಂದು ದೃಢ ನಿರ್ಧಾರದ ಧ್ವನಿಯಲ್ಲಿ ಹೇಳಿದಾಗ, ರಾಯರು ಬೆಚ್ಚಿದರೂ, ಆಯಿತು. ಮಹಾರಾಯತಿ !" ಎಂದು ಆ ಕೂಡಲೇ ಕಾರ್ಯೋನ್ಮುಖರಾದರು.

ರಾಯರು ತಂದಿಟ್ಟ ಧಾನ್ಯಗಳು, ಕೀಟ ಪೀಡಿತವೆಂದು ತರಕಾರಿಗಳನ್ನು ತರಿಸಿದೆ. ಕೈಚೀಲದಿಂದ ತೆಗೆದ ತರಕಾರಿ ದರ್ಶನದಿಂದಲೇ ಪಿತ್ತ ನೆತ್ತಿಗೇರಿತು. ಎರೆ ಹುಳುವಿನಂತೆ ಸುತ್ತಿಕೊಂಡಿದ್ದ ಬೆಂಡೆಕಾಯಿ, ಹಾವಿನಂತೆ ಅಕರಾಳ–ವಿಕರಾಳವಾಗಿದ್ದ ಬದನೆಕಾಯಿ, ಮೈ–ಕೈಗೆಲ್ಲ ಕಜ್ಜಿಯಾಗಿದ್ದ ಗಜ್ಜರಿ, ಕೋಸು ! “ ಅಲ್ರಿ, ಕಣ್ಣು ಬಿಟ್ಟು ನೋಡಿಯೇ ಈ ತರಕಾರಿ ತಂದಿದ್ದೀರಿ ತಾನೆ ? ಎಂಬ ವ್ಯಂಗ್ಯ ಪ್ರಶ್ನೆಗೆ “ ಹಾಗಲ್ಲ ಕಣೆ ! ಇದ್ದ ಒಂದೇ ಜೋಡಿ ಕಣ್ಣನ್ನು ಹತ್ತು ಮಾಡಿ, ನೋಡಿಯೇ ನಾನೇ ಆರಿಸಿದ್ದೇನೆ...” ಎಂಬ ವಿವರಣೆ ಬಂದಿತು. ನನ್ನ ಸಿಟ್ಟು ಇನ್ನಷ್ಟು ಹೆಚ್ಚಿತು. “ತರಕಾರಿಯವನಿಗೇ ಆರಿಸಲು ಹೇಳಿದ್ದರೆ, ಅರ್ಧದಷ್ಟಾದರೂ ಒಳ್ಳೆಯ ತರಕಾರಿ ಸಿಗುತ್ತಿತ್ತೋ ಏನೋ ! ಎಂದೆ. “ನನ್ನಂತೆ ನೀನು ಕೀಟ ಶಾಸ್ತ್ರ ಅಭ್ಯಸಿಸಿದ್ದರೆ, ನೀನೂ ಹೀಗೆಯೇ ಮಾಡುತ್ತಿದ್ದಿ. ಕೃಷಿ ವಿಶ್ವವಿದ್ಯಾಲಯದ ಫಾರ್ಮಿನಲ್ಲಿ ಬೆಳೆ, ಹುಲುಸಾದ ಕೀಟ ರಹಿತ ತರಕಾರಿ ನೋಡಿರುವಿ ಎಂದು ಗೊತ್ತು ! ಆದರೆ ಅವುಗಳ ಆಕರ್ಷಣೆಯೆಲ್ಲ ಬಳಸಿದ ರಾಸಾಯನಿಕ ಗೊಬ್ಬರ ಮತ್ತು ಸಿಂಪಡಿಸಿದ ಅತ್ಯಂತ ವಿಷಕಾರಿ ಕೀಟನಾಶಕಗಳಿಗೆ ಸೇರಿ ಹೋಗುತ್ತದೆ. ಅವುಗಳ ಸೇವನೆ, ಅನಾರೋಗ್ಯಕ್ಕೆ ಆಮಂತ್ರಣವಿತ್ತಂತೆ ! ನಾನು ತಂದ ಈ ತರಕಾರಿಯಲ್ಲಿ ಕೀಟಗಳು ಸುಖವಾಗಿ ವಾಸ ಮಾಡಿದ್ದರಿಂದ, ಅವುಗಳ ಮೇಲೆ ರಾಸಾಯನಿಕಗಳ ರಾಮಬಾಣ ಪ್ರಯೋಗವಾಗಿಲ್ಲ ಎಂಬುದು ಖಚಿತ ! ಅಕಸ್ಮಾತ್ ಒಂದೆರಡು ಕೀಟಗಳು ಉದರಕ್ಕೆ ಇಳಿದರೂ ಅದರಿಂದ ಯಾವ ಹಾನಿಯೂ ಇಲ್ಲ. ಜನಸಂಖ್ಯೆ ಬೆಳೆಯುತ್ತಲೇ ಇರುವದ ರಿಂದ, ಕೀಟಗಳನ್ನೇ ಆಹಾರವಾಗಿ ಸೇವಿಸುವ ದಿನಗಳು ಮುಂದೊಮ್ಮೆ ಬರಲಿವೆ !” ಎಂದು ದೀರ್ಘ ವಿವರಣೆ ಕೊಟ್ಟರು. “ ಅದೇನೇ ಇರಲಿ. ಇಂಥ ತರಕಾರಿ ಮುಟ್ಟುವ ನನಗೆ ಅಳುಕು. ಅದನ್ನು ನೀವೇ ತೊಳೆದು, ಕೀಟಗಳನ್ನು ಕಳೆದು ಹೆಚ್ಚಿಕೊಡಿ!” ಎಂದು ಅವರಿಗೆ ಕೆಲಸ ಹಚ್ಚಿದೆ. ಮುಂದೆ ಇದೇ ನೆವ ಮಾಡಿ ತರಕಾರಿ ತಂದಾದ ಮೇಲೆ ತೊಳೆದು ಹೆಚ್ಚಿ ಕೊಡುವ ಕೆಲಸ ಅವರಿಗೇ ಮೀಸಲಾಯಿತು ಎಂದು ಬೇರೆ ಹೇಳಬೇಕಿಲ್ಲವಷ್ಟೇ ?

ನನ್ನ ಅತ್ಯಮೂಲ್ಯ ಇತಿಹಾಸ ಗ್ರಂಥಗಳಿಂದ ಹುಡಿ ಉದುರಲಾರಂಭಿಸಿತು ! ಕೀಟ ಪಂಡಿತರನ್ನು ಕೂಗಿ ಕರೆದು ತೋರಿಸಿದೆ. “ ಇದೇನು ಮಹಾ ! ಮಾನವರಲ್ಲಿ ಪುಸ್ತಕ ಕೀಟಗಳಿರುವಂತೆ ಕೀಟ ಲೋಕದಲ್ಲಿ ಗ್ರಂಥ ಷಟ್ಪಾದಿಗಳಿವೆ ! ಮಾನವನು ಓದು–ಬರಹಗಳನ್ನು ಪ್ರಾರಂಭಿಸುವ ಕೋಟ್ಯಾಂತರ ವರ್ಷಗಳ ಪೂರ್ವದಿಂದಲೇ ಇವು ಕಾಣಿಸಿಕೊಂಡಿವೆ! ಮನುಷ್ಯನಿಗಿಂತ ನಿಕಟವಾಗಿ, ಮೊದಲಿನಿಂದ ತಾಳೆಗರಿಗಳೊಂದಿಗೆ ನಿಕಟಸಂಪರ್ಕ ಬೆಳೆಸಿಕೊಂಡಿದ್ದವು ! ಮಾನವನಂತೆಯೇ ಮಳೆ, ಚಳಿ, ಬಿಸಿಲುಗಳಿಗೆ ಮೈಯೊಡ್ಡುವ ಬದಲಿಗೆ, ಸುಭದ್ರವಾದ ಕಪಾಟುಗಳಲ್ಲಿ ಈಗ ಬೀಡು ಬಿಟ್ಟಿವೆ. ಈ ಪ್ರವೃತ್ತಿಯಲ್ಲಿ ತಪ್ಪೇನಿದೆ ? ಅವು ನಿನ್ನ ಪುಸ್ತಕಗಳ ಹೊರ ಕವಚ, ಬೆನ್ನೆಲುವುಗಳಲ್ಲಿ ಛಿದ್ರ ಮಾಡಿದರೂ ಅವುಗಳಲ್ಲಿದ್ದ ಘಟನೆಗಳನ್ನು ತಿಂದು ತೇಗುವದಿಲ್ಲವಲ್ಲ!” ಎಂದು ತನ್ನ ಕೀಟ ಬಾಂಧವ್ಯ–ಪ್ರೀತಿ ತೋರ್ಪಡಿಸಿದಾಗ, ಅವರ ಬೆನ್ನಿಗೊಂದು ಗುದ್ದುವದನ್ನು ಬಿಟ್ಟು ಇನ್ನೇನು ಮಾಡಲು ಸಾಧ್ಯವಿತ್ತು?

ಒಂದು ರಾತ್ರಿ ಸರ್ ಸರ್! ಭರ್ ಭರ್ ಎಂದು ಸದ್ದು ಪ್ರಾರಂಭವಾದಾಗ, ಸುಖ ನಿದ್ರೆಯಲ್ಲಿದ್ದ ರಾಯರು ದಿಗ್ಗನೆದ್ದು, ದೀಪ ಹಾಕದೇ ಕೈಯಲ್ಲಿ ಟಾರ್ಚ್ ಹಿಡಿದು ಬೆಡ್ ರೂಂ, ಶೋಧಿಸಲಾರಂಭಿಸಿದರು. ಏನೋ ಅಪರೂಪದ ಅವಕಾಶ ಕಳೆದುಕೊಳ್ಳಬೇಡ, ಎನ್ನುವವರಂತೆ, ಬಡಿದೆಬ್ಬಿಸಿದರು. ಟಾರ್ಚ್ ಬೆಳಕಿನಲ್ಲಿ ಜೊಂಡಿಗ ಸಂಸಾರವನ್ನು ಕಂಡು ಕಿರುಚಿಕೊಳ್ಳುವಂತಾಯಿತು. ''ಶ್ ! ಶ್ ! ಸುಮ್ಮನಿರು ! ಅವುಗಳ ಪ್ರಣಯ ಪ್ರಸಂಗಕ್ಕೆ ಆತಂಕ ಮಾಡಬೇಡ'' ಎಂದು ಪಿಸುಮಾತಿನಲ್ಲಿ ಹೇಳಿದರು. ಜೊಂಡಿಗ– ಶೃಂಗಾರ ವೀಕ್ಷಣೆಯ ರಸಿಕ ಶಿರೋಮಣಿಗಳೇ'' ಎಂದು ಮೂದಲಿಸಿದೆ. ''ಕಾಮ ಚೇಷ್ಟೆಗಳೆಲ್ಲ ಕೇವಲ ಮಾನವರ ಸೊತ್ತು ಎಂದು ಬಗೆದೆಯಾ ? ಋತುಸ್ನಾನವಾದ ಜಿರ್ಲೆ ಕುಮಾರಿಯ ಮೈಯಿಂದ ಹೊರಸೂಸುತ್ತಿರುವ ಸುಗಂಧಕ್ಕೆ ಆಕರ್ಷಿತನಾಗಿ ಜೋಂಡಿಗ ರಾಜಕುಮಾರ ಧಾವಿಸಿಬಂದಿದ್ದಾನೆ. ಸತತವಾಗಿ ಮೀಸೆ ಅಲ್ಲಾಡಿಸುತ್ತ ಅವಳನ್ನು ಆಘ್ರಾಣಿಸುತ್ತ ಮುಂದುವರಿಯುತ್ತಿದ್ದಾನೆ. ನೋಡು !'' ಎಂದರು. ''ಓಹ್ ! ಗಂಡು– ಹೆಣ್ಣು ಎಂದು ಈ ಕತ್ತಲೆಯಲ್ಲಿ ಕೀಟ ಪಂಡಿತರು ಹೇಗೆ ಗುರುತಿಸಿದರೋ !'' ನನ್ನ ಕೊಂಕು. ''ಹೆಣ್ಣಿನ ಹೊಟ್ಟೆ ನೋಡಲ್ಲ ! ಮೊಟ್ಟೆಗಳನ್ನು ತುಂಬಿಕೊಂಡು ಊದಿ ಕೊಂಡಿದೆ. ಕುಕ್ಕುಟಗಳಂತೆ ಹೆಣ್ಣು ಕೀಟಗಳೂ ಗಂಡಿನೊಡನೆ ಕೂಡಿಕೊಳ್ಳುವ ಮುನ್ನವೇ ಭಾವೀ ಪೀಳಿಗೆಯನ್ನು ಬರಮಾಡಿಕೊಳ್ಳುವ ಸಕಲ ಸಿದ್ಧತೆಗಳನ್ನು ಮಾಡಿ ಕೊಂಡಿ ರುತ್ತವೆ....... ಸಂಭೋಗದಲ್ಲಿ ಜಿರ್ಲೆ ಕುಮಾರಿಯನ್ನು ಬಿಗಿದಪ್ಪಲು ಗಂಡಿಗೆ ಒಂದು ಜೋಡಿ ಹೆಚ್ಚಿನ ಬಾಹುಗಳಿವೆ. ತಿಳಿದುಕೊಳ್ಳಲು ಇಷ್ಟು ಸಾಕು ! ''ಜಿರಳೆ ಕೀಟ ಶರೀರ ವಿಜ್ಞಾನವನ್ನು ರಾಯರು ಸ್ವಲ್ಪದರಲ್ಲಿ ತಿಳಿಯ ಪಡಿಸಿದರು.

ನೋಡ ನೋಡುತ್ತಿದ್ದಂತೆ ಗಂಡು, ಉದ್ದ ಮೀಸೆಗಳಿಂದ ಹೆಣ್ಣಿನ ಅಂಗಾಂಗ ಗಳನ್ನು ಸ್ಪರ್ಶಿಸಲಾರಂಭಿಸಿತು. ಜೊಂಡಿಗ ಜೋಡಿಗೆ ತಮ್ಮ ಪಿಸು ಮಾತು ಕೇಳಿಸ ಬಾರದು ಎಂಬ ಎಚ್ಚರಿಕೆಯ ಮೆಲು ಪಿಸುಮಾತಿನಲ್ಲಿ ''ಜಿರ್ಲೆ ಕುವರಿ, ನೀ ಬಲು ಸುಂದರಿ, ಎಷ್ಟು ಡೌಲು ಮೈಯ್ಯಾರಿ !'' ಎಂದರು. ಅದಕ್ಕೆ ಸರಿ ಹೊಂದುವಂತೆ ಜಿರಳೆ ಕಾಮಣ್ಣ, ತನ್ನೆರಡು ಗರಿ ಬಿಚ್ಚಿ ನವಿಲಿನ ವೈಯ್ಯಾರದಿಂದ (!) ನೃತ್ಯ ಪ್ರಾರಂಭಿಸಿತು. ಈ ಕೇಕೆಗೆ ಮರುಳಾದ ಕೀಟ ಕನ್ಯೆ, ತನ್ನ ಜನನೇಂದ್ರಿಯ ಹಿಗ್ಗಿಸಿ ಸ್ನೇಹಿತನನ್ನು ಸ್ವಾಗತಿಸಿದಳು. ಕ್ಷಣಾರ್ಧದಲ್ಲಿ ಗಂಡು–ಹೆಣ್ಣು ಒಂದಾಗಿದ್ದವು. ಈ ನೋಟವನ್ನು ಸಹಿಸಲಾಗದ ಇನ್ನೊಬ್ಬ ಜೊಂಡಿಗ ಖಳನು ತನ್ನ ಉದ್ದ ಮೀಸೆಗಳನ್ನು ಭರ್ಚಿಯಂತೆ ತಿರುಗಿಸುತ್ತ ಹತ್ತಿರಕ್ಕೆ ಬರುತ್ತಿದ್ದಂತೆ ಪ್ರೇಮ ಬಂಧಿತ ಜೋಡಿ ಅರೆಕ್ಷಣದಲ್ಲಿ ಕಾಲಿಗೆ ಬುದ್ಧಿ ಹೇಳಬೇಕೆ ? ಜೀವದಾಸೆಗೆ ಅವು ಮಾಯವಾದ ಪರಿ ನೋಡಿ ಕನಿಕರವೆನಿಸ ದಿರಲಿಲ್ಲ ''ಪಾಪ ! ಅವಕ್ಕೂ ಆಸೆ–ಆಕಾಂಕ್ಷೆಗಳು ಇರುತ್ತವೆ. ತೀರ ಅಸಹಾಯಕ ಸ್ಥಿತಿಯಲ್ಲಿ ಅವನ್ನು ಆಹುತಿ ತೆಗೆದುಕೊಳ್ಳುವುದು, ಬುದ್ಧಿಜೀವಿ ಎಂದು ಕರೆಸಿಕೊಳ್ಳುವ ಮಾನವನಿಗೆ ಗೌರವ ತರುವಂತಹದಲ್ಲ! ಎಂದು ನನ್ನಲ್ಲಿ ಬೌದ್ಧಿಕ ಜಾಗೃತಿಯನ್ನುಂಟು ಮಾಡುತ್ತಿದ್ದಂತೆ ಅಲ್ಲಿ ನೆರೆದಿದ್ದ ಜೊಂಡಿಗಗಳೆಲ್ಲ ಕಣ್ಮರೆಯಾಗಿ ಬಿಟ್ಟಿದ್ದವು !

ಮರುದಿನ ಮುಂಜಾನೆ ನಾಶ್ತಾ ತಯಾರಿ ಮಾಡುತ್ತಿದ್ದಾಗ ಹೆಣ್ಣು ಜಿರಳೆಯೊಂದು ತನ್ನ ಮೊಟ್ಟೆಗಳ ಚೀಲ ಹೊತ್ತು ಅತ್ತಿತ್ತ ಅಲೆದಾಡುವುದು ಕಂಡಿತು. ಅದನ್ನು ಕಂಡ ರಾಯರು, ''ಅದರ ಚೀಲದಲ್ಲಿ ಹದಿನಾರು ಮೊಟ್ಟೆಗಳಿರುತ್ತವೆ. ಅತ್ಯಂತ ಸುರಕ್ಷಿತ ಸ್ಥಳದಲ್ಲಿ ಓಡಾಡಿ, ಯಾವುದಾದರೂ ಕತ್ತಲ ಸಂದಿಯಲ್ಲಿ ಓಡಾಡಿ ಈ ಜಿರಳೆ ಎಲ್ಲಾದರೂ ಸುರಕ್ಷಿತ ಸ್ಥಳದಲ್ಲಿ ಚೀಲವನ್ನು ಅಂಟಿಸಿ ಸುರಕ್ಷಿತತೆಗಾಗಿ ಸುತ್ತಮುತ್ತಲಿನ ಸುಣ್ಣ–ಮಣ್ಣಿನಿಂದ ಮುಚ್ಚಿ ಬಿಡುತ್ತದೆ. ಹೊರ ಬಂದ ಮರಿಗಳಿಗೆ ಗರಿಗಳು ಇಲ್ಲದಿದ್ದರೂ, ಉಳಿದೆಲ್ಲ ರೀತಿಯಲ್ಲಿ ಅವು ಪಾಲಕರನ್ನೇ ಹೋಲುತ್ತವೆ..... ಒಂದು ಹೆರಿಗೆಯಲ್ಲಿ ಹದಿನಾರು ಮೊಟ್ಟೆಗಳು ಇರುವದರಿಂದ ಅವುಗಳ ಸಂತಾನ ಬಲು ಬೇಗ ವರ್ಧಿಸುತ್ತದೆ... ಎಂದು ಹೇಳುವಷ್ಟರಲ್ಲಿ ನಡುವೆಯೇ ಬಾಯಿ ಹಾಕಿ ಮನೆ ತುಂಬ ಜಿರಳೆಗಳ ವಾಸ ! ಅವುಗಳ ಮಲ–ಮೂತ್ರ ವಿಸರ್ಜನೆಯ ದುರ್ನಾತ ಅಸಹ್ಯವಾಗಿದೆ ! ಅವನ್ನು ನೋಯಿಸದೆಯೇ ನಿಯಂತ್ರಿಸಬಾರದೇ ? ಎಂದು ಕೇಳಿಕೊಂಡೆ. ''ಯಾವ ಮನೆಯೂ ಜಿರಳೆಗಳಿಂದ ಮುಕ್ತವಾಗಿಲ್ಲ. ಅವುಗಳನ್ನು ನಿಯಂತ್ರಿಸಲು ಕಂಡು ಹಿಡಿದ, ಬಳಸುತ್ತಿರುವ ವಿಷೌಷಧಿಗಳು ನಮಗೂ ಎಷ್ಟೊಂದು ಅಪಾಯಕಾರಿ ಎಂದು ಆಧುನಿಕರು ಅರಿತಂತೆ ಇಲ್ಲ! ಮೊನ್ನೆ ಓರ್ವ ಗೃಹಿಣಿ ತನ್ನ ಸ್ವಾನುಭವದಿಂದ, ಜಿರಳೆಗಳನ್ನು ನಿಯಂತ್ರಿಸಲಾಗದಿದ್ದರೆ, ಅವುಗಳ ಪಾಡಿಗೆ ಅವನ್ನು ಬಿಟ್ಟು ಬಿಡಿ ! ಎಂಬ ನಿಜವಾದ ಹಿತೋಕ್ತಿ ಕೊಡ ಮಾಡಿದ್ದಾಳೆ. ಅಮೇರಿಕೆಯಂಥ ಮುಂದುವರಿದ ರಾಷ್ಟ್ರದಲ್ಲಿಯೂ ಜೊಂಡಿಗಗಳ ಸಂಖ್ಯೆ ಅಪಾರವಾಗಿದ್ದು ಅವುಗಳಿಂದ ಮಕ್ಕಳ ಕಾಯಿಲೆಗಳು ಹೆಚ್ಚುತ್ತಿರುವುದನ್ನು ಕಂಡು ಹಿಡಿದಿದ್ದಾರೆ. ನಮಗೆ, ಇತರರಿಗೆ, ಜಿರಳೆಗಳೊಂದಿಗೆ ಸಹಜೀವನ ನಡೆಸುವದೊಂದೇ ನಿರಪಾಯಕಾರಿ ಮಾರ್ಗ !'' ತಮ್ಮ ತೀರ್ಪನ್ನಿತ್ತರು.

ಆದರೆ ಕಾಟ ವಿಪರೀತ ಹೆಚ್ಚಿತು. ಹಾಲು, ಮೊಸರು, ಬೆಣ್ಣೆ ತುಪ್ಪ, ಸ್ವಲ್ಪವೇ ಸಡಿಲಾದ ಮುಚ್ಚಳದ ಡಬ್ಬಗಳಲ್ಲೆಲ್ಲ ಜೊಂಡಿಗೆಗಳು ಭದ್ರವಾದ ಸಾಮ್ರಾಜ್ಯ ಕಟ್ಟಲು ಹವಣಿಸಲಾರಂಭಿಸಿದವು. ಈಗ ಮಾತ್ರ ರಾಯರಿಗೆ ಅವುಗಳ ಹತೋಟಿ ಅನಿವಾರ್ಯವಾಯಿತು. ಕಲೆ ಹಾಕಿದ ಖಾಲಿ ಟೂತ್ ಪೇಸ್ಟ ಡಬ್ಬಗಳನ್ನು ತಂದರು. ಪ್ರತಿಯೊಂದಕ್ಕೂ ಮಾಟವಾದ ವರ್ತುಲಾಕಾರದ ಕಂಡಿಗಳನ್ನು ಮಾಡಿದರು. ಅವುಗಳ ಒಳಗೆ ಕಾಗದದ ಚೂರು ಸೇರಿಸಿ ಜಿರಳೆಗಳಿಗೆ ಮನೆಗಳನ್ನು ಕಟ್ಟಿ ಹಾಸಿಗೆಯನ್ನು ಸಿದ್ಧಪಡಿಸಿದರು ! ಜಿರಳೆಗಳ ಓಡಾಟದ ಹಾವಳಿ ಹೆಚ್ಚು ಇರುವಲ್ಲಿ ಈ ನಾಲ್ಕಾರು ಮನೆಗಳನ್ನು ಇರಿಸಿದರು. ಇವು ಜಿರಳೆಗಳಿಗೆ ಅತ್ಯಂತ ನೆಮ್ಮದಿ ನೀಡುವ ಸುಖ ನಿವಾಸಗಳು! ಎಂದು ಘೋಷಿಸಿದರು. ರಾಯರ ಸಂಶೋಧನೆ ಹುಸಿ ಹೋಗಲಿಲ್ಲ. ಕೆಲ ದಿನಗಳ ಬಳಿಕ ಪ್ರತಿಯೊಂದು ಪೆಟ್ಟಿಗೆಯನ್ನು ತೆರೆದು ತೋರಿಸಿದಾಗ ಪ್ರತಿಯೊಂದರಲ್ಲೂ ಹತ್ತಿಪ್ಪತ್ತು ಜಿರಳೆಗಳು ಕಾಗದದ ಚೂರುಗಳಲ್ಲಿ ಮರೆಮಾಚಿದ್ದವು. ಹೊರ ಜಗಲಿಯಲ್ಲಿ ''ಜಿರ್ಲೆ ನಿವಾಸ್''ಗಳನ್ನು ಒಂದೊಂದಾಗಿ ತಂದು, ಜಾಗ್ರತೆ ಒಂದೊಂದಾಗಿ ಬೀಳಿಸಿ ಅವು ಅತ್ತಿಂದಿತ್ತ ಧಾವಿಸಿದಾಗ ತಾಂಡವ ನೃತ್ಯ ಮಾಡುತ್ತ ಕಾಲಿನಿಂದ ಮೆಟ್ಟಿ, ಯಮ ಸದನಕ್ಕೆ ಕಳಿಸಿದರು. ಮರಿಗಳಿಗೆ ಕಥಕ್ಕಳಿ ಹಾಗೂ ಮೊಟ್ಟೆಗಳಿಗೆ ಮಣಿಪುರಿ ಪ್ರಕಾರಗಳನ್ನು

ಮೀಸಲು ಇಟ್ಟರು. ಕಣ್ಣು ತಪ್ಪಿಸಿ ಗೋಡೆಗೇರಿದವನ್ನು ಕೈಯಲ್ಲಿದ್ದ ಚರ್ಮದ ಪಟ್ಟಿಯಿಂದ ಮುಂದಾಗಿಯೇ ವೈಕುಂಠಕ್ಕೆ ಅಟ್ಟಿದರು.

ಇನ್ನು ಈ ಜಿರಳೆಗಳ ಕಳೇಬರಹಗಳ ಸದುಪಯೋಗ ಮಾಡುವಲ್ಲಿ ರಾಯರ ಪ್ರಯೋಗ ಅಪೂರ್ವದ್ದೆಂದು ಹೇಳಲೇಬೇಕು ! ಮನೆಯಲ್ಲಿ ಅವರೇ ನಿರ್ಮಿಸಿದ ಚಿಕ್ಕ ಕೈತೋಟದಲ್ಲಿ ಕೆಂಪು ಇರವೆಗಳು ತಮ್ಮ ಸಂತಾನ ಕೋಟಿಯನ್ನು ಏಕಪ್ರಕಾರವಾಗಿ ನಿರ್ಮಿಸಿದ್ದವು. ನೆಟ್ಟ ಹೂ ಗಿಡಗಳನ್ನು ಹಾಳುಗೆಡವುದಲ್ಲದೇ ಆಹಾರದ ಕೊರತೆಯೆನಿಸಿದಾಗ ಮನೆಯ ಒಳಗೂ ನುಗ್ಗಿ ಬರಲಾರಂಭಿಸಿದ್ದವು. ಈಗ ರಾಯರು ಸತ್ತ ಜಿರಳೆಗಳನ್ನು ನಾಲ್ಕು ಗುಂಪುಗಳಲ್ಲಿ ವಿಭಾಗಿಸಿದರು. ಇರುವೆ ಸಾಲುಗಳ ಮಾರ್ಗದಲ್ಲಿ ಅವನ್ನು ಇರಿಸಿದರು. ವಿಪುಲವಾದ ಪೌಷ್ಠಿಕ ಮಾಂಸಾಹಾರ ಲಭ್ಯವಿದ್ದ ಸಂತೋಷದ ಸಮಾಚಾರವನ್ನು ಇರುವೆ ಸೈನಿಕರು ಒಬ್ಬರಿಂದೊಬ್ಬರಿಗೆ ಶೀಘ್ರವಾಗಿ ದಾಟಿಸಿದರು ! ಗೂಡಿನಲ್ಲಿದ್ದ ಸಕಲ ಸೈನಿಕ ಪಡೆಯು ಈ ಅಪರೂಪದ ಅವಕಾಶವನ್ನು ಹುಸಿ ಹೋಗಗೊಡದೇ ಆಹಾರದ ವರ್ಗಾವಣೆಗೆ ಸನ್ನದ್ಧವಾಗಿ ಜಿರಳೆಗಳ ಸುತ್ತ ಜಮಾಯಿಸಿತು. ಈ ಅವಕಾಶಕ್ಕಾಗಿ ಕಾದಿದ್ದ ರಾಯರು, ಅವುಗಳ ಮೇಲೆ ಬಿಸಿ ನೀರು ಸುರಿದು ಜಲ ಸಮಾಧಿ ಮಾಡಿಸಿದರು. ಬದುಕುಳಿದವಕ್ಕೆ ಪಂಪಿನಿಂದ ಸೀಮೆಎಣ್ಣೆ ಸೇಚನ ಮಾಡಿದರು. ಯಾವ ವಿಷಕಾರಿ ರಾಸಾಯನಿಕವನ್ನು ಬಳಸದೇ ಹೆಚ್ಚು ಖರ್ಚು ಮಾಡದೇ ಪರಪೀಡೆಗೆ ಹೆಸರಾದ ಜೊಂಡಿಗಗಳನ್ನು, ಇರುವೆಗಳನ್ನೂ ಏಕ ಕಾಲಕ್ಕೆ ನಿಯಂತ್ರಿಸಿದ ರಾಯರ ಕೀಟ ಪಾಂಡಿತ್ಯಕ್ಕೆ ತಲೆದೂಗುವಂತೆ ಆಯಿತು.

ತಮ್ಮ ವಿಜಯೋತ್ಸಾಹದಲ್ಲಿ "ನೋಡು, ಈ ಕೀಟಗಳೇ ಮಾನವರಿಗಿಂತ ಮೇಲು ! ಅವಕಾಶ ಸಿಕ್ಕಲ್ಲಿ ತಿಂದುಂಡು ತೇಗಿ ಸಂತಾನೋತ್ಪತ್ತಿ ಮಾಡುತ್ತ ನೆಮ್ಮದಿಯಾಗಿರುತ್ತವೆ. ಅದಿಲ್ಲ! ಇದಿಲ್ಲ! ಎಂದು ದುಃಖಪಡುವದಿಲ್ಲ! ಮಾನವನು ಅನಾಚಾರ ಮಾಡಿದರೂ ಪ್ರತಿಭಟಿಸದೇ ವೀರ ಸ್ವರ್ಗ ಪಡೆಯುತ್ತವೆ... ಮುಂದಿನ ಜನ್ಮದಲ್ಲಿ ಕೀಟವಾಗಿ ಹುಟ್ಟೋಣವೇ?" ಎಂದು ನನ್ನ ಪ್ರತಿಕ್ರಿಯೆಗೆ ಕಾಯ್ದರು. "ಬೇಡಪ್ಪ ! ಈ ಇರುವೆಯ ಕಷ್ಟ. ಜಿರಲೆಗಳ ತರಲೆಗೆ ನಾನು ತಯಾರಿಲ್ಲ !" ಎಂದೆ. ಹಾಗಾದರೆ ಬಣ್ಣ–ಬಣ್ಣದ ಪಾರತಗಿತ್ತಿಯಾಗಿ ಹೂವಿನಿಂದ ಹೂವಿಗೆ ಹಾರುತ್ತ ಮಧು ಹೀರುವ ವಿಲಾಸ ಜೀವನ ಹೇಗೆ ? ಎಂದರು. "ಪರವಾಗಿಲ್ಲ ! ಆಗ ಜೇನು ಇದ್ದ ದಾಸವಾಳ ಹೂಗಳನ್ನೆಲ್ಲ ನೀವು ನನಗೆ ಮೀಸಲಿಟ್ಟರೆ ಒಪ್ಪಿಗೆ ! ಎಂದಾಗ ಇಬ್ಬರೂ ಮನಸ್ಸಿ ನಕ್ಕೆವು.

■■

# ೨. ಕಾಮಣ್ಣರ ಕೀಟಲೆ !

ಪೋಲೀಸ್ ಖಾತೆಯ ಸಕ್ರಿಯ ಸಹಾಯದಿಂದ ಆಕಾಶವಾಣಿಯಲ್ಲಿ ಪ್ರಸಾರವಾದ ''ಬೀದಿ ಕಾಮಣ್ಣಗಳ ನಿಯಂತ್ರಣ'' ಕಾರ್ಯಕ್ರಮಕ್ಕಾಗಿ ಕೇಳುಗರಿಂದ ಬಂದ ಪ್ರೋತ್ಸಾಹಕಾರಿಯಾದ ಅಸಂಖ್ಯ ಪತ್ರಗಳನ್ನು ನೋಡಿ ಪಟ್ಟಶ್ರಮ ಸಾರ್ಥಕವಾಯಿತು ಅನಿಸಿತು. ಮುಂದೆ ಇಂಥದೊಂದು ರಾಷ್ಟ್ರೀಯ ಕಾರ್ಯಕ್ರಮವನ್ನು ಹಿರಿಯ ಕಾನೂನು ರಕ್ಷಕರೊಂದಿಗೆ ಸೇರಿ, ಪ್ರಸ್ತುತಪಡಿಸಬೇಕು ಎಂದು ಯೋಚಿಸುತ್ತಿದ್ದಾಗಲೇ ಪೊಲೀಸ್ ಆಯುಕ್ತರಾದ ಶಿವಣ್ಣನವರು ಫೋನು ಮಾಡಿ ಈ ವಿಷಯದಲ್ಲಿ ಮಹಿಳೆಯರಿಂದ ಪ್ರತಿ ಕ್ರಿಯೆಯ ಲೆಕ್ಕವಿಲ್ಲದಷ್ಟು ಪತ್ರಗಳು ಬಂದಿದ್ದು, ಈ ಕುರಿತು ಚರ್ಚಿಸಲು ತಮ್ಮ ಆಫೀಸಿಗೇ ಬರುವಂತೆ ವಿನಂತಿಸಿಕೊಂಡರು. ಅವರ ಠಾಕು-ಠೀಕಿನ ಆಫೀಸಿನಲ್ಲಿ ಕಾಲಿಟ್ಟಾಗ, ಸಹೋದ್ಯೋಗಿಗಳೊಂದಿಗೆ ಗಹನವಾದ ವಿಷಯವೊಂದನ್ನು ಚರ್ಚಿಸುತ್ತಿದ್ದವರು, ನಗು ಮುಖದಿಂದ ಬರಮಾಡಿಕೊಂಡರು. ''ಸಜ್ಜನರ ಮುಂದೆ, ಕಳ್ಳ-ಕಾಕರ ಚರ್ಚೆ ಸಲ್ಲ'' ವೆಂದು ಘೋಷಿಸಿ ಸಭೆಯನ್ನು ಬರ್ಖಾಸ್ತ್ ಮಾಡಿದರು. ಕಾಫಿ ತರಿಸಿ, ಉಭಯಕುಶಲೋಪರಿ ಮುಗಿದ ಮೇಲೆ, ಒಮ್ಮೆಲೇ ಗಂಭೀರವದನರಾಗಿ, ''ನಾವು ನಮಾಜು ಮಾಡಲು ಹೋಗಿ ಮಸೀದಿಯನ್ನೇ ಕೊರಳಿಗೆ ಕಟ್ಟಿಹಾಕಿ ಕೊಂಡಂತಾಗಿದೆ ! ಬೀದಿ ಕಾಮಣ್ಣರ ಕಾಟ ತಡೆಯಲು ಹೆಂಗಳೆಯರ ಸಹಕಾರ ಕೋರಿ ಕಳಕಳಿಯ ಮನವಿ ಮಾಡಿಕೊಂಡಿದ್ದೇವಲ್ಲವೇ ? ಕೇಳುಗರಿಂದ ಬಹಳಷ್ಟು ದೂರುಗಳು ಬಂದಿದ್ದರಿಂದ, ಅವನ್ನು ನಗರದ ವಿವಿಧ ವಿಭಾಗಗಳಿಗೆ ಅನುಗುಣವಾಗಿ ವಿಂಗಡಿಸಿ, ಮೊಟ್ಟ ಮೊದಲು ಮಲ್ಲೇಶ್ವರಂ ವಿಭಾಗದ ದೂರುಗಳನ್ನು ಎತ್ತಿಕೊಂಡಾಗ ಅವುಗಳಲ್ಲಿ ನಿಮ್ಮ ಮನೆಯ ನಂಬರಿನ ಕುರಿತಾದ ದೂರುಗಳನ್ನು ನೋಡಿ ದಿಙ್ಮೂಢನಾಗಿದ್ದೇನೆ'' ಎಂದಾಗ '' ಓ! ನನ್ನ ಕಾಡು ಮಲ್ಲೇಶ್ವರ ದೇವರೆ !'' ಅನ್ನುವ ಉದ್ಗಾರ ನನ್ನ ಬಾಯಿಂದ ಹೊರಟಿತು. ಕುಳಿತರೆ ಕುಸಿಯುತ್ತಿದ್ದ ಸೋಫಾ ನೆಲಕ್ಕುರುಳುವುದೊಂದೇ ಬಾಕಿಯಿತ್ತು. ''ಅಯ್ಯಯ್ಯೋ ! ನಾನು ಯಾವಾಗಿನಿಂದ ಬೀದಿ ಕಾಮಣ್ಣಳಾದೆ ಮಾರಾಯ್ರೇ !'' ಸುಧಾರಿಸಿಕೊಂಡು ಕೇಳಿದೆ.

''ನೀವಲ್ಲದಿದ್ದರೆ ನಿಮ್ಮ ಕುಟುಂಬದ ಸದಸ್ಯರನ್ನು ಕುರಿತು ಇವೆಲ್ಲ ದೂರು ಬಂದಿರ ಬೇಕು. ಮೇಡಂ !'' ಪ್ರತಿಕ್ರಿಯೆಗಾಗಿ ಕಾದರು.

ಆದ ಅಘಾತದಿಂದ ಚೇತರಿಸಿಕೊಳ್ಳುತ್ತಲೇ ಇದ್ದೆ.

''ನಿಮಗೆಷ್ಟು ಮಕ್ಕಳು ? ಪ್ರಶ್ನೆಗೆ ''ಮಗಳೊಬ್ಬಳು ಹುಟ್ಟಿದ್ದರೆ ಚಾಂದ ಬೀಬಿಯ ತರಹ ಮಿಲಿಟ್ರಿ ಟ್ರೇನಿಂಗ್ ಕೊಡಿಸುತ್ತಿದ್ದೆ... ಆದರೆ ಬ್ರಹ್ಮನು ಒಬ್ಬನೇ ಒಬ್ಬ

ಮಗನನ್ನು ದಯಪಾಲಿಸಿ ತನ್ನ ತೀವ್ರ ಪಕ್ಷಪಾತ ತೋರಿಸಿಕೊಂಡಿದ್ದಾನೆ''... ಗಂಟಲುಕಟ್ಟಿಕೊಂಡಿತು.

ಅವನು ಕಾಲೇಜು ವಿದ್ಯಾರ್ಥಿಯೇ? ದ್ವಿಚಕ್ರವಾಹನ ಹೊಂದಿದ್ದಾನೆಯೇ? ಕಾಲೇಜು ರೋಮಿಯೋನೇ ?

ಅವರ ಪ್ರಶ್ನೆಗಳ ಹಿಂದಿನ ಇಂಗಿತ ಆಗಲೇ ಅರ್ಥವಾಗಿತ್ತು. ''ಆತ ಬೀದಿ ಕಾಮಣ್ಣನಾಗಿ ಪೊಲೀಸರ ಕೈಗೆ ಸಿಕ್ಕಿ ಹಾಕಿಕೊಂಡಿದ್ರೇ ಚೆನ್ನಾಗಿತ್ರೀ! ಇಲ್ಲೆ ಇರ್ತಿದ್ದ... ಆಗೀಗ ಆತನನ್ನು ಕಂಬಿಗಳಾಚೆ ನೋಡಿ ಸಂತೋಷಪಡಬಹುದಿತ್ತು!'' ಬಲಾತ್ಕಾರವಾಗಿ ನಗಲೆತ್ನಿಸಿದ ನನ್ನ ಪ್ರಯತ್ನ ಬಿಕ್ಕಾಗಿ ಪರಿಣಮಿಸಬೇಕೇ ?

ಸತ್ಯ ಸಂಗತಿಗೆ ಸಮೀಪ ಬರುತ್ತಿರುವ ಗೆಲುವಿನಲ್ಲಿ ಕಾನೂನು ರಕ್ಷಕರು ''ಸುಧಾರಿಸಿಕೊಳ್ಳೀಮ್ಮಾ! ಶಾಂತವಾಗಿ ವಿವರಣೆ ನೀಡಿ'' ಎಂದು ಸಂತೈಸಲು ಯತ್ನಿಸಿದರು.

''ಹುಡುಗರು, ಹುಡುಗಿಯರಲ್ಲಿ ಆಸಕ್ತರಾಗುವುದು ಸಾಮಾನ್ಯ ಅಲ್ಲವೇ ? ಆದರೆ ನನ್ನ ಮಗನಿಗೆ ಅತ್ತ ಲಕ್ಷ್ಯವೇ ಇಲ್ಲವೆಂದು ಬೊಂಬಾಯಿಗೆ ಬದಲಾವಣೆಗೆಂದು ಕರೆದೊಯ್ದಿದ್ದೆ. ಸಾಲಂಕೃತ ಸುಂದರ ಕಿಶೋರಿಯರು ದಾಳಿ ಇಡುವ ೨–೩ ಮದುವೆ ಮನೆಗೆ ಕರೆದೊಯ್ದೆ. ಸೋದರನ ಮಗಳನ್ನೂ ಅವನ ಮೇಲೆ ಛೂ ಬಿಟ್ಟೆ. ಅವನ ವ್ಯಕ್ತಿತ್ವ, ವಿನೋದ, ಆಕರ್ಷಕ ಮಾತುಕತೆಗಳಿಗೆ ಮರುಳಾಗಿ ಹುಡುಗಿಯರು ಅನೇಕರು ಅವನ ಬೆನ್ನು ಹತ್ತಿದರೆ ಹೊರತು ಅವನಲ್ಲಿ ಯಾವ ಬದಲಾವಣೆಯೂ ಆಗಲಿಲ್ಲ! ಈ ಮಾತೃ ಹೃದಯಕ್ಕೆ ಎಂಥ ಆಘಾತ ತಟ್ಟಿರಬೇಕು. ನೀವೇ ಊಹಿಸಿ ! ಕಂಪ್ಯೂಟರ್ ವಿಜ್ಞಾನದಲ್ಲಿ ಸ್ನಾತಕೋತ್ತರ ಶಿಕ್ಷಣಕ್ಕಾಗಿ ಅಮೇರಿಕೆಗೆ ಹೋಗುತ್ತೇನೆ ಎಂದಾಗ ಗೆಲುವಾಗಿದ್ದೆ. ಅದು ಮಧು–ಮೋಹಿನಿಯರ ನಾಡಲ್ಲವೇ ? ಆದರೆ ಈಗ ಓದು ಮುಗಿಸಿ ಅಲ್ಲಿಯೇ ನೌಕರಿ ಹಿಡಿದು, ತಾನೇ ಅಡಿಗೆ ಮಾಡಿಕೊಂಡು ಊಟ ಮಾಡಿ ವಾರಾಂತ್ಯದಲ್ಲಿ ಮನೆಯಲ್ಲಿ ಕೂತಿರುತ್ತಾನೆ! ನಾನೆಂತಹ ಅಭಾಗಿನಿ! ನನ್ನ ಸಹಪಾಠಿಗಳೆಲ್ಲ ಅಜ್ಜಿಯರಾದರೂ ನನಗಿನ್ನೂ ಸೊಸೆ ತರುವ ಯೋಗ ಬಂದಿಲ್ಲ'' ಸೊರ್ರೆಂದು ಮೂಗು ಹಿಂಡಿಕೊಂಡೆ.

''ಬಂಗಾರದಂತಹ ಮಗನನ್ನು ಪಡೆದಿದ್ದೀರಿ. ಅಭಿನಂದನೆಗಳು'' ಶಿವಣ್ಣನವರ ಧ್ವನಿಯಲ್ಲಿ ವಿಸ್ಮಯವಿತ್ತು.

''ನಿಮ್ಮ ಯಜಮಾನರು ಕಾಣಲು ಹೇಗಿದ್ದಾರಮ್ಮ? '' ಮುಂದಿನ ಕೊಂಕು ಪ್ರಶ್ನೆ.

''ಉದ್ದುದ್ದ ಕಬ್ಬು ಜಗಿದು ಎಸೆಯುವಂಥ ಗಟ್ಟಿ ಹಲ್ಲು. ತುಂಬು ಮೈ. ಕಪ್ಪು ಕೂದಲು, ಒಳ್ಳೆ ಮಾತುಗಾರ. ಮುಖದ ಮೇಲೆ ಸುಕ್ಕಿಲ್ಲ.

ಶಿವಣ್ಣ ಹುಬ್ಬೇರಿಸಿದರು.

''ಸ್ವಲ್ಪ ಡೊಳ್ಳು. ಬೋಳಾಗುತ್ತಿರುವ ಹಣೆ...'' ಶಿವಣ್ಣನವರು ನಕ್ಕರು. ''ತಮ್ಮದು ಪ್ರೇಮ ವಿವಾಹವೇ? ಯಜಮಾನರು ಕಾಲೇಜು ಹೀರೋ ಆಗಿದ್ದರೆ ?

''ಮಗನಂತೆ ತಂದೆಯೋ, ತಂದೆಯಂತೆ ಮಗನೋ ಹೇಳಲು ಬರುವದಿಲ್ಲ. ಇಬ್ಬರೂ ಸಿಗರೇಟು, ಕುಡಿತ, ಕುಣಿತ, ಕನ್ಯೆಯರಿಂದ ದೂರವಿರುವ ಕುಲಕ್ಕೆ ಸೇರಿದವರು. ನಮ್ಮ ರಾಯರೂ ನಾಲ್ಕು ವರ್ಷ ಅಮೆರಿಕೆಯಲ್ಲಿದ್ದು ಡಾಕ್ಟರೇಟು ಪಡೆದರೂ ಹೋದಂತೆ

ಹಿಂದಿರುಗಿ ಬಂದವರು. ಹೆಣ್ಣನ್ನು ಕಂಡರೆ ಹೆದರುವವರು, ಪ್ರೇಮವಿವಾಹ ಹೇಗೆ ಮಾಡಿಕೊಳ್ತಾರ್ರೀ !''

''ಮೊದಲಿಗೆ ಈ ಗುಣ ಹೇಗೆ ಪತ್ತೆಹಚ್ಚಿದ್ರಿ ?''

ಶಿವಣ್ಣನವರ ಚಿಕಿತ್ಸಕ ಪ್ರಶ್ನೆ.

'' ವಧು ಪರೀಕ್ಷೆಯಲ್ಲೇ ಕಣ್ರೀ ! ವರನನ್ನು ದಿಟ್ಟಿಸಿ ನೋಡಬೇಡ. ಹಲ್ಲು ಕಿರಿದು ನಗಬೇಡ ಎಂದೆಲ್ಲ ಹಿರಿಯರು ಎಚ್ಚರಿಸಿದ್ದರು. ಆದರೆ ಶರಬತ್ತಿನ ಗ್ಲಾಸು ಕೈಗೆ ಕೊಡುವಾಗ, ಅವರ ಕೈ ನಡುಗುತ್ತಿದ್ದುದ್ದನ್ನು ನೋಡಿ ಮೋಜೆನಿಸಿ ಕೈಮುಟ್ಟಿಯೇ ಗ್ಲಾಸು ಕೊಟ್ಟಾಗ ಅದು ನೆಲಕ್ಕುರುಳಬೇಕೇ ! ಆಗ ಮಾತ್ರ ಖಿಕ್ ! ಎಂದು ನಕ್ಕು ಬಿಟ್ಟಿದ್ದೆ!'' ಕಾನೂನು ರಕ್ಷಕರೂ ನಕ್ಕರು.

''ಹಾಗಿದ್ದರೆ, ನಿಮ್ಮ ಮನೆಯಲ್ಲಿ ಸೇವಕರಿಗೆ, ಆಪ್ತರಿಗೆ ಆಶ್ರಯ ಕೊಟ್ಟಿರುವಿರಾ?'' ನಿರಾಶೆಯ ಎಳೆ ಎದ್ದು ಕಾಣುವ ಪ್ರಶ್ನೆ.

''ಸೇವಕರ ಬಗ್ಗೆ ರಾಯರಿಗೆ ಅಲರ್ಜಿ ! ನಮ್ಮಿಂದ ಆಗದ ಯಾವ ಕೆಲಸವಿದೆಯೆಂದು ಸೇವಕರನ್ನಿಡಬೇಕು ? ಇದು ಅವರ ಗಟ್ಟಿ ನಿಲುವು. ಯಾವ ಆಪ್ತರಲ್ಲೂ ಹೋಗುವುದಿಲ್ಲ, ಯಾರಿಗೂ ಸ್ವಾಗತವಿಲ್ಲ. ಯಾರಾದರೂ ಜಾಣ ಹುಡುಗಿ. ಹುಡುಗನನ್ನು ಮನೆಯಲ್ಲಿಟ್ಟು ವಿದ್ಯಾಬುದ್ಧಿ ಕೊಡೋಣ ಎಂದರೆ, ತನ್ನನ್ನೇ ವಿದ್ಯಾರ್ಥಿಯಾಗಿ ಸ್ವೀಕರಿಸು. ಕಲಿಯುವುದು ಬೆಟ್ಟದಷ್ಟಿದೆ ! ಎಂದು ಗೇಲಿ ಮಾಡುತ್ತಾರೆ'' ನನ್ನ ನಿರಾಶೆಯನ್ನೂ ಹೊರಗೆಡವಿದೆ.

''ನೋಡೀಮ್ಮ ! ಎಷ್ಟೋ ನಿಗೂಢ ಕೊಲೆ–ಸುಲಿಗೆಗಳ ಪ್ರಕರಣಗಳನ್ನು ನಮ್ಮ ಖಾತೆಯುವರು ಹೊರಗೆಡುವುತ್ತಾರೆ. ಆದರೆ ನಿಮ್ಮ ಮನೆಯಲ್ಲೇ ಕಾಮಣ್ಣಗಳು ಬೀಡು ಬಿಟ್ಟಿದ್ದಾರೆ ! ಎಂಬ ದೂರಿಗೆ ತನಿಖೆಯನ್ನು ಹೇಗೆ ಜರುಗಿಸಬೇಕೆಂದು ತಿಳಿಯದೇ ಪೇಚಾಡುತ್ತಿದ್ದೇನೆ.... ಏನು ಮಾಡೋಣ ? ನೀವೇ ಸೂಚಿಸಿ'' ಎಂದರು. ನನ್ನ ಕುತೂಹಲ ಹೆಚ್ಚಿತು. ''ಈ ಕೂಡಲೇ ನಮ್ಮ ಮನೆಗೆ ಅನಿರೀಕ್ಷಿತ ಭೇಟಿ ಮಾಡಿ. ಸಂಪೂರ್ಣ ಸಮ್ಮತಿ. ಸಹಕಾರಗಳು ನನ್ನವು'' ಎಂದು ಸ್ಪಷ್ಟವಾಗಿ ಹೇಳಿದಾಗ ಶಿವಣ್ಣನವರಿಗೆ ಆಶ್ಚರ್ಯಾನಂದ ಗಳಾದವು. ''ಆಸು–ಪಾಸಿನವರಿಗೆ ಗುಮಾನಿ ಬರಬಾರದು. ವಾಚ್‌ಮನ್, ಪೇದೆ, ಪರಿಚಾರಕರಿಗೂ ಸಂದೇಹ ಬೇಡ. ಸರಕಾರಿ ವಾಹನ ಬೇಡ ಎನ್ನುತ್ತ ಖಾಸಗಿ ವಾಹನದಲ್ಲಿ ನನ್ನೊಂದಿಗೆ ಹೊರಟೇಬಿಟ್ಟರು.

ಕರೆಗಂಟೆಯನ್ನು ಬಾರಿಸುವ ಗೋಜಿಗೆ ಹೋಗದೇ ನನ್ನ ಕೀಹಾಕಿ ಬಾಗಿಲು ತೆಗೆದಾಗ, ಹೊರ ಗ್ಯಾಲರಿಯಲ್ಲಿದ್ದ ರಾಯರು, ಎಂದಿನಂತೆ ಮಿಸುಕಾಡದೆ ''ಯಾವ ಕಳ್ಳನು ಒಳಗೆ ಬಂದದ್ದು ?'' ಎಂದು ವಿಚಾರಿಸಿದರು. ''ಕಳ್ಳ ಕಾಕರನ್ನು ಹಿಡಿದು ಹಾಕುವ ಕಮೀಷನರ್ ಸಾಹೇಬರೇ ಬಂದಿದಾರ್ರೀ ! ಎಂದೆ. ಯಾವ ಕುತೂಹಲವೂ ಇಲ್ಲದೇ ''ಹೌದಾ ! ಹಾಗಿದ್ದರೆ ಮಾತನಾಡಿಸಿ ಚಹಾ–ಚಕ್ಕಲಿ ಕೊಟ್ಟು ಕಳಿಸು !'' ಎಂದು ತಮ್ಮ ಕೆಲಸ ಮುಂದುವರಿಸಿದರು. ಬಿಡದೇ ಶಿವಣ್ಣನವರನ್ನು ಹೊರಜಗುಲಿಗೆ ಕರೆದೊಯ್ದು ಪರಿಚಯಿಸಿದೆ. ಪತ್ನಿ ಹೇಳಿದ್ದು ತಮಾಷೆಯಲ್ಲವೆಂದು ತಿಳಿದರೂ ಅನಾಸ್ಥೆಯ ಮುಖ. ''ಇಂಥ ಜಾಗದಲ್ಲಿ ಕುಳಿತು ಕೆಲಸ ಮಾಡುವಾಗ ನಿಮಗೆ ಜಗತ್ತಿನ ಪರಿವೆಯಿರಲಿಕ್ಕಿಲ್ಲ

ಅಲ್ಲವೇ ಸರ್ ?'' ಎಂದಾಗ ಈ ದುರ್ಬೀನು, ಟಿ. ವಿ. ಕ್ಯಾಮರಾಗಳು, ಅತ್ಯುತ್ತಮ ಸಂಶೋಧನಾ ಸಾಧನಗಳು. ಇವುಗಳೊಂದಿಗೆ ಕೆಲಸ ಪ್ರಾರಂಭಿಸಿದೆನೆಂದರೆ ಊಟ–ತಿಂಡಿಯ ಪರಿವೆಯಿರುವುದಿಲ್ಲ, ತಾವೂ ಬಳಸಿ ನೋಡಿ ! ಕಮಿಶನರ್ ಹುದ್ದೆಯನ್ನೂ ಬಿಟ್ಟುಕೊಟ್ಟು ಇದರಲ್ಲಿ ತೊಡಗುವಂತಾಗುತ್ತದೆ ! ರಾಯರೆಂದರು. ''ಆ ಭಾಗ್ಯ ನನ್ನದಾಗಲು ಸಾಧ್ಯವಿಲ್ಲ ಬಿಡಿ ! ನಿಮ್ಮ ಸಂಶೋಧನಾ ಕ್ರಮ ಅರಿಯಬಹುದೇ ? ಎಂದರು ಶಿವಣ್ಣ.

''ಜೀವಿಗಳ ಕಾಮಪ್ರವೃತ್ತಿ ವಿಷಯದಲ್ಲಿ ಇವರಿಗೆ ವಿಶೇಷ ಆಸಕ್ತಿ!'' ನಾನು ನಡುವೆ ಮಾತನಾಡಿ ಸ್ಥಳ ಖಾಲಿ ಮಾಡಿದೆ. ''ಹೌದೆ ! ಸ್ವಲ್ಪ ವಿವರಿಸಿ'' ಶಿವಣ್ಣ ವಿಶೇಷ ಆಸಕ್ತಿ ತಾಳಿದರು.

ರಾಯರಿಗೆ ಇಷ್ಟೇ ಸಾಕಾಯಿತು. ದುರ್ಬೀನನ್ನು ಹೊಂದಿಸಿದರು. ಆಕರ್ಷಕ ಹೆಣ್ಣನ್ನು ನಿರೀಕ್ಷಿಸಿದ ಸಾಹೇಬರಿಗೆ ಅಲ್ಲಿ ಒಂದು ಇಣಚಿಯನ್ನು ಕಂಡು ನಿರಾಶೆಯೇ ಆಯಿತು ! ಕ್ಯಾಮರಾದಲ್ಲಿ ಮಧುಪಾನದಲ್ಲಿ ಮೈ ಮರೆತ ಚಿಟ್ಟೆಯ ದರ್ಶನ ಮಾಡಿಸುತ್ತ ರಾಯರು, ಪಾತರಗಿತ್ತಿಯ ಪ್ರಣಯ ವೈಶಿಷ್ಟ್ಯದ ಕುರಿತು ವ್ಯಾಖ್ಯಾನ ಬಿಗಿದದ್ದೇ, ಕಮೀಶನರು ಸುಸ್ತು ಹೊಡೆದರು.

ಸಂದರ್ಭವನ್ನು ಸಡಿಲಿಸಲು ಕಾಫಿಮಾಡಿ ತಂದೆ. ಕೃತಜ್ಞತೆಯಿಂದ ಸ್ವೀಕರಿಸಿ ಶಿವಣ್ಣನವರು ಮೌನವಾಗಿಯೇ ಸೇವಿಸುತ್ತಿದ್ದಂತೆ ರಾಯರು ಮಿಂಚಿನ ವೇಗದಿಂದ ತಮ್ಮ ಛಾಯಾಚಿತ್ರಗಳ ಭಾಂಡಾರವನ್ನು ಹೊರಗಳೆದು ಒಂದೊಂದೇ ಸ್ಲ್ಯಾಡನ್ನು ಅವರ ಕೈಗೆ ಕೊಡುತ್ತ ವಿವರಣೆ ನೀಡಲಾರಂಭಿಸಿದರು. ''ಈ ಇಣಚಿ ದಂಪತಿಗಳಿಗೆ ಕಾಮಿನಿ, ಕಾಮಣ್ಣ ಎಂದು ಹೆಸರಿಟ್ಟಿದ್ದೇನೆ. ಯಾಕಂದರೆ ಗಂಡು, ಅತ್ತಿ ಹಣ್ಣು ಸೇವಿಸುತ್ತಿದ್ದಾಗ, ಹತ್ತಿರದಿಂದ ಹೆಣ್ಣು ಹಾದು ಹೋಗುವುದನ್ನು ಕಂಡರೆ, ತನ್ನ ಕೆಲಸ ಮರೆತು ಅದರ ಬೆನ್ನು ಹತ್ತುತ್ತದೆ. ಹೆದರಿದ ಹೆಣ್ಣು ನಾಗಾಲೋಟ ಹಾಕಿದರೂ ರೆಂಬೆಯಿಂದ ರೆಂಬೆಗೆ ಬೆನ್ನಟ್ಟಿಕೊಂಡು ಕೊನೆಗೂ ಬಿಡದೇ ವಶಪಡಿಸಿ ಕೊಂಡುಬಿಡುತ್ತದೆ.... ಕಾಗೆಗಳ ಕೂಡುವಿಕೆ ಕಂಡವರು ಸುದೈವಿಗಳೆನ್ನಬೇಕು ! ಅದನ್ನು ಛಾಯಾಗ್ರಹಣದಲ್ಲಿ ಸೆರೆ ಹಿಡಿಯುವ ಭಾಗ್ಯ ನನ್ನದಾಗಿದೆ. ಒಂದೊಂದಾಗಿ ರಾಯರು ತಾವೇ ಹಿಗ್ಗಿಸಿ ತಯಾರಿಸಿದ ಛಾಯಾಚಿತ್ರಗಳನ್ನು ಕಮೀಷನರ್ ಕೈಗೆ ಕೊಡುತ್ತಿದ್ದಾಗ, ಅವರು ಆಕಳಿಕೆಯನ್ನು ಹತ್ತಿಕ್ಕುತ್ತ ಕುಳಿತಿದ್ದರು. ಆಮೇಲೆ ಮರುಕದಿಂದ, ''ಮಾನವರ ಇಂಥ ಪ್ರವೃತ್ತಿಯಲ್ಲಿ ತಮಗೆ ಆಸಕ್ತಿಯಿಲ್ಲವೇ ?'' ಎಂದು ಕೇಳಿದರು.

''ಮಾನವನ ಪ್ರಣಯ ಕೇಳಿ ಮತ್ತು ಸಂತಾನೋತ್ಪತ್ತಿ ಚಟುವಟಿಕೆಗಳು ಅತ್ಯಂತ ಗುಪ್ತ ಹಾಗೂ ದೈವೀ ಅಂಶಗಳುಳ್ಳವೆಂದು ನಂಬಿದ ಕಾಲವೊಂದಿತ್ತು ! ಈಗ ಬಗೆಬಗೆಯ ಜಾಹೀರಾತು, ಚಲಚ್ಚಿತ್ರ ಮತ್ತು ದೂರದರ್ಶನ ಜಾಲಗಳ ಚಿತ್ರವಿಚಿತ್ರ ಕಾರ್ಯಕ್ರಮಗಳಿಂದಾಗಿ ಎಲ್ಲವೂ ಬಹಿರಂಗವಾದಾಗ ಹೆಚ್ಚಿನವರಿಗೆ ಆಸಕ್ತಿ ತಾನೆ ಏನು ಉಳಿದೀತು ? ಈಗ ಎಳೆ ಮಕ್ಕಳಿಗೂ ಋತುಸ್ರಾವ, ಗರ್ಭಧಾರಣೆ, ಗರ್ಭಪಾತಗಳ ಅ, ಆ, ಕ್ಷ, ಜ್ಞ ವರೆಗೆ ಎಲ್ಲ ತಿಳಿದಿರುತ್ತದೆ'' ಎಂದು ತಮ್ಮ ಸ್ಪಷ್ಟ ಅಭಿಪ್ರಾಯ ತಿಳಿಸಿದಾಗ ಸಾಹೇಬರಿಗೆ ಏನು ಹೇಳಬೇಕೆಂದು ತೋಚಲಿಲ್ಲ.

ಬೀಳ್ಕೊಡುತ್ತಿದ್ದಂತೆ ಶಿವಣ್ಣನವರು, 'ಜೀವನದಲ್ಲಿ ಅದೆಂತಹ ವಿರೋಧಾಭಾಸ ನೋಡಿ ! ಅಪರಾಧ ಅನ್ವೇಷಣೆಗೆ ಬಂದವನಿಗೆ, ಪ್ರಾಣಿ ಜೀವನದ ಅಜ್ಞಾತ ಹೊಳಹುಗಳನ್ನು ಪರಿಚಯಿಸಿದಿರಿ. ನಿಮ್ಮದೊಂದು ಅಪರೂಪದ ಹಾಬಿ. ಇಂಥ ಸಂಶೋಧಕರು ನಮ್ಮಲ್ಲಿದ್ದರೆ, ಎಷ್ಟೊಂದು ಅನುಕೂಲವಾಗುತ್ತಿತ್ತು. ಈಗಲೂ ಮನಸ್ಸು ಮಾಡಿದರೆ ನಮಗೆ ನೆರವಾಗಲು ಸಾಧ್ಯವಿದೆ. ನಮಗೆ ಬಂದ ಮಹಿಳೆಯರ ದೂರುಗಳನ್ನು ನಿಮಗೆ ಕಳಿಸಿಕೊಡುತ್ತೇನೆ. ದೂರಿಕೊಂಡವರ ಛಾಯಾಚಿತ್ರ, ಚಾರಿತ್ರ್ಯದ ಕುರಿತು ಮಾಹಿತಿ ಕಳಿಸಿದರೆ, ಅದನ್ನು ಆಧರಿಸಿ ಕೀಟಲೆಯ ಪ್ರವೃತ್ತಿಯನ್ನು ಕೊಂಚ ತಗ್ಗಿಸಲು ಸಾಧ್ಯವಾಗಬಹುದು. ಎರಡು ವಾರಗಳಲ್ಲಿ ನಿಮ್ಮ ವರದಿ ಕಳಿಸಿಕೊಡಿ' ಎಂದು ಬಿನ್ನವಿಸಿ ಆದರದ ಹಸ್ತಲಾಘವವಿತ್ತು ಬೀಳ್ಕೊಂಡರು.

ಅದೇ ದಿನ ಸಂಜೆ, ಸಮವಸ್ತ್ರದ ಪೊಲೀಸ್ ಅಧಿಕಾರಿಯೊಬ್ಬ ಬಂದು ಸೈನಿಕ ಸೆಲ್ಯೂಟ್ ಹೊಡೆದು, ದೊಡ್ಡ ಸಾಹೇಬರು ಕೊಟ್ಟಿದ್ದಾರೆಂದು ದೂರುಪತ್ರಗಳ ಕಟ್ಟೊಂದನ್ನು ಕೈಗಿತ್ತು, ಹಿಂತಿರುಗಿದ. ರಾಯರು ಒಂದೊಂದಾಗಿ ಅವನ್ನು ಓದುತ್ತ ತನ್ನ ಮೇಲೆ ಹೊರಿಸಿದ ಆಪಾದನೆಗಳನ್ನು ವಿವರಿಸುತ್ತ ಆನಂದಿಸಿದರು. ''ಆಪಾದಿತನೇ ವಿಚಾರಣಾ ಅಧಿಕಾರಿಯಾಗಿ ಕೆಲಸ ಮಾಡುವುದು ಮೋಜಾಗಿರುತ್ತದೆ. ಅಲ್ಲವೇ ? ಎಂದು ಕಾರ್ಯೋನ್ಮುಖಿಯಾದರು. ಫೈಲೊಂದನ್ನು ತೆರೆದು ಆಪಾದನೆಗಳನ್ನು ಬರೆದುಕೊಂಡು ಒಂದೇ ವಾರದಲ್ಲಿ ವರದಿಯನ್ನು ಪೊಲೀಸ್ ಕಮೀಶನರ್ ಅವರಿಗೆ ಕಳಿಸಿಕೊಟ್ಟರು. ಎರಡೇ ದಿನಗಳಲ್ಲಿ ಅವರಿಂದ ಮರುದಿನ ನ್ಯಾಯವಾದಿ ಸಮಾರಂಭ ಇಟ್ಟಿರುವುದಾಗಿಯೂ, ನಾವಿಬ್ಬರೂ ಬರಲೇಬೇಕೆಂತಲೂ ಆಗ್ರಹದ ಕರೆಯ ಫೋನು ಬಂದಿತು.

ನ್ಯಾಯಾಲಯ ಹೇಗೆ ನಡೆಸಬೇಕೆಂದು ಶಿವಣ್ಣನವರು ಗೊಂದಲದಲ್ಲಿದ್ದರು. ರಾಯರು ನೆರವಿಗೆ ಬಂದರು. ''ತಾವು ನ್ಯಾಯಾಧೀಶರು. ಸಾಕ್ಷಿದಾರರೆಲ್ಲ ಹೆಂಗಸರೇ ! ಆದ್ದರಿಂದ ಆಕಾಶವಾಣಿ ನಿರ್ದೇಶಕಿಯಾಗಿದ್ದವರು ತಜ್ಞೆಯಾಗಿ ಕೆಲಸ ಮಾಡಲಿ. ಅವರಿಗೆ ಗುಟ್ಟೇನಾದರೂ ಹೇಳುವದಿದ್ದರೆ, ಒಳಕೋಣೆಯನ್ನು ಬಳಸಬಹುದು. ನಾನು ಆಪಾದಿತನಾಗಿದ್ದರಿಂದ ನಿಮ್ಮಿಬ್ಬರಿಂದ ಸ್ವಲ್ಪ ದೂರದಲ್ಲಿ ನಿಂತಿರುತ್ತೇನೆ. ನೀವು ಒಬ್ಬೊಬ್ಬರನ್ನಾಗಿ ಕರೆಯಿಸಿ ಅವರ ಹೇಳಿಕೆಯನ್ನು ನಮೂದಿಸಿಕೊಳ್ಳಿ. ನಂತರ ಅವರಿಗೆ ಮರುಸವಾಲು ಹಾಕುವ ಅಧಿಕಾರ ನನಗೆ ಕೊಡಬೇಕು'' ಎಂದು ಕೇಳಿಕೊಂಡಾಗ ಸೂಚನೆ ಸರ್ವಾನುಮತದಿಂದ ಒಪ್ಪಿಗೆಯಾಯಿತು.

'ಸುವರ್ಣಾಬಾಯಿ !' ಕರೆಕೊಟ್ಟಾಗ, ತನ್ನ ವಯಸ್ಸನ್ನು ಪ್ರಯತ್ನಪೂರ್ವಕ, ಅರ್ಧಕ್ಕೆ ಇಳಿಸುವಂತೆ ಅಲಂಕರಿಸಿಕೊಂಡ ಮಹಿಳೆ ಪ್ರತ್ಯಕ್ಷಳಾದಾಗ ಎಲ್ಲರೂ ಪಿಕಿಪಿಕಿ ಎಂದು ಎವೆಯಿಕ್ಕದೇ ಆಕೆಯನ್ನು ನೋಡಲಾರಂಭಿಸಿದರು. ''ಓ ಇವನೇ ಸಾರ್ ನಾನು ಹೋಗುವಾಗ, ಬರುವಾಗ ದುರ್ಬೀನಿನಿಂದ ನೋಡುತ್ತಲೇ ಇರುತ್ತಾನೆ. ಯಾವುದೇ ಸಮಯದಲ್ಲಿ ನಾನು ಹೊರಬಿದ್ದಾಗಲೂ ಈತ ಹಾಜರ್'' ಶಿವಣ್ಣನವರು ತಮ್ಮ ಮಾತು ಮುಗಿಸಿ ರಾಯರಿಗೆ ಕಣ್ಸನ್ನೆ ಮಾಡಿದಾಗ ''ನೀವು ಮುಂಜಾನೆ ತಿರುಗಾಟದ ನೆಪದಲ್ಲಿ ಹೊರಟಾಗ ಸ್ಕೂಟರ್ ಮೇಲೆ ಹಿಂಬಾಲಿಸುವವನು ನಾನೆಂದು ತಿಳಿದಿರಾ ? ಪ್ರತಿ ರವಿವಾರ ಸಂಜೆ, ನಿಮ್ಮ ಮನೆಯಿಂದ ಕೊಂಚ ದೂರ ನಿಲ್ಲಿಸಿದ. ಕಪ್ಪುಗಾಜು ಇಳಿಬಿಟ್ಟ ಕಾರಿನಲ್ಲಿ

ತಪ್ಪಿತಸ್ಥೆಯಂತೆ ಆಚೆ–ಈಚೆ ನೋಡಿ, ಏರುವಾಗ ಅದು ನನ್ನ ಕಾರೆಂದು ತಿಳಿದಿರಾ ?'' ಎಂದು ಧ್ವನಿಯೇರಿಸಿ ಕೇಳಿದರು ರಾಯರು. ಈ ಅನಿರೀಕ್ಷಿತ ಬಾಂಬ್ ದಾಳಿಗೆ ಆ ಮಹಿಳೆಯ ಮುಖ ವಿವರ್ಣವಾಯಿತು. ಬಾಯಿಕಟ್ಟಿ ಹೋಯಿತು. ಮಾತಿಲ್ಲದೇ ಹೊರಟು ಹೋದಳು.

ಬಳಕುತ್ತ ಒಳಬಂದ ಶಾಲಿನಿ. ''ಈತನೊಬ್ಬ ವಿಕೃತಮಾನವ ! ಸದಾಕಾಲ ದೊಡ್ಡ ಲೆನ್ಸ್ ಕ್ಯಾಮರಾ ಅತ್ತಿತ್ತ ತಿರುಗಿಸುತ್ತ ಇರುತ್ತಾನೆ. ನಮ್ಮ ಬಚ್ಚಲು ಮನೆ, ಬೆಡ್‌ರೂಂ ಕಡೆಗೆ ಬೈನಾಕ್ಯುಲರ್‌ದಿಂದ ನೋಡುತ್ತಲೇ ಇರುತ್ತಾನೆ. ಏನೂ ಸಿಗದಿದ್ದರೆ, ಒಣಹಾಕಿದ ನನ್ನ ಕುಪ್ಪುಸ, ಲಂಗ ಇನ್ನಿತರ ಒಳಬಟ್ಟೆಗಳ ವೀಕ್ಷಣೆ ನಡೆಸಿರುತ್ತಾನೆ ! ಕಡಾಖಂಡಿತವಾಗಿ ಆಪಾದಿಸಿದಳು.

ಶಾಂತಂ ಪಾಪಂ ! ಉಸಿರು ಬಿಗಿಹಿಡಿದು ಕುಳಿತಿದ್ದೆ. ಕಮೀಶನರ್ ಮಾತು ಮುಗಿದ ಮೇಲೆ, ರಾಯರು ಶಾಂತವಾಗಿ ಕೇಳಿದರು. ''ನಿಮ್ಮ ಅರ್ಧವಯಸ್ಸಿನ ಯುವಕನನ್ನು ಪದೇ ಪದೇ ಮನೆಗೆ ಬರಮಾಡಿಕೊಳ್ಳುವುದೇಕೆ ? ಅವನ ಸ್ಕೂಟರ್ ಏರಿ, ಯುವಜನರೂ ಎವೆಯಿಕ್ಕದೇ ನೋಡುವಂತೆ ವಿಹಾರಕ್ಕೆ ಹೋಗುವುದರಲ್ಲಿ ಸಾರ್ಥಕತೆ ಏನಿದೆ ? ವಾರ್‍ಯಾಂತವನ್ನು ಆತ ನಿಮ್ಮಲ್ಲಿ ಕಳೆಯುತ್ತಾನಲ್ಲ ? ಆತ ನಿಮಗೆ ಏನಾಗಬೇಕು ?''.

ಆಕೆ ಕೆರಳಿದ ಹಾವಿನಂತಾದಳು. ''ಇಟ್ ಈಸ್ ನನ್ ಆಫ್ ಯುವರ್ ಬಿಸಿನೆಸ್!'' ನೋಡಿ ಸಾರ್, ಈ ಬದ್ಮಾಸ್, ಕಣ್ಣಿಟ್ಟು ಎಲ್ಲ ನೋಡುತ್ತ ನನ್ನ ಜೀವನವನ್ನೇ ! ಹಾಳುಗೆಡುವ ಪ್ರಯತ್ನದಲ್ಲಿದ್ದಾನೆ''. ಎಂದು ಕೂಗುತ್ತ ಆಪಾದಿತನ ಮೇಲೆ ಕೈಯೆತ್ತಲು ಹೋದಾಗ, ಪೇದೆಗಳಿಬ್ಬರು ಬಂದು ಹೊರಗೆ ಕರೆದೊಯ್ದರು.

ಈಗ ಕಿಶೋರಿ ಶಾಲಾ ವಿದ್ಯಾರ್ಥಿನಿಯೋರ್ವಳ ಸರದಿ. ''ಇವನೊಬ್ಬ ವಯಸ್ಸಾದ ಪೋಲಿ ! ಶಾಲೆ ಕಾಲೇಜ್ ಹುಡುಗಿಯರಿಗೆಲ್ಲ ಹುಡುಗರ ಹೆಸರಿನಿಂದ ಪತ್ರ ಬರೆಯುತ್ತಾನೆಂದು ತೋರುತ್ತದೆ ! ಪ್ರತಿ ಮುಂಜಾನೆ ಬರುಹೋಗುವಾಗ ಹುಡುಗಿಯರನ್ನು ನೋಡುವದು, ಹತ್ತಾರು ಪತ್ರಗಳನ್ನು ಅಂಚೆಗೆ ಸೇರಿಸುವದು. ಇದನ್ನು ಕಣ್ಣಾರೆ ಕಂಡಿದ್ದೇನೆ'' ಎಂದಳು. ''ಪ್ರತಿ ಮುಂಜಾನೆ ಪ್ರೇಮಪತ್ರ ಅಂಚೆಗೆ ಸೇರಿಸುವುದನ್ನು ನೋಡಲು ಎದ್ದಿರುತ್ತೀಯಾ ? ಅಥವಾ ರಂಗೋಲಿ ಹಾಕುವ, ಗಿಡಕ್ಕೆ ನೀರು ಹಾಕುವ ನೆವದಿಂದ ಹೊರಬಂದು ನಿನಗಾಗಿ ಕಾಯುವ ಕಾಮಣ್ಣನ ಅಂಗಪ್ರದರ್ಶನ ನೋಡುತ್ತಿರುತ್ತೀಯಾ ? ಎಂದಾಗ ಒಂದಿಷ್ಟು ಅಳುಕದೇ, 'ಅವನು ನನ್ನ ಸೋದರಮಾವನಾಗಬೇಕು' ಎಂದು ಜಾರಿಕೊಳ್ಳಲು ಯತ್ನಿಸಿದಳು. 'ನಿನ್ನ ತಾಯಿಯ ಸೋದರ, ಕಸಕಡ್ಡಿ ಆರಿಸುವ ಕೆಲಸದಲ್ಲಿ ಇದ್ದಾನೆಂದು ತಿಳಿದಿರಲಿಲ್ಲ!' ಎಂದಾಗ ಹೆದರಿ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು.

ಕೊನೆಯಲ್ಲಿ ಪೊಲೀಸ್ ಅಧಿಕಾರಿಗಳು ಆ ಎಲ್ಲ ಮಹಿಳೆಯರನ್ನು ಒಟ್ಟಿಗೆ ಕರೆಸಿದರು. ''ಈ ಸ್ವಾಮಿಯೋರು ತಮ್ಮ ಬೇರೆ ಅಭ್ಯಾಸಕ್ಕಾಗಿ ಯಾವಾಗಲೂ ಹೊರಜಗುಲಿಯಲ್ಲಿ ಇರ್‍ತಾರೆ. ನಿಮ್ಮನ್ನು ನೋಡುವುದಕ್ಕೆ ಅಲ್ಲ. ನೀವು ಅವರನ್ನು ಅವಮಾನಿಸಿದ್ದರಿಂದ ನಿಮ್ಮ ಮೇಲೆ ಮಾನಹಾನಿ ಮೊಕದ್ದಮೆ ಹಾಕಬಹುದಿತ್ತು ಅವರು. ಆದರೆ ನಿಮ್ಮನ್ನೆಲ್ಲ ಕ್ಷಮಿಸುವ

ಹೃದಯವಂತಿಕೆ ತೋರಿಸಿದ್ದಾರೆ. ಈಗಲೂ ನಿಮ್ಮ ನಡಾವಳಿಕೆ ಸುಧಾರಿಸಿಕೊಳ್ಳದಿದ್ದರೆ, ಶಿಕ್ಷೆಗೆ ಗುರಿಪಡಿಸಬೇಕಾದಿತು'' ಎಂದು ಎಚ್ಚರಿಸಿ ಬೀಳ್ಕೊಟ್ಟರು.

''ನಿಮಗೆ ವರದಿ ಕಳಿಸಿಕೊಟ್ಟನಂತರ ಈ ಧೀರ ಹುಡುಗಿ ಕ್ಯಾಮರಾಕಣ್ಣಿಗೆ ಬಿದ್ದಳು'' ಎಂದು ಛಾಯಾಚಿತ್ರವೊಂದನ್ನು ಶಿವಣ್ಣನವರು ಕೈಗಿತ್ತಾಗ, ಗಂಭೀರರಾಗಿ, 'ಅವಳ ವೃತ್ತಾಂತ ವಿವರಿಸುವಿರಾ ?' ಎಂದು ಕೇಳಿದರು. ''ಈ ಕುಮಾರಿ ಚೂಟಿಯಾಗಿದ್ದಂತೆ ಚತುರೆ, ಚಲುವೆಯೂ ಹೌದು. ಅಂತೆಯೇ ಸಖಿಯರೊಂದಿಗೆ ಹೊರಟಳೆಂದರೆ, ಹುಡುಗರು ಅವಳನ್ನು ಚುಡಾಯಿಸುವುದು ಒತ್ತಟ್ಟಿಗಿರಲಿ, ದಾರಿ ಬದಲಿಸಿ, ತಾವು ಕೀಟಲೆಗೆ ಒಳಗಾಗದಂತೆ ಎಚ್ಚರಿಕೆ ವಹಿಸುತ್ತಾರೆ. ನಾನು ದೂರದರ್ಶಕದಿಂದ ನೋಡುತ್ತಿದ್ದಂತೆ ವರ್ಗದಲ್ಲಿ ಜಾಣನೆನಿಸಿಕೊಳ್ಳಬಹುದಾದ ಸಹಪಾಠಿಯೋರ್ವ ಸೈಕಲ್ ತುಳಿಯುತ್ತ ಕ್ಲಾಸಿಗೆ ಹೊರಟಿದ್ದ. ಅವನ ದುರದೃಷ್ಟಕ್ಕೆ ಈ ಸಬಲೆಯ ತಂಡದವರ ದೃಷ್ಟಿ ಅವನ ಮೇಲೆ ಬೀಳಬೇಕೆ ? ಮಿಂಚಿನವೇಗದಿಂದ ಬಂದು ಅವನ ಸೈಕಲ್, ಅಡ್ಡಗಟ್ಟಿದ್ದರಿಂದ ಒಣ ತೆಂಗಿನಕಾಯಿಯಂತೆ ಧೊಪ್ಪನೇ ಬಿದ್ದುಬಿಟ್ಟ. ಅವನ ಬಗ್ಗೆ ಯಾವುದೇ ಸಹಾನುಭೂತಿ ತೋರಿಸುವ ಬದಲಾಗಿ ಗಹಗಹಿಸಿ ನಗುತ್ತ ಮುಂದೆ ಹೋದರು. ದಾರಿ ಹೋಕರು ಅವನನ್ನೂ, ಬೈಸಿಕಲ್ಲನ್ನು ಎತ್ತಿ ಕೂಡಿಸಿ, ಪೆಟ್ಟು ಆಗಿಲ್ಲವೆಂದು ಮನಗಂಡು ಮುಂದೆ ಹೋದರು'' ಎಂದು ರಾಯರು ಮಾತು ಮುಗಿಸುವ ಮೊದಲೇ ಶಿವಣ್ಣನವರು ಜೋರಾಗಿ ನಗಲಾರಂಭಿಸಿದರು. ''ನಿಮ್ಮಿಬ್ಬರ ಕ್ಷಮೆ ಕೋರುತ್ತಿದ್ದೇನೆ. ನೀವು ಹೇಳುತ್ತಿರುವ ಹುಡುಗಿ ದೀಪಾ, ನನ್ನ ಸೋದರಿಯ ಮೊಮ್ಮಗಳು. ನಿಮ್ಮ ಕಾರ್ಯವಿಧಾನವನ್ನು ಪರೀಕ್ಷಿಸುವುದಕ್ಕಾಗಿಯೇ ಈ ನಾಟಕವನ್ನು ಆಡಲು ಅವಳ ತಂಡದವರನ್ನು ಪ್ರೇರೇಪಿಸಿದ್ದೆ. ನಿಮ್ಮ ತನಿಖಾ ವಿಧಾನ ಬಲು ಜೋರಾಗಿದೆ. ನಾನು ಬಹಳವಾಗಿ ಮೆಚ್ಚಿಕೊಂಡಿದ್ದೇನೆ''. ಎಂದರು. ''ನೀವು ಪೊಲೀಸ ಖಾತೆಯವರು ಯಾರನ್ನೂ ನಂಬುವದಿಲ್ಲ, ಎಂಬ ಮಾತನ್ನು ಸಿದ್ಧಮಾಡಿ ತೋರಿಸಿದಿರಿ !'' ರಾಯರ ಮಾತಿಗೆ ನಾವು ಮೂವರೂ ನಕ್ಕೆವು.

■ ■

## ೩. ಪುಟ್ಟಬುದ್ಧಿಯ ದರ್ಶನ

ಇಂದಿನ ದಿನಗಳಲ್ಲಿ ಎಲ್ಲರೂ ದೂರವಾಣಿಗೇ ಶರಣು ಹೋಗಿದ್ದರಿಂದ, ಅಂಚೆ ವಿತರಣೆಯವರಿಗೆ ವಿಪರೀತ ವಿರಾಮವಾಗಿದ್ದಿರಬೇಕು. ಮದುವೆ, ಮುಂಜಿ, ಸತ್ಕಾರ, ಗೃಹಪ್ರವೇಶಗಳ ಆಮಂತ್ರಣ ಪತ್ರಿಕೆಗಳು ಆಗೊಮ್ಮೆ ಈಗೊಮ್ಮೆ ಅಂಚೆಯಿಂದ ಬರುತ್ತಿವೆಯಾದರೂ ವೈಯಕ್ತಿಕ ಪತ್ರಗಳು ತೀರ ಅಪರೂಪವಾಗಿ ಬಿಟ್ಟಿವೆ ! ಅಂತೆಯೇ ಕವರೊಂದು ನನ್ನ ವಿಳಾಸಕ್ಕೆ ಬಂದಾಗ ಆನಂದ, ಆಶ್ಚರ್ಯಗಳಾದವು. ಯಾರು ಕಳಿಸಿರ ಬಹುದು ? ಎಂಬ ಊಹೆಗೆ ಪ್ರಾರಂಭವಾಯಿತು. ಹೆಸರನ್ನು ನಮೂದಿಸಿಲ್ಲ, ಹಸ್ತಾಕ್ಷರ ಗಳ ಪರಿಚಯ ಸಿಗಲಿಲ್ಲ, ಎಂದಿನಂತೆ ಅಂಚೆಯವರು ದಿನಾಂಕ, ಊರುಗಳ ಹೆಸರು ಓದಲು ಬಾರದಂತೆ ದಪ್ಪ ಹರಡಿಕೊಳ್ಳುವ ಮನೆಯ ಮೊಹರು ಒತ್ತಿದ್ದರು. ಯಾರೋ ಕನ್ಯಾಪಿತ, ನಮ್ಮ ಮಗನಿಗೆ ಕನ್ಯಾದಾನ ಮಾಡಿ ಪುಣ್ಯಕಟ್ಟಿಕೊಳ್ಳುವ ಭರವಸೆಯಲ್ಲಿ ವಧುವಿನ ಜಾತಕ ಕಳಿಸಿರಬೇಕು, ಎಂದುಕೊಂಡೆ. ರಾಯರು ಕತ್ತರಿ ತಂದು ನೀಟಾಗಿ ಕವರು ಒಡೆದು ಪತ್ರ ಕೈಗಿತ್ತರು. ಆಫೀಸಿನ ಕಾಗದದ ಮೇಲೆ ಪುಟ್ ಬುದ್ದಿಯ ಹೆಸರು ಹುದ್ದೆ ನಮೂದಿಸಿ, ಸಹಿ ಮಾಡಿದ ಪತ್ರ. ಒಂದೇ ವಾರದ ಹಿಂದೆ ಮಂಗಳಾರತಿ ಮಾಡಿಸಿಕೊಂಡು ಹೋದಾತನಿಗೆ ಪತ್ರ ಬರೆಯುವಂಥ ಪ್ರಸಂಗ ಏನು ಬಂದಿತು ? ಎಂದು ಯೋಚಿಸುತ್ತ ಓದಲಾರಂಭಿಸಿದೆ.

ಹಿರೇಹಳ್ಳಿ

ಮಾತೃಸಮ ಮೇಡಂರಲ್ಲಿ

ಬೇಡುವ ಆಶೀರ್ವಾದಗಳು

ಪರ್ಸನಲ್ ಪತ್ರ ಬರದಿದ್ದಕ್ಕಾಗಿ ಮೊದಲೇ ಕ್ಷಮೆ ಕೇಳುತ್ತೇನೆ. ಅಚಾನಕ್, ನನ್ನ ಹಿರೇ ಮಗಳ ಮದುವೆ ಗೊತ್ತಾಗಿದ್ದ ವಿಚಾರ ತಿಳಿಯಪಡಿಸಲು ಸಂತೋಷವಾಗುತ್ತದೆ. ವರನು ಕೆ.ಪಿ.ಎಸ್.ಸಿ. ಯಲ್ಲಿ ಆಯ್ಕೆ ಆಗಿದ್ದಾನೆ. ಸರಕಾರಿ ನೌಕರಿಯಲ್ಲಿ ಉತ್ತಮ ಭವಿಷ್ಯ ಇದೆ. ತಾವು ಖಂಡಿತಾ ಈ ಮದುವೆಗೆ ಆಗಮಿಸಿ ವಧು-ವರರನ್ನು ಆಶೀರ್ವದಿಸಬೇಕು. ನಾನು ನಿಮ್ಮಲ್ಲಿ ಹೋದ ವಾರ ಬಂದಾಗ ಸಾಹೇಬರ ದರ್ಶನ ಲಾಭ ಆಗಲೇ ಇಲ್ಲ! ನನ್ನ ಪರವಾಗಿ ಅವರನ್ನು ಆಮಂತ್ರಿಸಿ ನೀವು ಅವರನ್ನು ಕರೆತರಲೇಬೇಕು. ಆಮಂತ್ರಣ ಪತ್ರಿಕೆ ಪ್ರತ್ಯೇಕ ಕಳಿಸುವೆ.

ಈ ಸಂದರ್ಭದಲ್ಲಿ ತಮ್ಮಿಂದ ತುರ್ತು ಸಹಾಯವಾಗಬೇಕು. ನಾನು ಭಾರತ ಸರಕಾರದ ಪ್ರಥಮ ಶ್ರೇಣಿಯ ಅಧಿಕಾರಿ ! ಭಾವಿ ಅಳಿಯನು ರಾಜ್ಯ ಸರಕಾರದಲ್ಲಿ

ಆಫೀಸರ್ ಆಗಲಿದ್ದಾನೆ ! ನಮ್ಮ ಸ್ಥಾನಮಾನಗಳಿಗೆ ಅನುಗುಣವಾಗಿ ವಿವಾಹ ವ್ಯವಸ್ಥೆ ಆಗಬೇಕು ಎಂದು ಎರಡೂ ಕುಟುಂಬದವರು ಅಪೇಕ್ಷಿಸಿದ್ದಾರೆ. ಹೆಚ್ಚಿನದೆಲ್ಲಾ ಹೊಂದಿಸಿಕೊಂಡಿದ್ದೇನೆ. ಊಟ, ಉಪಚಾರದ್ದೇ ಸಮಸ್ಯೆ ! ಮಾಜಿ ಪ್ರಧಾನ ಮಂತ್ರಿ ಅವರ ಕುಟುಂಬದವರನ್ನು ಆಮಂತ್ರಿಸಿದ್ದೇನೆ. ಅವರಿಗೆ ರಾಗಿ ಮುದ್ದೆ ಊಟದ ಏರ್ಪಾಡೂ ಆಗಿದೆ ! ಅದೇ ಊಟ ಮಾಡುವ ಅಡಿಗೆಯವರಿಗೆ ಪಂಚ, ಪಕ್ವಾನ್ನಗಳ ಅಡಿಗೆ ಮಾಡಲು ಬರುವದಿಲ್ಲ! ಅಡಿಗೆಯಲ್ಲಿ ಕರಾವಳಿಯವರದೇ ಎತ್ತಿದ ಕೈ ! ಎಂದು ಸರ್ವರ ಅಭಿಪ್ರಾಯ. ನಿಮ್ಮ ಅಡಿಗೆ ಭಟ್ಟನ ಕೈಚಳಕವನ್ನು ಕಣ್ಣಾರೆ ಕಂಡಿದ್ದೇನೆ. ಅವನನ್ನು ಒಂದು ವಾರದ ಮಟ್ಟಿಗೆ ಮಗಳ ಮದುವೆಯ ವೇಳೆಗೆ ಕಳಿಸುವ ಕೃಪೆ ಮಾಡುವಿರಾ ? ತಾವು ಒಪ್ಪಿದಲ್ಲಿ ನಾನು ಆಫೀಸ ಕೆಲಸ ಹಾಕಿಕೊಂಡು ಬಂದು ನಾನೇ ಸ್ವತಃ ಅವನನ್ನು ಇಲ್ಲಿ ಕರೆ ತಂದು, ತಿರುಗಿ ಮುಟ್ಟಿಸುವ ಜವಾಬ್ದಾರಿ ನಿರ್ವಹಿಸುತ್ತೇನೆ. ಅವನ ಎಲ್ಲ ಬೇಡ–ಬೇಕುಗಳನ್ನು ಪೂರೈಸುವದಲ್ಲದೇ, ಒಂದು ಜೊತೆ ಪಂಚೆ, ಷರ್ಟ ಪೀಸ್, ಉಡುಗೊರೆಯಾಗಿ ಕೊಡುತ್ತೇನೆ. ತಮ್ಮ ಒಪ್ಪಿಗೆಯ ಒಂದು ಸಾಲು ಬರೆಯುವ ಕೃಪೆ ಮಾಡಬೇಕು.

ಇಂತೀ ಶಿ ಸಾ। ನಮಸ್ಕಾರಗಳು.

ತಮ್ಮ ಆಶೀರ್ವಾದಾಪೇಕ್ಷಿ

ಪುಟ್ಟಬುದ್ಧಿ

ಎರಡು, ಮೂರು ಸಲ ಓದಿದರೂ ಅರ್ಥವಾಗಲಿಲ್ಲ, ಯಾವ ಅಡಿಗೆಯವ ? ಅದೂ ನಮ್ಮಲ್ಲಿ? ಎದುರಿಗೆ ರಾಯರು ನಿರ್ವಿಕಾರವಾಗಿ ಕುಳಿತಿದ್ದರು. ಪತ್ರವನ್ನು ಅವರ ಕೈಗಿತ್ತೆ, ಓದಿ, ಗಟ್ಟಿಯಾಗಿ ನಕ್ಕು ಬಿಟ್ಟರು. ತರಕಾರಿ ಮಾರುವ ತರುಣರು, ಹಣ್ಣು ಮಾರುವ ಹುಡುಗಿಯರನ್ನು ಮಾತನಾಡಿಸುವಾಗ ಇವರ ವಿನೋದ ಜಾಗೃತವಾಗುತ್ತದೆ. ಆಗೊಮ್ಮೆ ಈಗೊಮ್ಮೆ ಮನೆಯಲ್ಲೂ, ಅಡಗಿಕೊಂಡ ''ಇಂಪ್'' ಹೊರ ಬರುವದುಂಟು ! ಈ ಪತ್ರದ ಹಿಂದೆಯೂ ಕಾಮತ್ ಕುಹಕ ಇದ್ದಿರಬೇಕು, ಅನಿಸಿತು. ಕಾಡಿ, ಬೇಡಿ, ಕೇಳಿದಾಗ ವಾರದ ಹಿಂದಿನ ಪುಟ್ಟಬುದ್ಧಿಯ ಭೇಟಿಯ ವಿಚಾರ ಹೇಳಿದರು.

''ಮನೆಯ ಕಿರುಗಂಟೆ ಒಂದೇ ಸಮ ಕಿರುಚಿಕೊಳ್ಳಲಾರಂಭಿಸಿತು. ಯಾವನೋ ಹಬ್ಬದ ಚಂದಾ ಕೇಳಲೋ, ಹೊಸ ಸೋಪ್ ಮಾರಲೋ ಬಂದಿರಬೇಕು ಎಂದುಕೊಂಡು ಅಡಿಗೆ ಮನೆಯಲ್ಲಿ ಬೆಂದ ಬೇಳೆಯನ್ನು ತಿರುವುತ್ತಿದ್ದ ಸೌಟನ್ನೇ ಕೈಯಲ್ಲಿ ಹಿಡಿದುಕೊಂಡು ಬಂದು, ಬಂದವರಾರು? ಎಂದು ''ಕನಕನಕಿಂಡಿ'' ತೆರೆದು ನೋಡಿದಾಗ, ವಿಲಕ್ಷಣ ವ್ಯಕ್ತಿ ಕಾಣಿಸಿದ. ಬೆಲೆ ಬಾಳುವ, ಅತ್ಯಾಧುನಿಕ ಸೂಟ್, ರೇಷ್ಮೆ ಕಂಠ ಲಂಗೋಟಿ, ಕೈಯಲ್ಲಿ ಫಳಫಳ ಹೊಳೆಯುವ ನಾಲ್ಕು ಉಂಗುರ, ಮುಂಗೈಗೆ ರೋಲೆಕ್ಸವಾಚು, ಬಕ್ಕ ತಲೆ, ಅಷ್ಟು ದೂರದಿಂದ ವಿದೇಶೀ ಸೆಂಟ್‌ನ ಗಮಗಮ ! ಬಾಗಿಲು ತೆಗೆದು, ಯಾರನ್ನು ಕಾಣಬೇಕಾಗಿತ್ತು ಸರ್? ಎಂದು ಕೇಳಿದೆ. ''ಮೇಡಂ

ಅವರನ್ನು ! ನಾನು ಪುಟ್ಟಬುದ್ಧಿ. ಮೇಡಂ ಅವರ ಇಲಾಖೆಯಲ್ಲಿ ಭಾರತ ಸರಕಾರದ ಪ್ರಥಮ ದರ್ಜೆಯ ಉಚ್ಚ ಅಧಿಕಾರಿ ! ಮೇಡಂ ಅವರಿಗೆ ನಾನು ಬಂದದ್ದು ಹೇಳಬೇಕು ಎಂದರು. ''ಅವರು ತುರ್ತು ಕೆಲಸದ ಮೇಲೆ ಆಫೀಸಿಗೆ ಹೋಗಿದ್ದಾರೆ. ತಾವುಗಳು ಬರುವ ವಿಚಾರ ಅವರಿಗೆ ತಿಳಿಸಿರಲಿಲ್ಲವೆ ? ಎಂದು ಪ್ರಶ್ನಿಸಿದಾಗ, ''ಅವರು ಆಫೀಸ ಕೆಲಸದ ಮೇಲೆ ಬಂದವರನ್ನು ಯಾರನ್ನೂ ಮನೆಗೆ ಸೇರಿಸೋದಿಲ್ಲ ಅಂತ ಕೇಳಿದ್ದೀನಿ ! ಅರ್ಜಂಟ್, ಪರ್ಸನಲ್ ಕೆಲಸ ಇತ್ತು, ಅದಕ್ಕೇ ಬರಬೇಕಾಯಿತು'' ಅಂದರು.

ಒಳಗೆ ಬರಮಾಡಿಕೊಂಡೆ. ನನ್ನನ್ನು ಅಪಾದಮಸ್ತಕ ನೋಡಿ, ಬೂಟು ಬಿಚ್ಚಿಡ ಬೇಕೇನಯ್ಯಾ ? ಎಂದು ವಿಚಾರಿಸಿದಾಗ ''ತಮ್ಮಂಥೋರ ಪಾದಧೂಳಿ, ಮನೆಗೆ ಸೇರಿಕೊಂಡ್ರೆ ಸಂತೋಷ ಸರ್ ! ಇರ್ಲಿ ಬಿಡಿ. ಎಂದಾಗ ಸಂತೋಷವಾದಂತೆ ಕಂಡರು. ''ಆಫೀಸಿಗೆ ಫೋನು ಮಾಡಿ, ತಾವು ಬಂದದ್ದು ತಿಳಿಸ್ಲಾ? ಎಂದಾಗ ಬೆಚ್ಚಿ ಬಿದ್ದು ''ಬೇಡ, ಬೇಡ. ರಂಬಾಟವಾದೀತು ! ಮೇಡಂಗೆ ಮೂಗಿನ ಮೇಲೇ ಸಿಟ್ಟು! ಅವರು ಬೇಕಾದಾಗ ಬರ್ಲಿ, ಕಾಯ್ತಿರ್ತೀನಿ'' ಎನ್ನುತ್ತ ಜೇಬಿನಿಂದ ಕರವಸ್ತ್ರ ಎಳೆದು ಶುಭ್ರವಾಗಿಯೇ ಇದ್ದ ಸೋಫಾವನ್ನು ಶುಚಿಗೊಳಿಸಿ ಆರೂಢರಾದರು. ಪ್ಯಾಂಟ್ ಹಿಂದಿನ ಜೇಬಿನಿಂದ ಇನ್ನೊಂದು ಕೊಳೆಯಾದ ವಸ್ತ್ರ ತೆಗೆದು ತಮ್ಮ ಇಟಾಲಿಯನ್ ಶ್ಯೂಗಳನ್ನು ತಿಕ್ಕಿ ಒರೆಸಿ ಹೊಳೆಯುವಂತೆ ಮಾಡಿದರು. ''ಕಾಫಿ, ಟೀ, ಏನಾದರೂ ಬೇಕೆ ? ಎಂದಾಗ ಹ್ಞಹ್ಞ! ಬಿಸಿ ಕಾಫಿ ಇರ್ಲಿ ! ಜೊತೆಗೇನಾದ್ರೂ ಕುರುಕಲು ತಿಂಡಿ ಇರ್ಲಿ ! ಕರಾವಳಿಯ ತಿಂಡಿ–ತಿನಿಸುಗಳು ಅಪೂರ್ವವಾಗಿರುತ್ತವೆ ಎಂದು ಮೇಡಂ ಅವರೇ ತಮ್ಮದೊಂದು ಲೇಖನದಲ್ಲಿ ವರ್ಣಿಸಿದ್ದಾರಲ್ಲ!'' ಎಂದು ಅಪ್ಪಣೆ ಕೊಡಿಸಿದರು. ದೊಡ್ಡ ಕಪ್ ತುಂಬ ಹೊಗೆಯಾಡುವ ಬ್ರೂಕಾಫಿ. ''ಭವಾನಿ ಬೇಕರಿ''ಯಿಂದ ತಂದ ನೇಂದ್ರಬಾಳೆ ಹಲ್ವ, ಬಾಳೆಕಾಯಿ ಚಿಪ್ಸ್ ಹಾಗೂ ಚೌಚೌ, ಪ್ಲೇಟಿನಲ್ಲಿಟ್ಟು ಅವರೆದುರು ಇಟ್ಟಾಗ, ಪ್ರಸನ್ನವದನರಾದರು. '' ನೀನು ಮಾಡಿದ ತಿಂಡಿ, ಹಾಗೂ ಫಿಲ್ಟರ್ ಕಾಫಿ, ಎಲ್ಲಾ ಚೆನ್ನಾಗಿದ್ದವಯ್ಯಾ !'' ಉದರಕ್ಕೆ ಅವನ್ನೆಲ್ಲ ಇಳಿಸಿದ ಬಳಿಕ ಮಾತು ಹೊರಟಿತು.

''ಅಲ್ಲಯ್ಯಾ ! ಕಾಣಲು ಒಳ್ಳೆಗಟ್ಟಿ ಮುಟ್ಟಾಗಿದೀಯ. ಒಳ್ಳೆ ಸಂಬಳ ತರುವ ನೌಕರಿ ಎಲ್ಲಾದರೂ ಹಿಡಿಯಬಾರದಿತ್ತೇ ?'' ಲೋಕಾಭಿರಾಮವಾಗಿ ಮಾತನಾಡಲು ಪ್ರಾರಂಭಿಸಿದರು. ''ಯತ್ನಿಸದೇ ಇರುತ್ತೇನೆಯೆ? ಅದೆಷ್ಟು ನೌಕರಿಗೆ ಅರ್ಜಿ ಸಲ್ಲಿಸಿದೆನೆಂದು ನನಗೇ ತಿಳಿಯದು ! ಎಲ್ಲ ಕಡೆಯೂ ಒಂದೇ ಹಾಡು. ಕಡುಬಡವರಿಗೆ ಪ್ರಥಮ ಆದ್ಯತೆ ! ಕರೆ ಕಳಿಸದೇ ಹೋಗಿದ್ದರೆ, ಬರು–ಹೋಗುವ ಖರ್ಚು, ಊಟ, ತಿಂಡಿಯ ವೆಚ್ಚವಾದರೂ ಉಳಿಯುತ್ತಿರಲಿಲ್ಲವೇ ?'' ಎಂದು ಆಯ್ಕೆಯಾಗದಿದ್ದಾಗ ವಿಚಾರಿಸಿದಾಗ, ''ಕಾನೂನಿನಂತೆ ಸರ್ವರಿಗೂ ನಾವು ಸಮಾನತೆ ತೋರಿಸಲೇ ಬೇಕಾಗುತ್ತದೆ. ಹಾಗೆ ಮಾಡದಿದ್ದರೆ, ನೀನೇ ನಮಗೆ ಬುದ್ಧಿ ಕಲಿಸುತ್ತೇನೆಂದು ಕೋರ್ಟಿಗೆ ಹೋಗುತ್ತಿಯಾ'' ಎಂಬ ವಾದ ಬೇರೆ ! ನೌಕರಿಗಾಗಿ ಹರಿಸಿದ ಹಣ, ಉಳಿತಾಯ ಮಾಡಿದರೆ ಹಿಂದೊಮ್ಮೆ ಬೆಂಗಳೂರಿನಲ್ಲಿ ಒಂದು ಸ್ಯಾಟ್ ಕೊಳ್ಳಬಹುದಾಗಿತ್ತು !''

ಎಂದು ಜೋಲು ಮುಖ ಹಾಕಿ ವಿವರಿಸಿದಾಗ ಅನುಕಂಪ ತೋರಿಸಿದರು. ''ಹೋಗಲಿ, ಅಡಿಗೆಯನ್ನೇ ಜೀವನೋಪಾಯ ಮಾಡಿಕೊಳ್ಳುವದಾದರೆ, ಮದುವೆ, ಮುಂಜಿ, ಸಮಾರಾಧನೆಗಳಲ್ಲಿ ದುಡಿದರೆ, ಕೈತುಂಬ ಸಂಪಾದನೆ ಮಾಡಿ, ಉಳಿದ ದಿನಗಳಲ್ಲಿ ವಿರಾಮವಾಗಿ ಇರಬಹುದಾಗಿತ್ತಲ್ಲ? ಎಂದು ಜಾಣ್ಮೆಯ ಮಾತು ಆಡಿದರು. ''ಅಲ್ಲೆಲ್ಲ ವಿಪರೀತ ದುಡಿಬೇಕು ಸಾರ್! ಇಲ್ಲಿ ನೋಡಿ, ಸುಖವಾಗಿದೀನಿ! ಅಮ್ಮಾವರು ಮಿತವಾಗಿ ಊಟ ಮಾಡ್ತಾರೆ. ಮಾಡಿದ ಅಡಿಗೆಯಲ್ಲಿ ಬಹುಪಾಲು ನನಗೇ ಮೀಸಲು.''ಭಟ್ಟರು ಮಾಡಿದ್ದೇ ಅಮವಾಸ್ಯೆ'' ಅಂತ ಗಾದೆನೇ ಇದೆಯಲ್ಲ? ನಾನು ಮಾಡಿದ್ದೇ ಅಡಿಗೆ. ಒಮ್ಮೆ ಕೂಡಾ ಅವರು ಅದೇಕೆ, ಇದೇಕೆ ಎಂದು ಪ್ರಶ್ನಿಸಿದವರೇ ಅಲ್ಲ.

''ಸಂಬಳ, ರಜಾ ದಿನಗಳ ವ್ಯವಸ್ಥೆ ಏನು ಮಾಡಿಕೊಂಡಿದೀಯ ?'' ಎಂದು ಕುತೂಹಲ ತಡೆದುಕೊಳ್ಳಲಾರದೇ ಕೇಳಿದರು.

''ನನಗೆ ಬೀಡಿ,ಸಿಗರೇಟು, ಎಲಡಿಕೆ, ನಸ್ಯ, ಯಾವ ಚಟಗಳೂ ಇಲ್ಲ. ಹಣಕಾಸಿನ ಅಗತ್ಯವೂ ಇಲ್ಲ! ಸಂಬಳ ಕೇಳಲಿಲ್ಲ, ಅಮ್ಮಾವ್ರು ಕೊಡಲಿಲ್ಲ. ಹಣದ ವಿಲೇವಾರಿ, ಲೆಕ್ಕಾಚಾರದ ವಿಷಯದಲ್ಲೀ ಈ ಮೇಡಂಗೆ ತೀರಾ ಅಲಕ್ಷ್ಯ. ! ಅಂತೆಯೇ ಅವರ ಹಸ್ತಾಕ್ಷರ ಪಡೆದು ನಾನೇ ಸಕಲ ಬ್ಯಾಂಕ್ ವ್ಯವಹಾರ ನೋಡಿಕೊಳ್ಳುತ್ತೇನೆ. ಡೈರೆಕ್ಟರ್ ಅಂದು ಕೊಳ್ತಾರೆ–ಕೇಂದ್ರ ಸರಕಾರದ ಖಾತೆಯ ನಿರ್ದೇಶಕರಿಗೆ ಇಷ್ಟು ಕಡಿಮೆ ಸಂಬಳವೇ! ಅಂತ ನನಗೇ ಅಚ್ಚರಿ! ಹೀಗಾಗಿ ಕನಿಕರಪಟ್ಟು, ನಾನೂ ಅದೂ–ಇದೂ ಕೇಳುವದಿಲ್ಲ ಕಣ್ರೀ! ಇದು ನೋಡಿ ಈ ಬನಿಯನ್ ಮೊಣಕಾಲ ತನಕದ ಚಡ್ಡಿ. ಇದೇ ನನ್ನ ಬಟ್ಟೆ ಬರೆ. ಸಮವಸ್ತ್ರ ಕೂಡ ! ಅಂಚೆ, ವಿದ್ಯುತ್ ಕಚೇರಿ, ಪೇಟೆಗೆ ಹೋಗುವದಕ್ಕಾಗಿ ಎರಡು ಜೊತೆ ಬಟ್ಟೆ ಹೊಲಿಸಿ ಯಾವ ಕಾಲ ಆಯ್ತೊ? ಬೇಗ ಹರಿಯೋದಿಲ್ಲ ಬೇರೆ ! ಇನ್ನೆಷ್ಟು ವರ್ಷ ತಾಳಿಕೆ ಬರುತ್ತವೋ ನೋಡಬೇಕು'' ನನ್ನ ಜೀವನದ ಹಾಸು ಹೊಕ್ಕು ಗಳನ್ನು ವಿವರಿಸಿದೆ.

''ಮೇಡಂ ಅವರ ಸಂಸಾರದ ಬಗ್ಗೆ ಆಫೀಸಿನಲ್ಲಿ ಯಾರಿಗೂ ಏನೂ ಗೊತ್ತಿಲ್ವಲ್ಲಾ? ನಿಂಗೆ ಗೊತ್ತಿದ್ದಷ್ಟು ಹೇಳಯ್ಯ! ಯಾರಿಗೂ ಅದನ್ನು ಹೇಳೊಲ್ಲ! ತಿಮ್ಮಪ್ಪನ ಮೇಲೆ ಆಣೆ ಮಾಡಿ ಹೇಳ್ತಿನಿ'' ಎಂದು ನನ್ನ ಪ್ರತಿಕ್ರಿಯೆಗಾಗಿ ಕಾದರು. ''ನೋಡಿ, ಸರ್ ! ನಾನು ಉಂಡ ಮನೆಗೆ ಎರಡು ಬಗೆದವನೇ ಅಲ್ಲ, ಸತ್ಯ ಸಂಗತಿ ಹೇಳಲು ಯಾವ ಮುಲಾಜೂ ಇಲ್ಲ.. ಅಮ್ಮಾವ್ರು ಯೋಗ್ಯವರನನ್ನು ಎದುರು ನೋಡ್ತಾ ತುಂಬಾ ವರ್ಷ ಮದುವೆ ಮಾಡಿಕೊಳ್ಳಲಿಲ್ಲ. ನಂತರ ಅಮೇರಿಕೆಯಲ್ಲಿ ತುಂಬಾ ಓದಿದವರು ಒಬ್ರು ಕಣ್ಣಿಗೆ ಬಿದ್ರು. ಮೀನಿಗಾಗಿ ಕಾದ ಬಕದಂತಿದ್ದವ್ರು. ಕಣ್ಣು ಮುಚ್ಚಿ ತೆರೆಯುವದರೊಳಗೆ ಅವರನ್ನು ವರಿಸಿಯೇ ಬಿಟ್ರು! ಕೆಲ ಕಾಲ ಜೊತೆಗೆ ಇದ್ದರಂತೆ. ಮಗ ಹುಟ್ಟಿದ ಮೇಲೆ ಒಬ್ಬರಿಂದೊಬ್ಬರು ವರ್ಷಗಟ್ಟಲೇ ದೂರವೇ ಇರಲಾರಂಭಿಸಿದರು. ಒಬ್ಬರು ಬಂಗಾಲ ದಲ್ಲಿದ್ದರೆ, ಇನ್ನೊಬ್ಬರು ಕರ್ನಾಟಕದಲ್ಲಿ. ಒಬ್ಬರು ರಾಜಸ್ತಾನದಲ್ಲಿದ್ದರೆ, ಇನ್ನೊಬ್ಬರು ಮಹಾರಾಷ್ಟ್ರದಲ್ಲಿ. ಹೀಗೆ ಕಾಲು ಶತಕ ಜಾರಿಕೊಂಡಿತು.. ಎಂದು ವಿವರಿಸುತ್ತಿದ್ದಂತೆ,

ನಡುವೆಯೇ ಬಾಯಿ ಹಾಕಿ ''ಹಾಗಾದರೆ ಆ ಮಗುವನ್ನು ಯಾರು ಬೆಳೆಸಿದರು ?'' ಎಂದು ಪ್ರಶ್ನಿಸಿದರು. ''ಅವನೋ ! ಇಂಥಾ ಅಪ್ಪ–ಅಮ್ಮನ ಸಹವಾಸವೇ ಬೇಡ ಅಂತ, ಅಜ್ಜಿ ಮನೆಯಲ್ಲಿ ಹಾಯಾಗಿದ್ದು ಸ್ಕೂಲು, ಕಾಲೇಜು, ಎಂಜನೀಯರಿಂಗ್ ಕಲಿತು ಈಗ ಅಮೇರಿಕೆಯಲ್ಲ ಇದ್ದು ಬಿಟ್ಟಿದ್ದಾನೆ ! ಅಪ್ಪ–ಅಮ್ಮನ ಸಂಸಾರದ ರೀತಿ ನೋಡಿ ಅವನೂ ನೋಡಿ, ಸಾರ್ ! ಮದ್ವೆ ಮಾಡಿಕೊಳ್ಳೊ ಸಾಹಸಾನೇ ಮಾಡಿಲ್ಲ!'' ವಿವರಣೆ ಕೊಟ್ಟೆ.

''ಮೇಡಂಗೆ ಹಣದ ಅನುಕೂಲ ಅಷ್ಟೊಂದು ಇಲ್ಲ ಅಂತೀಯ ? ನಾನೊಬ್ಬನೇ ಗಳಿಸ್ತಾ ಇದ್ರೂ ಶ್ರೀಮಂತರ ಗುಂಪಿಗೆ ಬರ್‍ತೀನಿ ! ನಿಮ್ಮಮ್ಮನವರ ಕುಟುಂಬದಲ್ಲಿ ಮೂವರು ಗಳಿಸ್ತಾ ಇದಾರೆ. ಅವರ ಸ್ಥಿತಿ ಹೀಗೇಕೆ ? ಎಂದು ಸವಾಲು ಹಾಕಿದರು.

''ಮಗನು ಅಮೇರಿಕೆಯಲ್ಲಿ ಕೈತುಂಬ ಗಳಿಸಿದರೂ ಅವನ ಖರ್ಚು ತೂಗಿಸಿಕೊಂಡು ಹೋಗೋದೇ ಕಷ್ಟ ! ಅಮ್ಮಾವ್ರ ಯಜಮಾನ್ರು ಅಷ್ಟೇ ಬುದ್ದಿವಂತ ರಂತೆ ! ಚಿತ್ರ ಬಿಡಿಸ್ತಾರೆ. ಫೋಟೋ ಹಿಡಿತಾರೆ. ಪುಸ್ತಕ ಬರೀತಾರೆ. ಆದರೆ ದುಡ್ಡು ಮಾಡೋ ಬುದ್ಧಿ – ಮನಸ್ಸು ಎರಡೂ ಇಲ್ಲಾದ್ರೆ, ಬೇರೆ ಜನ ಹಣ ತಂದೂತಂದೂ ಇವರ ಜೋಬು ತುಂಬಿಸ್ತಾರ್‍ಯೇ ?... ಎಂದು ವಿವರಿಸುತ್ತಿದ್ದಂತೆ ನೀನು ಬೀಗ ತೆಗೆದು ಒಳಗೆ ಬಂದೇ ಬಿಟ್ಟೆ ! ಆ ಪುಟ್ಟ ಬುದ್ಧಿ ನಿನಗೆ ತೋರಿದ ಗೌರವ ಎದ್ದು ನಿಂತು ಕೈಜೋಡಿಸಿ ನಿಂತಾಗ, ಮುಖದಲ್ಲಿಯ ಗಾಬರಿ, ಭಯ ಕಂಡು ಅವಾಕ್ಕಾದೆ. ಇನ್ನು ಮನೆಯಲ್ಲೇ ಇದ್ದರೆ, ಈ ''ಅಡಿಗೆ ಭಟ್ಟ'' ತನ್ನನ್ನು ''ಮಂಗ್ಯಾ'' ಮಾಡಿದ್ದು ಗೊತ್ತಾಗಿಬಿಟ್ಟೀತು ? ಎಂದು ಕೈಚೀಲಗಳನ್ನು ಎತ್ತಿಕೊಂಡು, ಬೇಗ ಬಟ್ಟೆ ಬದಲಾಯಿಸಿ, ತರಕಾರಿ ತರುವ ನೆವ ದಲ್ಲಿ ಹೊರಟೇಬಿಟ್ಟೆ !.... ಏನು ಹೇಳಿದರು ಬುದ್ಧಿಯವರು ?'' ರಾಯರು ಈಗ ನನ್ನ ಮಾತಿಗೆ ಕಿವಿಕೊಟ್ಟರು.

''ಅವನೋ ಮಹಾಕಳ್ಳ ! ಯಾವ ಕೇಂದ್ರಕ್ಕೆ ಕಳಿಸಿದರೂ ಅಧಿಕಾರದ ಆಫೀಸಿನ ಸಿಬ್ಬಂದಿಯ ಬಲದಿಂದ ಸರಕಾರಕ್ಕೆ ಮೋಸ ಮಾಡುತ್ತಲೇ ಇದ್ದಾನೆ ! ಆ ಅವ್ಯವ ಹಾರವೋ, ಖೋಟಾ ರಸೀದಿಗಳೋ ! ಅವನ ವಿರುದ್ಧದ ದೂರುಗಳಿಂದ ಬೇಸತ್ತು ತನಿಖೆ ನಡೆಸುವಂತೆ ದಿಲ್ಲಿಯ ಅಧಿಕಾರಿಗಳಿಗೆ ಸೂಚಿಸಲಾಗಿತ್ತು, ಅದರ ಸುಳಿವು ಅವನಿಗೆ ಹತ್ತಿರಬೇಕು ! ಬೆಣ್ಣೆ ಹಚ್ಚಲು ಮನೆಗೆ ಬಂದಿರಬೇಕು. ಆಫೀಸಿನ ಕೆಲಸಕ್ಕೆ ಮನೆಗೆ ಬಂದದ್ದಕ್ಕೆ ತರಾಟೆಗೆ ತೆಗೆದುಕೊಂಡು ಅವತ್ತು ಹಿಂದೆಯೇ ಕಳಿಸಿದ್ದೆ. ಈ ಹಿನ್ನಲೆಯಲ್ಲಿ ನಿಜಕ್ಕೂ ಈ ಪತ್ರ ಬಂದದ್ದು ವಿಚಿತ್ರವೇ ! ನೀವು ಅವನನ್ನು ಇಂಗು ತಿಂದ ಮಂಗ ಮಾಡಿ ಕಳಿಸಿದ್ದು ತಿಳಿಯಿತು'' ಎಂದು ಮನವಾರೆ ನಕ್ಕುಬಿಟ್ಟೆ. ನಂತರ ''ಅಲ್ರೀ ಅಷ್ಟು ಆಗ್ರಹದಿಂದ ಕರೀತಾ ಇದ್ದಾನೆ ! ಹಿರೇಹಳ್ಳಿಗೆ ಹೋಗಿ ಹೊಸ ಹೊಸ ಅನುಭವ ಪಡೆಯ ಬಹುದಲ್ಲ ? ಹೊಸ ಪುಸ್ತಕಕ್ಕೆ ಸಾಮುಗ್ರಿ ಸಿಗುತ್ತದೆ'' ಎಂದೆ. ಸ್ವಲ್ಪ ತಡೆದು ''ಮೇಡಂ ಯಜಮಾನ್ರು ಈಗ ಎಲ್ಲಿರ್‍ತಾರೆ ? ಎಂದು ಆತ ವಿಚಾರಿಸಿದರೆ, ನಿಮ್ಮ ಕಿತಾಪತಿ, ಹೊರಬೀಳ್ತಾ ಇರಲಿಲ್ಲವೇ? ಕೇಳಿದೆ.

''ಅಯ್ಯೋ ಅದೇನು ಮಹಾ ! ಒಮ್ಮೆ ಗಟ್ಟಿಯಾಗಿ ಸೀನಿ ಇನ್ನೊಂದು ಕಪ್ ಕಾಫಿ ತರ್‍ಲಾ ಸಾರ್ ? ಎಂದು ವಿಷಯಾಂತರ ಮಾಡಿ ಬಿಡ್ತಾ ಇದ್ದೆ'' ರಾಯರೆಂದರು.

■ ■

# ೪. ಏಕಪಾಕ, ಅನೇಕ ರೂಪ

ಭೋಜನದಲ್ಲಿ ನಮ್ಮಿಬ್ಬರ ಇಷ್ಟ ಪ್ರಕಾರಗಳಲ್ಲಿ ಆಕಾಶ–ಪಾತಾಳಗಳ ಅಂತರ ಏದೆ ! ನಾನು ಘಟ್ಟದ ಮೇಲೆ ಬೆಳೆದವಳಾಗಿ, ಎಣ್ಣೆಹೋಳಿಗೆ, ತುಂಬು ಬದನೆಕಾಯಿ, ಸೇಂಗಾ ಹಿಂಡಿ, ಜೋಳದ ಭಕ್ರಿಗಳೆಂದರೆ ತುಂಬ ಪ್ರೀತಿ ! ರಾಯರು ಕರಾವಳಿಯವ ರಾಗಿದ್ದರಿಂದ ಪಾಯಸ, 'ಕಡಲೊಳು ಓಡುವ ಬದನೆಕಾಯಿ' ಅನ್ನಗಳನ್ನು ತುಂಬ ಇಷ್ಟಪಡುವವರು. ಇಷ್ಟಾದರೂ ತನ್ನ ಇಷ್ಟಾನಿಷ್ಟಗಳ ಕುರಿತು ಎಂದೂ ತಕರಾರು ಮಾಡಿದವರಲ್ಲ. ಹೀಗಾಗಿ ಅವರ ಅಭಿರುಚಿಯ ಅಡಿಗೆ ಮಾಡಬೇಕೆಂಬ ಹಂಬಲ ನನ್ನಲ್ಲಿ ಗಟ್ಟಿಯಾಯಿತು. ಆದರೆ ಈ ಪ್ರಕಾರಗಳು, ನನ್ನ ನಾಲಿಗೆಗೆ ಒಗ್ಗುತ್ತಿರಲಿಲ್ಲ. ಕ್ರಮಬದ್ಧವಾಗಿ ಮಾಡಲೂ ಕೈಲಿ ಆಗುತ್ತಿರಲಿಲ್ಲ. ಆಗೀನ ಸಾಹಸದಿಂದ ಅಡಿಗೆ ಮಾಡಿ, ಹಿಂಜರಿಯುತ್ತ ಸ್ವಾದ ಹೇಗಿದೆ ? ಎಂದು ಕೇಳಿದಾಗ, ''ಬೆಳ್ಳುಳ್ಳಿ ಒಗ್ಗರಣೆ ಕೊಟ್ಟ ಗಸಗಸೆ ಪಾಯಸದಂತಿದೆ !'' ಎಂದು ಚುಟುಕಿನಲ್ಲಿ ಉತ್ತರಿಸಿ ತಾವೇ ನಕ್ಕು ಬಿಡುವವರು. ನಿಜಕ್ಕೂ ಚೆನ್ನಾಗಿದ್ದರೆ'' ಮೀನ ಪದಾರ್ಥ ಹೇಗೆ ಆಗಬೇಕೋ ಹಾಗಿದೆ !'' ಎಂಬ ಘನವಾದ ಪ್ರಶಸ್ತಿ ದೊರೆಯುವದು. ಅವರು ಊಟ ಮಾಡುವ ಪದ್ಧತಿಯಿಂದಲೇ ಪಾಕರುಚಿ ಅಳೆಯಬೇಕಿತ್ತೆ ಹೊರತು ಚೆನ್ನಾಗಿದೆ ! ಎಂಬ ಶಬ್ದ ಬಳಿಸುವದರಲ್ಲಿ ಜಿಪುಣರೇ ಎನ್ನಬೇಕು.

ನನಗೆ ಅಡಿಗೆ' ಕೈಗೂಡಲು ಕೆಲ ಕಾಲ ಕಳೆದಿತ್ತು. ನಾನಿನ್ನೂ ಏಳು ವರ್ಷದವಳಿದ್ದಾಗಲೇ ಟಾಯ್‌ಫಾಯ್ಡ್ ಜ್ವರ. ಪಾಕ್ ವಿಶಾರದೆಯಾಗಿದ್ದ ನನ್ನಮ್ಮ ಶಾರದಾಬಾಯಿಯನ್ನು ಆಹುತಿ ತೆಗೆದುಕೊಂಡಿತು. ಆಮೇಲೆ ಚಿಕ್ಕ ತಾಯಿ ಮನೆಗೆ ಬಂದರೂ ಅವರಿಗೆ ಅಡಿಗೆ ಬರುತ್ತಿರಲಿಲ್ಲ. ಹೀಗಾಗಿ ಅಡಿಗೆಯಾಕೆಯು ಮನೆಯಲ್ಲಿ ರುವದು ಅನಿವಾರ್ಯವಾಗಿ ಬಿಟ್ಟಿತ್ತು. ಪೋಸ್ಟ ಮಾಸ್ತರ್ ಪಿತರು, ಕಾಯಂ, ಅಡಿಗೆಯ ವ್ಯವಸ್ಥೆಗೆ ಪರದಾಡುತ್ತಿದ್ದರು. ಒಮ್ಮೆ ಅಂಚೆ ಪೇದೆಯೊಬ್ಬನ ಶಿಫಾರಸಿನ ಮೇರೆಗೆ ಹಿಂದೆ ಮುಂದೆ ನೋಡದೆ 'ಅಡಿಗೆಯಾಕೆಯನ್ನು ನೇಮಿಸಿಕೊಂಡೇ ಬಿಟ್ಟರು. ಅವಳ ಅಡಿಗೆಯ ಪ್ರಭಾವದಿಂದ ನಾವೆಲ್ಲ ಕಡ್ಡಿ ಪೈಲವಾನರಾಗುತ್ತಿದ್ದರೂ, ಆಕೆ ಮೈ ಕೈತುಂಬಿಕೊಂಡು ಕಂಗೊಳಿಸಲಾರಂಭಿಸಿದಳು. ಬಡವೆ, ಅಡಿಗೆ ಬಾರದಿದ್ದರೂ ಪರವಾಯಿಲ್ಲ ಎಂದು ಕೊಂಡರೂ ಅವಳ ಕಿಪ್ಪೊಟ್ಟೆ ಉಳಿದ ಅಂಗಾಂಗಗಳನ್ನು ಮೀರಿ ಬೆಳೆಯಲಾರಂಭಿ ಸಿದಾಗ ಗುಟ್ಟು ರಟ್ಟಾಯಿತು. ! ಅವಳನ್ನು ಕೆಲಸದಿಂದ ವಜಾ ಮಾಡಿದರೂ ಆಕೆ ಯನ್ನು ಉಪಪತ್ನಿಯಾಗಿ ಬಳಸಿದ ಅಂಚೆ ಪೇದೆಯನ್ನು, ಸರಕಾರಿ ನೌಕರನಾದ್ದರಿಂದ

ವರ್ಗಾವಣೆಯ ಶಿಕ್ಷೆ ಕೊಡಲಾಯಿತು. ನಂತರ ಕೆಲಸ ಹುಡುಕಿ ಕೊಂಡು ಬಂದ ವೃದ್ಧೆ ಅಫೀಮಿನ ಚಟದವಳು. ಪರ್ಮಿಟ್ ಮೇಲೆ ಪಡೆದ ಅಫೀಮು ಸೇವಿಸುತ್ತಿದ್ದಾಗ ಸರಿಯಾಗಿರುತ್ತಿದ್ದಳು. ಮುಗಿದು ಹೋದಲ್ಲಿ ಕೈಕಾಲು ಸೆಟಗೊಂಡು ಮಲಗಿಯೇ ಬಿಡುತ್ತಿದ್ದಳು. ಅಫೀಮು ತರಲು ಕಚೇರಿಗೆ ಖುದ್ದಾಗಿ ಹೋಗಬೇಕಾಗು ತ್ತಿತ್ತು. ಅಫೀಮು ಸೇವನೆಯ ಆನಂದದಲ್ಲಿ ಕೊಂಕಣಿ ಹಾಡು ಹಾಡಿ ನರ್ತಿಸಿ ಈ ಮಡಿಯ ಮುದುಕಿ ನಮ್ಮನ್ನು ರಂಜಿಸುತ್ತಿದ್ದರಿಂದ ಅವಳ ಕೆಟ್ಟ ಅಡಿಗೆಯನ್ನು ಮರೆತು ಬಿಡುತ್ತಿದ್ದೆವು. ಒಮ್ಮೆ ಅಫೀಮು ತರಲು ಹೋದಾಗ ಎರೆಹುಳುವಿನಂತೆ ಹೊಸೆದು ಹೋಗುತ್ತಿದ್ದಾಕೆಯನ್ನು ವೇಗದ ವಾಹನವೊಂದು ಆಹುತಿ ತೆಗೆದುಕೊಂಡು ಬಿಟ್ಟಿತು !

ಪಿತರ ಪಾಕನಿಷ್ಣಾತರ ಶೋಧ ಪುನಃ ಪ್ರಾರಂಭವಾಯ್ತು ! ಹುಬ್ಬಳ್ಳಿ ಬಸ್‌ಸ್ಟ್ಯಾಂಡಿನಲ್ಲಿ ಬಾಚಣಿಗೆ, ಟೂಥ್‌ಪೌಡರ್ ಮಾರುವಾತ. ''ನಮ್ಮಜನ'' ಎಂದು ಪತ್ತೆಹಚ್ಚಿ ನೇರ ಮನೆಗೆ ಕರೆ ತಂದರು ! ಸ್ನಾನ ಮಾಡಿಸಿ ಊಟ ಹಾಕಿ ಕೈಯಲ್ಲಿ ಸೌಟಿನ ದೀಕ್ಷೆ ಕೊಡಿಸಿದರು. ಆದರೆ ಆತನಿಗೆ ಮದ್ಯಪಾನದ ಚಟ ಬೇರೆ ! ಪಾನ ಪ್ರತಿಬಂಧದ ದಿನಗಳಲ್ಲಿ ಸಾದಾ ಪಾಕಪ್ರಯೋಗಗಳಿಗೆ ಸಹ ''ಎಣ್ಣೆ''ಯಿಲ್ಲದೆ ಗತಿಯಿರಲಿಲ್ಲ. ಎಲ್ಲಿಂದಲೋ ವಿದೇಶಿ ವ್ವಿಸ್ಕಿಯ ಬಾಟ್ಲಿಯನ್ನು ದುಬಾರಿ ಬೆಲೆಯಿಂದ ತಂದರು ನಮ್ಮ ತಂದೆ. ಆ ಪ್ರಾಣಿ ಇಡೀ ಬಾಟ್ಲಿಯನ್ನು ಒಂದೇ ಬಾರಿ ಮುಗಿಸಿ ಎರಡು ದಿನ ಏಳಲೇ ಇಲ್ಲ ! ಸ್ಕೂಲಿಗೆ ಹೋಗುತ್ತಿದ್ದ ನಮ್ಮಕ್ಕ, ನಾನು ಜಗಳಾಡುತ್ತ, ಪಾತ್ರೆ ಪಡಗದೊಂದಿಗೆ ಗುದ್ದಾಡುತ್ತ ಅಡಿಗೆಯ ಜವಾಬ್ದಾರಿವಹಿಸಲೇಬೇಕಾಯಿತು. ಮುಂದೆ ಅಕ್ಕ ಮುಂಬೈಗೆ ಹೋದದ್ದರಿಂದ ನಾನೇ ಅಡಿಗೆಯ ಸರ್ವಾಧಿಕಾರಿಯಾಗಿ ಅಡಿಗೆಗೆ ಯಾರೂ ಆಕ್ಷೇಪ ಎತ್ತುವಂತೆಯೇ ಇರಲಿಲ್ಲ.''ಭಟ್ಟರು ಹೇಳಿದ್ದೆ ಅಮಾವಾಸ್ಯೆ''ಯಾಯಿತು. ನನ್ನ ನಾಲಿಗೆ ರುಚಿಯನ್ನೇ ಇತರರು ಒಪ್ಪಿಕೊಂಡು ವರ್ಷಗಳು ದಾಟಿದವು. ಆಕಾಶವಾಣಿಯ ಅನಿಯ ಮಿತ ಕೆಲಸದ ಅವಧಿಯಿಂದ ಅಡಿಗೆಯವಳು ಅನಿವಾರ್ಯವಾಗಿದ್ದಳು. ಆದರೆ ರಾಯರ ಕೈ ಹಿಡಿದದ್ದೇ ಈ ಪರಂಪರೆ ಬುಡಮೇಲಾಗಿ ಬಿಟ್ಟಿತು !

ರಾಜಸ್ಥಾನದ ಜೈಪುರದಲ್ಲಿ ಹೊಸ ಸಂಸಾರ ಪ್ರಾರಂಭಿಸಿದ ಮೊದಲ ದಿನ. ಅಡಿಗೆಗೆ ಬೇಕಾಗುವ ಸಾಮಗ್ರಿ, ಪಾತ್ರೆಗಳೆಲ್ಲ ಇರದ್ದರಿಂದ ಊಟಕ್ಕೆ ಹೊಟೇಲಿಗೆ ಹೋಗೋಣ ಎಂದು ಸೂಚಿಸಿದಾಗ, ಏನನ್ನೂ ಹೇಳದೇ ರಾಯರು ಹತ್ತಿರದ ಕಿರಾಣಿ ಅಂಗಡಿಯಿಂದ ಹೆಸರುಬೇಳೆ, ಅಕ್ಕಿ, ಸಂಭಾರ ಕೊಂಚ ತುಪ್ಪ ತಂದರು. ಇದ್ದ ಒಂದೇ ಪಾತ್ರೆಯಲ್ಲಿ ಒಗ್ಗರಣೆ, ಅಕ್ಕಿ, ಬೇಳೆ, ಮಿಶ್ರಣ ಹಾಕಿ ಮೇಣ ಬತ್ತಿಯಂತೆ ಉರಿಯುತ್ತಿದ್ದ ಸೀಮೆ ಎಣ್ಣೆ ಸ್ಟೋವಿನ ಮೇಲೆ ''ಕಿಚಡಿ'' ಸಿದ್ದಮಾಡಿಯೇ ಬಿಟ್ಟರು. ನಿರಾಸಕ್ತಿಯಿಂದ ತುತ್ತನ್ನು ಬಾಯಲ್ಲಿಟ್ಟಾಗ ಇದರಷ್ಟು ರುಚಿಕರ ''ಭಾತ್'' ಇದಕ್ಕೂ ಮೊದಲು ತಿಂದೇ ಇಲ್ಲ! ಅನಿಸಿಬಿಟ್ಟಿತು. ರಾಯರ ನಳಪಾಕದ ಆಳ ಅನುಭವ ಪತ್ತೆಆಗಿಬಿಟ್ಟಿತ್ತು. ಆ ಬಳಿಕ ಅಡಿಗೆಯವರನ್ನು ನೇಮಿಸಿಕೊಳ್ಳುವ ಸಾಧ್ಯತೆಯ ಬಗ್ಗೆ ಸೂಚಿಸುವ ಸಾಹಸ ಕೂಡ ತೋರ್ಪಡಿಸುವ ಧೈರ್ಯ ಆಗಲೇ ಇಲ್ಲ!

ನಮ್ಮಿಬ್ಬರ ಭಿನ್ನ ವೃತ್ತಿಗಳಿಂದಾಗಿ, ಎರಡು ದಶಕಗಳಿಗೂ ಮೀರಿದ ದೀರ್ಘ ಕಾಲ, ನಾವಿಬ್ಬರೂ ಬೇರೆ ಬೇರೆಯೇ ವಾಸಮಾಡುವ ಸಂದರ್ಭ ಒದಗಿತು. ಆ ದಿನಗಳಲ್ಲಿ ಏನು ತಿನ್ನುತ್ತೇವೆ. ಉಣ್ಣುತ್ತೇವೆ ಎಂಬುದರ ಪರಿವೆಯೇ ನಮಗಿರಲಿಲ್ಲ. ಕೊನೆಗೊಮ್ಮೆ ಬೆಂಗಳೂರಿನಲ್ಲಿ ಸಹಜೀವನ ಪ್ರಾರಂಭಿಸಿದಾಗ ನಮ್ಮ ಭಿನ್ನ ರುಚಿಗಳು ಜೋರಾಗಿಯೇ ಬೆಳಕಿಗೆ ಬಂದವು ! ರಾಯರಿಗೆ ತೀರಾ ಸಾದಾ, ಸಪ್ಪಗಿನ ಊಟ ಇಷ್ಟ. ನನಗೆ ಖಾರ, ಹುಳಿ ಹೆಚ್ಚಿನ ಪ್ರಮಾಣದಲ್ಲಿರುವ ಮಸಾಲೆದಾರ್ (ರಾಯರ ಭಾಷೆಯಲ್ಲಿ ''ಉಗ್ರ'') ಊಟ ಇಷ್ಟ. ಈ ನನ್ನ ಅಭಿರುಚಿಯಿಂದಾಗಿಯೇ ನನಗೆ ಸಿಟ್ಟು ಜಾಸ್ತಿ, ತಾಮಸ ಭೋಜನದ ಪರಿಣಾಮ ! ಎಂದು ರಾಯರು ಗೇಲಿ ಮಾಡುತ್ತಿರುತ್ತಾರೆ. ನನ್ನ ಕೈಯಡಿಗೆ ಊಟ ಮಾಡುವಾಗ ರಾಯರಿಗೆ ಕಣ್ಣು, ಮೂಗು ನೀರಾಡುತ್ತವೆ. ಪದೇ ಪದೇ ನೀರು ಕುಡಿಯುವ ಪ್ರಸಂಗ ಬರುತ್ತದೆ. ಆದರೂ ಹೆಸರು ಇಡದೇ ಊಟ ಮಾಡಿ ಏಳುತ್ತಿದ್ದು ದನ್ನು ನೋಡಿ ಕನಿಕರವೆನಿಸಿ, ತಿರ ಸಪ್ಪಗಿನ ಅಡಿಗೆಯನ್ನು ರೂಢಿಸಿಕೊಂಡೆ. ನನ್ನ ತಾಟಿನಲ್ಲಿ ಖಾರಪುಡಿ, ಲಿಂಬೇಹಣ್ಣು ಕಾಣಿಸಿಕೊಂಡವು. ಕ್ರಮೇಣ ರಾಯರ ಸೂಚನೆಯಂತೆ, ಅವರು ಕೆಲ ಮಟ್ಟಿಗೆ ಹುಳಿ, ಖಾರಪುಡಿ ರೂಢಿಸಿಕೊಂಡು, ನಾನು ಖಾರದ ಪ್ರಮಾಣ ತಗ್ಗಿಸಿದ್ದರಿಂದ ಇಬ್ಬರಿಗೂ ಸರಿ ಹೋಗುವ ಅಡಿಗೆ ರೂಪಗೊಂಡಿತು.

ಅಪರೂಪದ ಅತಿಥಿಗಳು ಬಂದಾಗ ರಾಯರು ಮತ್ಸ್ಯ ಭೋಜನದ ಏರ್ಪಾಡು ಮಾಡುವರು. ಯಶವಂತಪುರದ ಮಾರ್ಕೆಟ್ಟಿನಿಂದ ಮೀನು ಕೊಂಡು ತಂದು ಸ್ವಚ್ಛ ಮಾಡಿ ಮೀನು ಕಡಿ, ಹುರಿದ ಮೀನು ಸಿದ್ಧ ಮಾಡುತ್ತಿದ್ದರು. ಆದರೆ ನನಗೆ ಇವುಗಳಲ್ಲಿರುವ ಅನಾಸ್ಥೆ ನೋಡಿ ತಾವೂ ಕೈಬಿಟ್ಟರು. ಆದರೆ ಇವರ ಸೋದರ–ಸೋದರಿಯರು ಎಂದಾದರೊಮ್ಮೆ ಮೀನಿನ ವ್ಯಂಜನ ಕಳಿಸಿಕೊಡುತ್ತಿದ್ದರು. ಅಷ್ಟನ್ನೆ ಸೇವಿಸುತ್ತ ರಾಯರು ಕ್ರಮೇಣ ಮತ್ಸ್ಯಾಹಾರ ತ್ಯಜಿಸಿದ್ದಾರೆ. ಆಗೀಗ ಉಡುಗೊರೆಯಾಗಿ ಬರುವ ಒಣ ಮೀನನ್ನು ಡಬ್ಬಿಯಲ್ಲಿ ಭದ್ರವಾಗಿಟ್ಟು ಮರೆತು ಬಿಟ್ಟಿದ್ದೂ ಇದೆ !

ರಾಯರು ಅದೆಷ್ಟೋ ಬದಲಾವಣೆಗಳನ್ನು ಅಳವಡಿಸಿಕೊಂಡರೂ ನಮ್ಮ ಅಡಿಗೆ ಸಮಸ್ಯೆ ಬಗೆಹರಿಯಲೇ ಇಲ್ಲ. ತರಕಾರಿಗಳಲ್ಲಿ ಅದೆಷ್ಟೋ ಬಗೆಗಳನ್ನು ತಂದರೂ, ನನಗೆ ಪುನಃ ಅವೇ ಅವೇ ತಿನ್ನುವುದು ಎಲ್ಲಿಲ್ಲದ ಬೇಸರ ! ಅದನ್ನು ಗಮನಿಸಿದ ರಾಯರು ಸಾಧ್ಯವಿದ್ದ ಬೇರೆ ಬೇರೆ ಕಾಯಿಪಲ್ಲೆಗಳನ್ನು ತರುವರು. ಆದರೆ ಎಷ್ಟು ಕಡಿಮೆ ತಂದರೂ ಮಾಡಿದ ವ್ಯಂಜನಗಳು ಮಿಕ್ಕುತ್ತಿದ್ದವು. ಒಂದು ಊಟದ ''ತೊಯ್'' ಇನ್ನೊಂದೂಟಕ್ಕೆ ಹಿರೇಕಾಯಿ ತೊವ್ವೆಯಾಗಿ ಮಾರ್ಪಡುವುದು. ಮತ್ತು ಉಳಿದರೆ ಅದಕ್ಕೆ ತೆಂಗಿನ ತುರಿ, ಕೊತಂಬರಿ ಬೀಜ ಹುರಿದು ರುಬ್ಬಿ ಹಾಕಿದ ಈರುಳ್ಳಿ ಒಗ್ಗರಣೆ ಹೊಂದಿ 'ಆಂಬಟ್'' ಆಗುವುದು. ಕೊನೆಯ ಹಂತದಲ್ಲಿ ಸಾಂಬಾರ್ ಪುಡಿ, ಹುಣಸೆಹುಳಿ, ಹೊಂದಿ ಇಂಗಿನ ಧೂಪದಿಂದ ಹುಳಿ ಸಾರು ಆಗುವುದು.

ಇನ್ನು ಎಲೆಕೋಸಿನ ದಶಾವತಾರ ನಿಮಗೆ ಹೇಳಲೇ ಬೇಕು ! ಹೆಚ್ಚಿದಾಗ, ಕಿರಿದಾಗಿ ತೋರುವ ಕೋಸು, ದೈತ್ಯಾಕಾರ ತಾಳುವುದು, ಗೃಹಿಣಿಯ ಅನುಭವವಷ್ಟೆ ! ಅತಿ ಕಿರಿಯ ಸಂಸಾರಕ್ಕೆ ಇದನ್ನು ತಿಂದು ಮುಗಿಸುವುದು ಹಿರಿದಾದ ಸಮಸ್ಯೆಯೇ.

ಸ್ಯಾಲೆಡ್, ಪಕೋಡ, ಪಲ್ಲೆ ಮಾಡಿ ಮುಗಿಯದು ! ಬೇಯಿಸಿದ ಆಲೂಗಡ್ಡೆ ಸೇರಿಸಿ ''ಸುಕ್ಕೆ'' ಮಾಡಿಯಾಯಿತು. ಸಣ್ಣಗೆ ಹೆಚ್ಚಿ ಕಡ್ಲೆಬೇಳೆ, ಅಕ್ಕಿ ನೆನೆಯ ಹಾಕಿ ರುಬ್ಬಿ ಸೇರಿಸಿ ಫೋಡಿ ಮಾಡಿದೆ. ಒಂದೂಟಕ್ಕೆ ಬೇಡವೆನಿಸಿತು. ಆದರೂ ಕೋಸು ಕಣ್ಮರೆಯಾಗಲು ನಿರಾಕರಿಸಿತು. ಕೊನೆಗೂ ಉತ್ತರ ಭಾರತದ ಪದ್ಧತಿಯಲ್ಲಿ ನಾಶ್ತಾಕ್ಕೆ ''ಗೋಬಿ ಪರಾಠ'' ಮಾಡಿ ಕೈತೊಳೆದುಕೊಂಡೆ. ತಿಂಗಳುಗಟ್ಲೆ ಕೋಸಿಗೆ ಬಹಿಷ್ಕಾರ ಹಾಕಿದ್ದಾಯ್ತು!

ಹಬ್ಬ–ಹರಿದಿನಗಳಲ್ಲಿ ಸಿಹಿ ಅಡಿಗೆ ಇನ್ನೂ ಕಷ್ಟಕ್ಕಿಟ್ಟುಕೊಳ್ಳುತ್ತದೆ. ನನಗೆ ಸೌಮ್ಯ ಸಿಹಿ ಸೇರಿದರೆ ರಾಯರಿಗೆ ಪಾಕದಷ್ಟು ಸಿಹಿ ಪ್ರಮಾಣ ಇಷ್ಟ. ಹೀಗಾಗಿ 'ಸಾಂಜ್ (ಸಜ್ಜಿಗೆ) ಮೊದಲಿಗೆ, ಶಿರಾ ಆ ಬಳಿಕ ಹೀಗೆ ಎರಡು ಪ್ರಕಾರದ ಮೃಷ್ಟಾನ್ನಗಳು ನಮಗೆ. ಮತ್ತು ಆ ಶಿರಾ ಉಳಿದರೆ ಗೋಡಂಬೆ–ದ್ರಾಕ್ಷೆ ತೆಗೆದು ಉಂಡಿ ಕಟ್ಟಿ ಅವಕ್ಕೆ ಮೈದಾ ಕಣಿಕದ ಅಂಗಿ ತೊಡಿಸಿ 'ಸಾಂಜೋರಿ'' (ಸಜ್ಜಿಗೆ ಹೋಳಿಗೆ) ಮಾಡುತ್ತೇನೆ. ಇದು ಮೂರನೆಯ ಸ್ವೀಟ್ ! ಒಮ್ಮೊಮ್ಮೆ ಶಿರಾಕ್ಕೆ ಹೊಸದಾಗಿ ಗೋಡಂಬಿ, ದ್ರಾಕ್ಷೆ, ಹಾಲು, ಕೇಸರಿ ಸೇರಿಸಿ ಚೆನ್ನಾಗಿ ಮಳ್ಳಿಸಿ ''ಪುಡಿಂಗ್'' ಮಾಡಿ ಬಿಡುತ್ತೇನೆ. ಈ ಅವತಾರಗಳಿಗೆಲ್ಲ – ''ಅವಾಂತರ''ಗಳ ಪಾಕ ಪ್ರಯೋಗಗಳಿಗೆಲ್ಲ, ಬಲಿಪಶು ಯಾರು ? ಎಂದು ಕೇಳಬೇಡಿ.

ನಾನು, ಕೊಂಚ ಬದಲಾವಣೆಗೆಂದು ಆಗೀಗ ಸಿರ್ಸಿ, ಧಾರವಾಡ, ಧರ್ಮಸ್ಥಳ, ಮೈಸೂರುಗಳಿಗೆ ಹೋಗಿ ಬರುವುದುಂಟು. ರಾಯರು ತಮ್ಮ ಅಲೆಮಾರಿತನಕ್ಕೆ ಎಂದೋ ಇತಿಶ್ರೀ ಹಾಡಿದ್ದಾರೆ. ಮನೆಗೆ ಕಾವಲುಗಾರನಾಗಿರುತ್ತೇನೆ ಎಂದು ಪ್ರತಿಸಲ ಆಮಂತ್ರಿಸಿದಾಗಲೂ ಜಾರಿಕೊಳ್ಳುತ್ತಾರೆ. ಅವರಿಗೆ ಯಾವತ್ತೂ ಗೃಹಕೃತ್ಯಗಳು ಕರಗತವಾಗಿರುವದರಿಂದ ಒಂದಿಷ್ಟೂ ಅಳುಕದೇ ಹೊರಟು ಬಿಡಲು ನನಗೆ ಅನುಕೂಲವಾಗಿದೆ. ''ಏನೂ ತರಾತುರಿಯಿಲ್ಲ! ಬೇಕಾದಷ್ಟು ದಿನ ವಿಶ್ರಾಂತಿ ಪಡೆದು ಬಾ !'' ಎಂದು ಹೊರಟಾಗ, ಹೇಳಲು ಮರೆಯುವದಿಲ್ಲ. ರಾಯರು ಆ ಬಳಿಕ ತಪ್ಪಿ ಕೂಡ ಕಾರ್ಡು ಬರೆಯುವದಿರಲಿ, ಫೋನಿಸುವದಿರಲಿ, ಫೋನು ಎತ್ತಿಕೊಳ್ಳುವ ಗೋಜಿಗೂ ಹೋಗುವದಿಲ್ಲ ! ಹೊರಡುವಾಗ ನಾನು ಮನೆಯ ಕೀಲಿಕೈ ಮರೆತಿಲ್ಲ ಎಂದು ದೃಢಪಡಿಸಿಕೊಳ್ಳುವದರಿಂದ ನನ್ನ ಬರವಿಗಾಗಿ ತಾನು ಕಾಯುತ್ತ ಕುಳಿತು ಕೊಳ್ಳುವ ಪ್ರಮೇಯವನ್ನು ತಂದುಕೊಳ್ಳುವದಿಲ್ಲ. ಒಂದು ವಾರ, ಒಂದು ತಿಂಗಳು ಹೊರಗಿದ್ದು ಬಂದರೆ ಅವರಿಗಂತೂ ಯಾವ ವ್ಯತ್ಯಾಸವೂ ಬೀಳುವದಿಲ್ಲ. ಆದರೆ ನಾನು ನಿರೀಕ್ಷಿತ ಅವಧಿಗಿಂತ ಮೊದಲೇ ಬಂದು ಬಿಡುವುದು ಜಾಸ್ತಿ. ಒಟ್ಟಿಗಿದ್ದಾಗ ಬದಲಾವಣೆ ಬೇಕೆನಿಸಿದರೂ ದೂರ ಹೋದಾಗ, ಬೇಗನೇ ಮನೆಗೆ ಹಿಂದಿರುಗು ವಂತಾಗಿ ಬಿಡುತ್ತದೆ.

ಹಿಂದಿರುಗಿದಾಗ ಒಂದು ಊಟಕ್ಕಾಗುವಷ್ಟೂ ಅಡಿಗೆ, ಮನೆಯಲ್ಲಿರುವದಿಲ್ಲ ! ಇಷ್ಟು ದಿನ ರಾಯರು ಏನು ಅಡಿಗೆ ಅಟ್ಟು ಉಂಡಿರಬಹುದು ? ಎಂದು ಕುತೂಹಲ ಕೆರಳುತ್ತದೆ. ಮತ್ತೆ ಮತ್ತೆ ವಿಚಾರಿಸಿದಾಗ ''ಮುರ್ಗಿ ಮಸಾಲೆಯ ಮೇಜವಾನಿಯಿತ್ತು ! ಸಧ್ಯ ನೀನು ಮನೆಯಲ್ಲಿರದ್ದು ಅನುಕೂಲವೇ ಆಯಿತು'' ಎಂದು ಛೇಡಿಸುತ್ತಾರೆ. ''ಅದು

ನಿಜವಾಗಿದ್ದರೆ ಅತ್ಯಂತ ಖುಷಿಯಾಗಿರುತ್ತಿದ್ದೆ. ನೀವು ಹೊಟ್ಟೆ ತುಂಬ ಊಟ ಮಾಡಿಲ್ಲ! ಎಂದು ಇಡೀ ಅಡಿಗೆ ಮನೆ ಸಾರಿ ಹೇಳುತ್ತಿದೆ. ಆದ್ದರಿಂದ ಕೇಳುತ್ತಿದ್ದೇನೆ. ನಿನ್ನೆ ರಾತ್ರಿ ಏನು ಉಂಡಿರಿ ?'' ಪುನಃ ಕೇಳುತ್ತೇನೆ.

''ಅದೆಲ್ಲ ಯಾರು ನೆನಪಿಡುತ್ತಾರೆ ?'' ಹಾರಿಕೆಯ ಮಾತು ಒಂದು ವರ್ಷದ ಹಿಂದೆ ಮಾಡಿದ ಅಡಿಗೆಯನ್ನು ನೆನಪಿಡುವ ಮನುಷ್ಯ ! ಒಂದೆರಡು ದಿನ ಹಿಂದಿನ ಅಡಿಗೆ ನೆನಪಿಟ್ಟಿಲ್ಲ ಎಂದರೆ ನಂಬುವದಾದರೂ ಹೇಗೆ ? ನನ್ನ ವಾದ ಮುಂದರಿಯುತ್ತದೆ.

ಸರಿ ! ತಮ್ಮ ಪಾಕ ಪ್ರಯೋಗದ ವರದಿ ಬಿಚ್ಚಿಡುವರು. ''ನೀನು ಹೊರಟ ದಿನ ವಿರಹವೇದನೆ ತಾಳಲಾರದೇ, ಬರೇ ಅನ್ನ ಮಾಡಿದೆ. ತುಪ್ಪ ಲಿಂಬೆ ಹಣ್ಣು ಉಪ್ಪು ಸೇರಿಸಿ ಊಟವಾಯಿತು. ರಾತ್ರಿಗೆ ಹಾಲು ಅನ್ನ ಮಿಡಿ ಉಪ್ಪಿನಕಾಯಿಯ ಭೋಜನ ನೆರವೇರಿತು. ಮರುದಿನ ಎದುರಾದ ಆ ಅನ್ನಕ್ಕೆ ಈರುಳ್ಳಿ ಒಗ್ಗರಣೆ, ಟೊಮ್ಯಾಟೋ ಸೇರಿಸಿ ಭಾತ್ ಮಾಡಿದೆ. ರಾತ್ರಿಗೆ ಅವಲಕ್ಕಿ ಮೊಸರಿನ ಭರ್ಜರಿ ಫಳಾರವಾಯ್ತು. ಇಂದು ಏನು ಅಡಿಗೆ ಮಾಡುವುದು ! ಎಂದು ಯೋಚಿಸುವಷ್ಟರಲ್ಲಿ ನೀನು ಪ್ರತ್ಯಕ್ಷ ಳಾದಿ !'' ಎಂದು ಬಿಡುವರು.

''ಯಾವಾಗಲೂ ಹೀಗೆ !'' ಚಪಾತಿ ಮಾಡಿಡುತ್ತೇನೆ. ಕೆಡದ ಅಡಿಗೆ ಮಾಡುತ್ತೇನೆ ಅಂದರೆ– ''ನೀನಿಲ್ಲದಾಗ ತಾಜಾ ಮೀನು ತಂದು ತಿನ್ನುತ್ತೇನೆ. ಡಬ್ಬಿಯಲ್ಲಿರುವ ಒಣ ಮೀನಿಗೆ ಮೋಕ್ಷ ತೋರಿಸುತ್ತೇನೆ ಎಂದೆಲ್ಲ ಹೇಳಿ ನಾನು ಹಾಗೇ ಹೊರಡುವಂತೆ ಮಾಡುತ್ತೀರಿ ! ಆಮೇಲೆ ಅರೆಹೊಟ್ಟೆ ಉಂಡು ಇರುತ್ತೀರಿ ಎಂದು ಸಿಟ್ಟಾದಾಗ, ''ಹೋಗಲಿ ! ಇವತ್ತು ಇಬ್ಬರು ಅಡಿಗೆಯವರಿಂದ ಭಾರಿ ಭೋಜನ ಏರ್ಪಾಡು ಮಾಡೋಣ !'' ಎಂದು ತಾವು ಅಡಿಗೆ ವಹಿಸಿ ನಿಂತು ಬಿಡುವರು.

ನಾನು ಸ್ನಾನದ ಮನೆಗೆ ಹೋಗಿ ಪ್ರವಾಸದ ಕೊಳೆ ಬಟ್ಟೆಗಳನ್ನೆಲ್ಲ ತೊಳೆದು, ಧೂಳು ಬೆವರುಗಳಿಂದ ಮುಕ್ತಿಪಡೆಯಲು ಚೆನ್ನಾಗಿ ಎರೆದುಕೊಂಡು, ಕೂದಲು ಹಿಂಡಿ, ಒಣ ಬಟ್ಟೆ ಧರಿಸಿ ಬರುವದರೊಳಗಾಗಿ ಹತ್ತಿರದ ಅಂಗಡಿಯಿಂದ ತರಕಾರಿ, ಹಣ್ಣು ಹಂಪಲು ತಂದ ರಾಯರ ಅಡಿಗೆ ಅರ್ಧ ಮುಗಿದಿರುತ್ತದೆ. ''ಏನು ನಡೆಸಿದ್ದೀರಿ ? ಎಂದು ಕೇಳುವ ಗೋಜಿಲ್ಲ. ''ನೀನು ಸ್ವಲ್ಪ ವಿರಮಿಸು ! ಊಟ ತಯಾರಾದೊಡನೆ ಸಿಳ್ಳು ಕೇಳುತ್ತಿ ! ಆಗ ಬರಬಹುದು !'' ಎಂದರೂ ಅಡಿಗೆಯ ಗಮ, ಮೂಗನ್ನು ಮುಟ್ಟಿರುತ್ತದೆ. ಸುಮ್ಮನಿರದೇ ಪ್ರತಿ ಪಾತ್ರೆ ತೆರೆದು ಮೂಸಿ ಆಹಾ ! ಎನ್ನುತ್ತೇನೆ. ಆದಾಗಲೇ ಕಾಲಿ ಫ್ಲಾವರ್ ಭಾಜಿ. ಟೊಮ್ಯಾಟೋ ಈರುಳ್ಳಿ ಕೋಸಂಬರಿ, ದೊಣಮೆಣಸಿನಕಾಯಿ, ಬಟಾಟೆ ತಳಾಸಣೆಗಳು ಬಾಯಿಯಲ್ಲಿ ನೀರೂರಿಸುತ್ತವೆ. ಅನ್ನ ಬೆಂದು ಬೇಳೆ ಒಗ್ಗರಣೆ ಪಡೆದು 'ತೊಯ್' ಕುದಿಯುತ್ತಿರುತ್ತದೆ. ''ಮೂಸುತ್ತ ನಿಲ್ಲುವದಕ್ಕಿಂತ ಊಟದ ತಯಾರಿ ಮಾಡೋಣ !ಎಂದಾಗ ಆಗುವ ಸಂತೋಷ ಅನುಭವಿಸಿಯೇ ತಿಳಿಯಬೇಕು. ಇವನ್ನೆಲ್ಲ ಮಾಡಬಲ್ಲಾತ, ತಾನೊಬ್ಬನೇ ಇದ್ದಾಗ ಮಾತ್ರ ಯಾಕೆ ಅರೆಹೊಟ್ಟೆ ಇರುತ್ತಾರೆ ? ಎಂಬ ಸಮಸ್ಯೆ ಕಾಡುತ್ತದೆ.

"ಹಾಗೇಕೆ ಅಡಿಗೆ ಮಾಡಿಕೊಳ್ಳದೇ ಇರುತ್ತೀರಿ ?" ಪುನಃ ನನ್ನ ಹತ್ತನೆ ಬಾರಿಯ ಪ್ರಶ್ನೆ.

ಊಟ ಮುಗಿಸಿ, ನಿಧಾನವಾಗಿಈ ಪ್ರಶ್ನೆಗೆ ಸರಿಯಾದ ಉತ್ತರವನ್ನು ಕೊನೆಗೊಮ್ಮೆ ಕೊಡುತ್ತಾರೆ. "ನಿವೃತ್ತಿಯ ನಂತರವೂ ನೀನು, ಮದುಮಗಳಂತೆ ಪ್ರತಿದಿನವೂ ಅಲಂಕರಿಸಿಕೊಳ್ಳುತ್ತ ಇದ್ದರೂ ನನ್ನ ಕಣ್ಣಿಗೆ ಚೆಲುವೆಯಾಗಿಯೇ ಕಾಣುವದರಲ್ಲಿ ಸಂದೇಹವಿಲ್ಲ! ಆದರೆ ದಿನಂಪ್ರತಿ ಅಂಥ ಅಲಂಕಾರ ಪೋಷಾಕು ಧರಿಸಲು ಸಾಧ್ಯವೆ ? ಮನೆಗೆ ಬಂದ ಅತಿಥಿಯೊಬ್ಬರಿಗೆ ಕೆನೆ ಸೇರಿಸಿದ "ರಸ್‌ಮಲ್ಯಾ" ಕೊಟ್ಟಾಗ ನಾನು ಪ್ರತಿದಿನ ಅದನ್ನೇ ತಿನ್ನುತ್ತೇನೆಂದು ಅವರು ತಿಳಿದಿದ್ದರು.! ನೀನಿಲ್ಲದಾಗ ಅಡಿಗೆ ಮನೆ ಹೊಕ್ಕರೆ, ಅಡಿಗೆ ಮಾಡುವುದೇ ಮಹಾ ಪ್ರಯಾಸ ! ಕಾಫಿಪುಡಿ ಎಂದು ಬರೆದ ಬಾಟ್ಲಿ ಯಲ್ಲಿಮೆಣಸಿನಪುಡಿ ಇತ್ತು, ಸಕ್ಕರೆ ಎಂದು ಸೀಸೆ ತೆಗೆದರೆ ಅದರಲ್ಲಿಉಪ್ಪು, ತೆಂಗಿನೆಣ್ಣೆಯ ಮಿಳ್ಳೆಯಲ್ಲಿ ಹರಳೆಣ್ಣೆ ತುಂಬಿಸಿಟ್ಟಿದ್ದಿ ! ಹೋಗಲಿ, ರೋಸ್ಟ್ ಮಾಡಿದ ಕಳ್ಳೆ ಕಾಯಿ ತುಂಬಿಡುತ್ತಿದ್ದ ಸ್ಟೀಲ್ ಡಬ್ಬಿಯಲ್ಲಿ ಒಣಮೆಣಸಿನಕಾಯಿ ತುಂಬಿಟ್ಟವರು ಯಾರು ! ಮುಚ್ಚಳ ತೆಗೆದೊಡನೆ ಸೀನುಗಳ ಅವಾಂತರಕ್ಕೆ ಜಿರಳೆಗಳೆಲ್ಲ ದಿಕ್ಕಾಪಾಲಾಗಿ ಓಡಿ ಹೋದವು..... ಏಲ್ಲಿ ? ಏನಿದೆ ? ಎಂದು ಸಂಶೋಧನ, ಉತ್ಖನನ ಮಾಡುವಲ್ಲಿ ಅಡಿಗೆಗೆ ಸಮಯ ಎಲ್ಲಿದೆ ? ಎಂದು ತಾವು ಅಡಿಗೆ ಮಾಡಿಕೊಳ್ಳದೇ ಇರುವದಕ್ಕೆ ಸಬಲ ಕಾರಣಗಳನ್ನು ಪೂರೈಸಿದರು. ಇದೆಲ್ಲ ಕುಂಟು ನೆವ ಎಂದು ಬೇರೆ ಹೇಳಬೇಕೆ ?

ನಾವು ನಿವೃತ್ತರು, ಊಟ, ತಿಂಡಿಯಲ್ಲಿ ಕಡಿತ ಮಾಡುವುದು ಒಳಿತು ಎಂದು ಇಬ್ಬರೂ ಏಕಮತದಿಂದ ನಿರ್ಧರಿಸಿದೆವು. ಬೆಳಿಗ್ಗೆ ಒಂದೇ ಒಂದು ಬ್ರೆಡ್‌ಸ್ಲೈಸ್ ಹಾಗೂ ಚಹ. ಹನ್ನೆರಡು ಗಂಟೆಗೆ ಒಂದು ಚಪಾತಿ, ಒಂದು ವಾಟಿ ಅನ್ನದ, ಸಪ್ಪಗಿನ ವ್ಯಂಜನಗಳ ಊಟ. ಮೂರು ಗಂಟೆಗೆ ಒಂದು ಸಿಂಗಲ್ ಖಾಲಿ ಚಹ. ರಾತ್ರಿಗೆ ಚುರಮುರಿ, ಒಂದು ಹಿಡಿ ಮೊಸರವಲಕ್ಕಿ ಹಾಗೂ ಒಂದು ಗ್ಲಾಸು ಸಕ್ಕರೆ ಹಾಕದ ಹಾಲು ಕುಡಿಯುವದೆಂದು ಠರಾವ್ ಮಾಡಿಯಾಯಿತು. ಆದರೆ ಎಂದಿನಿಂದ ಈ ಕಾರ್ಯಕ್ರಮ ಆಚರಣೆಯಲ್ಲಿ ತರುವುದು ? ಎಂಬುದರ ಬಗ್ಗೆ ಒಮ್ಮತವಾಗಲಿಲ್ಲ ! ನಾನು ಇಂದಿನಿಂದಲೇ ಎಂದರೆ ಇವರು ಇನ್ನೊಂದು ದಶಕ ಕಳೆಯಲಿ, ಎನ್ನುತ್ತಾರೆ. ಇದನ್ನು ಪಾಲಿಸುವುದು ತನಗೆ ಕಷ್ಟವಿಲ್ಲ, ನಿನಗೇ ಅದು ಮಹಾಕಷ್ಟದ ಕೆಲಸ ! ಎಂದು ಮನವರಿಕೆ ಮಾಡಲು ಯತ್ನಿಸು ತ್ತಾರೆ. ಅದೂ ನಿಜವೆನ್ನಿ ! ನಡುರಾತ್ರಿಯಲ್ಲಿಎದ್ದುನಾನು ಬ್ರೆಡ್ ಬೆಣ್ಣೆ, ಹಾಲು, ಹಣ್ಣು ಗಳಿಗೆ ಶರಣು ಹೋಗುವುದು ಬೇಡ ಎಂಬುದಕ್ಕಾಗಿಯೇ ರಾಯರು ವಿರೋಧಿಸುತ್ತಾರೆ ಎಂಬುದು ಈಗೀಗ ನನ್ನ ಮಂದಮತಿಗೆ ಹೊಳೆದಿದೆ.

■ ■

# ೫. ಹೆಣ್ಣಾಗಿ ಹುಟ್ಟಬೇಕು

ಕೈಲಾಸದಲ್ಲಿ ಈಶ್ವರ ಪಾರ್ವತಿಯರು ಹೇಗೆ ಸಂಸಾರ ಮಾಡುತ್ತಾರೋ ನಾನರಿಯೆ! ಆದರೆ ಭೂಲೋಕದ ಕೈಲಾಸವಾದ ಬೆಂಗಳೂರಿನಲ್ಲಿ ವಾಸಿಸುವ ನಾವಿಬ್ಬರೂ ಅರ್ಧನಾರೀಶ್ವರನ ಆದರ್ಶವನ್ನೇ ನಮ್ಮದನ್ನಾಗಿಸಿಕೊಂಡಿದ್ದೇವೆ. ಅಂದರೆ, ರಾಯರ ಮತ್ತು ನನ್ನ ವ್ಯಕ್ತಿತ್ವ ಮತ್ತು ಕಾರ್ಯ ನಿರ್ವಹಣೆಯ ವಿಂಗಡಣೆ ಮಾಡುವುದು ಅಸಾಧ್ಯ ! ಎನಿಸುವಷ್ಟು ಹಾಸುಹೊಕ್ಕಾಗಿವೆ. ನಸುಕಿನಲ್ಲಿಯೇ ಎದ್ದು ಫಿಲ್ಟರ್ ಹಾಕಿ ಗಮಗಮಿಸುವ ಕಾಫಿಯನ್ನು ಸಿದ್ದಪಡಿಸುವಷ್ಟರಲ್ಲಿ ರಾಯರ ಶ್ರಮ ವ್ಯರ್ಥವಾಗಬಾರದೆಂದು ಅದನ್ನು ಸೇವಿಸಿ ಮೊದಲು ಮೆಚ್ಚಿಗೆ ಸೂಚಿಸುವವಳು ನಾನು. ಸಕಾಲಕ್ಕೆ ಸ್ವಿಚ್ ಹಾಕಿ ನೀರು ಕಾಯಿಸಿದರೆ, ಒಂದಿಷ್ಟೂ ತಡಮಾಡದೇ ಸ್ನಾನ ಮುಗಿಸುವ, ಅದರ ಸದುಪಯೋಗದ ಹೊಣೆ ನನ್ನದು. ಬೆಳಗಿನ ನಾಶ್ತಾಕ್ಕೆ ಈರುಳ್ಳಿ, ಕೋತಂಬರಿ, ತರಕಾರಿ ಹೆಚ್ಚಿ ರವೆ, ಬಿಸಿನೀರು ಇತ್ಯಾದಿಗಳನ್ನು ಇವರು ಸಿದ್ದಮಾಡಿ ಕೊಟ್ಟರೆ ನಾನು ಕ್ಷಣಾರ್ಧದಲ್ಲಿ ಉಪ್ಪಿಟ್ಟು ಮಾಡುತ್ತೇನೆ. ಊಟಕ್ಕೂ ಅದೇ ಸೂತ್ರ. ಅಕ್ಕಿ, ಬೇಳೆ, ತರಕಾರಿಗಳನ್ನು ತೊಳೆದು ರಾಯರು ಕುಕ್ಕರ್ ಇಟ್ಟು ಬೇಯಿಸಿದರೆಂದರೆ ಉಳಿದ ಯಾವತ್ತೂ ಅಡಿಗೆಯ ಜವಾಬ್ದಾರಿ ನನ್ನದು. ಅವರು ಪರೀಕ್ಷಿಸಿ ನೋಡಿ ಪೇಟೆಯಿಂದ ಹೊರೆ ಹೊರೆಯಾಗಿ ಹೊತ್ತು ತರುವ ಕುರುಕಲು ತಿಂಡಿಯ ನ್ಯಾಯವಾದ ''ವಿತರಣೆ'ಯ ಹೊಣೆ ನನ್ನದೇ! ವಿಪರೀತ ಬೆಲೆ ಸುರಿದುಕೊಂಡು ತರುವ ರೇಶಿಮೆ ಸೀರೆಗಳ ಬೆಲೆ, ಬಣ್ಣಗಳ ಕುರಿತು ನಾನು ಚೌಕಾಶಿ ಮಾಡದೇ, ಗೊಣಗದೇ ಉಡಲು ಪ್ರಾರಂಭಿಸಿಯೇ ಬಿಡುತ್ತೇನೆ ! ಪೆನ್ಸಿಲ್ ಕೆತ್ತಿ ಇಟ್ಟರೆ, ಪೆನ್ನಿಗೆ ಮಸಿ ಹಾಕಿ ಸಿದ್ಧಮಾಡಿದರೆ ಅವನ್ನು ಮೊಂಡು ಮತ್ತು ಬರಿದು ಮಾಡುವ ಜವಾಬ್ದಾರಿ ಹೊತ್ತಿರುತ್ತೇನೆ. ಆದಾಯ ಕರದ ವಾರ್ಷಿಕ ಲೆಕ್ಕಾಚಾರದ ಫಾರ್ಮುಗಳನ್ನು ತುಂಬಿಕೊಟ್ಟು, ಇವರು ಗುರುತು ಹಾಕಿದಲ್ಲಿ ಹಸ್ತಾಕ್ಷರ ಹಾಕುತ್ತೇನೆ. ಮಹತ್ವದ ಕಾಗದ ಪತ್ರಗಳನ್ನು ಎಲ್ಲೋ ಇಟ್ಟು ಮರೆತು ಇವರಿಗೆ ಹುಡುಕಲು ಹಚ್ಚುತ್ತೇನೆ. ಎಂದಾದರೂ ಪ್ರವಾಸದ ಯಾವತ್ತೂ ವ್ಯವಸ್ಥೆ ಮಾಡಿದಾಗ, ಉತ್ತಮ ಸಂಗಾತಿಯಾಗಿ ಹೊರಟು ನಿಲ್ಲುತ್ತೇನೆ. ವರ್ಣ ಛಾಯಾಚಿತ್ರ ಗ್ರಹಣದ ಸಕಲ ಸಿದ್ಧತೆ ಮಾಡಿದಾಗ ಮಾಡೆಲ್ ಆಗಿ ನಿಂತು ಸಂಪೂರ್ಣ ಸಹಕರಿಸುತ್ತೇನೆ.(ಬಾಯಿಂದ ಮಾತ್ರ ನಿಮ್ಮ ಫೋಟೋ ಪ್ರಯೋಗಗಳಿಗೆ ನಾನೊಂದು ಬಲಿಪಶು ! ಎನ್ನುತ್ತೇನೆ). ನನ್ನಂಥ ಸಂಪೂರ್ಣ ಸಹಕಾರಿ ಸಹಧರ್ಮಿಣಿ ಸಿಗುವುದು ದುರ್ಲಭವೆಂದು ದಿನಕ್ಕೊಂದು ಬಾರಿಯಾದರೂ ಇವರಿಗೆ ಮನದಟ್ಟು ಮಾಡದೇ ನನಗೆ ಸಮಾಧಾನವಿಲ್ಲ. ಗೃಹ ನಿರ್ವಹಣೆಯ ಹತ್ತು ಕೆಲಸಗಳನ್ನು ನೆನಪಿಟ್ಟು ಶ್ರದ್ಧೆ

ಶಿಸ್ತು, ನಯ, ನಾಜೂಕುಗಳಿಂದ ಇವರು ಮಾಡಿದರೆ ಪ್ರಭಾವಿತಳಾಗಿ, ''ನೀವು ಹೆಣ್ಣಾಗಿ ಹುಟ್ಟ ಬೇಕಿತ್ರಿ !'' ಎಂದು ಆಗಾಗ ಮೆಚ್ಚಿಗೆ ಸೂಚಿಸುತ್ತಿದ್ದರೆ, ನನ್ನ ಗಡಿಬಿಡಿ. ಆತುರ, ಅವಸರದ ಅರೆಬರೆ ಕೆಲಸಗಳನ್ನು ನೋಡಲಾಗದೇ ''ನೀನು ಗಂಡಾಗಿ ಅವತರಿಸ ಬೇಕಿತ್ತು ಕಣೇ ! ಎಂದು ರಾಯರ ತಿರುಗು ಬಾಣ ಇದ್ದದ್ದೇ.

ಪತಿಯ ಸಹಕಾರವೊಂದು ಇದ್ದರೆ ಸಂಸಾರದಲ್ಲಿ ಏನೆಲ್ಲ ಸಾಧಿಸಬಹುದು ಎಂದು ಮನವರಿಕೆಯಾಗಿಹೋಗಿತ್ತು. ಅಂತೆಯೇ ಸಹೋದ್ಯೋಗಿಗಳ ಬೆನ್ನು ತಟ್ಟಿಯೋ, ಮೈಗಳ್ಳರನ್ನು ಜಬರಿಸಿಯೋ, ಕಚೇರಿಯ ಕೆಲಸಗಳನ್ನು ನಿರ್ವಹಿಸಿಯೂ ಓದು, ಬರಹ, ಸಂಶೋಧನೆಗಳಿಗೆ ಕೊಂಚ ಸಮಯವನ್ನು ಮೀಸಲಿಡಲು ಸಾಧ್ಯವಾಗಿತ್ತು. ಮೂರು ದಶಕಗಳ ದೀರ್ಘ ಕಾಲ ಇಂಥ ಜೀವನ ಒಗ್ಗಿಸಿಕೊಂಡದ್ದರಿಂದ, ನಿವೃತ್ತಿಯ ನಂತರವೂ ವೇಳೆಯ ಸದುಪಯೋಗ ಇನ್ನೂ ಹೆಚ್ಚಿಸಬೇಕೆಂದು ಯೋಚಿಸಿದೆ. ಆಡಿಸಲು ಇನ್ನೂ ಮೊಮ್ಮಕ್ಕಳು ಮೂಡಿ ಬಂದಿರಲಿಲ್ಲ. ಕಾಡಿಸಲು ಸೊಸೆಯನ್ನು ಇನ್ನೂ ಮನೆ ತುಂಬಿಸಿ ಕೊಂಡಿರಲಿಲ್ಲ. ಮಗ ಅಮೇರಿಕದಲ್ಲಿ ಹಾಯಾಗಿದ್ದಾನೆ. ವಾರಕ್ಕೊಮ್ಮೆ ಅವನೊಂದಿಗೆ ಫೋನಿನಲ್ಲಿ ಅದೆಷ್ಟು ಹೊತ್ತು ತಾನೆ ಸಂಭಾಷಿಸಲು ಸಾಧ್ಯ ! ಐದು ನಿಮಿಷಕ್ಕೆ ಸಿಕ್ಕಾಪಟ್ಟೆ ದುಡ್ಡು ದಂಡ. ಈಗಲಾದರೂ ರಾಯರ ಸೇವೆ ಮಾಡಿ ಕೃತಾರ್ಥಳಾಗೋಣವೆಂದರೆ, ಅವರ ಅವಶ್ಯಕತೆಗಳು ತೀರಾ ಕಡಿಮೆ. ಅನ್ನ–ಸಾರು, ಮೊಸರಿನ ಊಟವೇ ಅವರಿಗೆ ಮೃಷ್ಟಾನ್ನ. ತೋಳಿನ ಬನಿಯನ್, ಮೊಳಕಾಲ ಮಟ್ಟದ ಚಡ್ಡಿಗಳೇ ಅವರ ದೈನಂದಿನ ಉಡಿಗೆ. ಉಳಿದೆಲ್ಲ ಕೆಲಸಕ್ಕೆ ಕಟ್ಟಾ ಸ್ವಾವಲಂಬಿ. ಕ್ಲಬ್, ಹರಟೆ, ಸ್ನೇಹಿತರೊಡನೆ ಸಲ್ಲಾಪಗಳೆಲ್ಲ ನಮ್ಮಿಂದ ಹರಿದಾರಿ ದೂರ. ಹೀಗಾಗಿ ಅಧಿಕಾರದಲ್ಲಿದ್ದಾಗ ಪಾಲ್ಗೊಳ್ಳಲಾಗದ ಚಟುವಟಿಕೆಗಳಲ್ಲಿ ನಿವೃತ್ತಿಯ ನಂತರವಾದರೂ ತೊಡಗಿಸಿಕೊಳ್ಳ ಲೆಂದು ಯೋಚಿಸಿದಾಗ ನೆಮ್ಮದಿಯೆನಿಸಿತು. ನನ್ನ ರೇಶ್ಮೆ ಸೀರೆಗಳೆಲ್ಲ ಕಾಯಂ ಪೆಟ್ಟಿಗೆ ಸೇರುವ ಸಂದರ್ಭ ತಪ್ಪಿತೆಂದು ಖುಷಿಯಾಯ್ತು.

ಸೇವೆಯಲ್ಲಿದ್ದಾಗ, ಮಂತ್ರಿಗಳು, ಕುಲಪತಿ, ಉಪ–ಕುಲಪತಿಗಳು, ಸಂಸ್ಥೆಗಳ ಮುಖ್ಯಸ್ಥರು, ಮಠಾಧಿಪತಿಗಳನ್ನು ಭೇಟಿ ಮಾಡುವುದು ದೈನಂದಿನ ಮಾತಾಗಿತ್ತು. ಅವರೆಲ್ಲ ಗೌರವ, ವಿಶ್ವಾಸಗಳನ್ನು ವ್ಯಕ್ತಪಡಿಸುವದರ ಜೊತೆಗೆ, ನನ್ನಂತಹ ಜನರ ಸೇವೆ ತಮ್ಮ ಸಂಸ್ಥೆಗಳಿಗೆ ಲಭಿಸಿದರೆ ಶಿಕ್ಷಣ ಮತ್ತು ಸಂಶೋಧನೆಗಳಿಗೆ ಅದೆಷ್ಟು ಒಳ್ಳೆಯ ಚಾಲನೆ ಸಿಗುತ್ತಿತ್ತು ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತಿದ್ದರು. ಸರಕಾರಿ ಅಧಿಕಾರಿಗಳೂ ಹಿಂದೆ ಬೀಳದೇ ಘನ ಸರಕಾರಕ್ಕೆ ನನ್ನಂಥವರ ಅವಶ್ಯಕತೆ ಎಷ್ಟಿದೆ ! ಎಂದು ಬಿಂಬಿಸಲು ಯತ್ನಿಸುತ್ತಿದ್ದರು. ನಿವೃತ್ತಿಯ ನಂತರ ಅವರಿಗೆಲ್ಲ ಪತ್ರ ಬರೆದರೆ ಉತ್ತರಿಸಬಹುದೆಂಬ ನಿರೀಕ್ಷೆ ಸುಳ್ಳಾಯ್ತು. ಸದಾಕಾಲವೂ ನಮ್ಮೂರಿಗೆ ಬನ್ನಿ, ನಮ್ಮ ಅಲ್ಪ ಆತಿಥ್ಯವನ್ನು ಸ್ವೀಕರಿಸಿ ಎಂದು ಪರಿಚಿತರು, ಆತ್ಮೀಯರೆನಿಸಿಕೊಂಡವರು ಪೀಡಿಸುತ್ತಲೇ ಇದ್ದುದರಿಂದ, ಕೆಲವರಿಗೆ ನಿವೃತ್ತಿಯಾದ ವಿಚಾರ ತಿಳಿಸಿದಾಗ, ಆಕಾಶವಾಣಿ ಅದೆಂತಹ ದಕ್ಷ ಅಪೂರ್ವ ಆಡಳಿತಗಾತಿಯನ್ನು ಕಳೆದುಕೊಂಡಿತು ! ನಮ್ಮ ಸರಕಾರಕ್ಕೆ ಕುದುರೆ ಕತ್ತೆಗಳಲ್ಲಿಯ ಭೇದವೇ ತಿಳಿಯದು ಎಂದು ತೋರಿಕೆಯ ಕಳವಳ ವ್ಯಕ್ತಪಡಿಸಿದರೇ ಹೊರತು ಒಬ್ಬರೂ

ತಮ್ಮ ಹಿಂದಿನ ಆಮಂತ್ರಣದ ಪುನರುಕ್ತಿಯಾಗುವಂತೆ ಯತ್ನಿಸಲಿಲ್ಲ! ಅಧಿಕಾರಿಣಿಯಾಗಿದ್ದಾಗ, ಭೋಜನ ಕೂಟಗಳಿಗೆ ಆಮಂತ್ರಣಗಳ ಸುರಿಮಳೆಯೇ ಇರುತ್ತಿತ್ತು. ಆಗ ಪಂಚತಾರಾ ಹೊಟೇಲುಗಳಲ್ಲಿ ಔತಣಗಳು ಸಾಮಾನ್ಯವಾಗಿದ್ದರೂ ಅವುಗಳಿಗೆ ಹೋಗುತ್ತಿರಲಿಲ್ಲ. ಸೇನಾ ವಿಭಾಗಗಳ ಆಮಂತ್ರಣಗಳನ್ನು ವೈಯಕ್ತಿಕವಾಗಿ ಹಿರಿಯ ಅಧಿಕಾರಗಳೇ ಬಂದು ಸೆಲ್ಯೂಟ್ ಹೊಡದು ಕೈಯಾರೆ ಆಮಂತ್ರಣ ಪತ್ರಿಕೆ ಕೈಗಿತ್ತು, ಆ ದಿನ ತಪ್ಪದೇ ಫೋನಿಸಿ ನೆನಪಿಸುತ್ತಿದ್ದರು. ''ಕಮಾಂಡರ್ ಸಾಹೇಬರು ಒತ್ತಾಯಿಸಿದ್ದಾರೆ.'' ಎಂಬ ಸಂದೇಶ ಇರುತ್ತಿತ್ತು. ರಾಷ್ಟ್ರೀಕೃತ ಬ್ಯಾಂಕುಗಳ ವರಿಷ್ಠ ಅಧಿಕಾರಿಗಳ ವಾರ್ಷಿಕ ಭೋಜನ ಕೂಟ. ಉಡುಗೊರೆ ವಿತರಣೆ, ಮುಖ್ಯಮಂತ್ರಿಗಳ ಸಂತೋಷ ಕೂಟ, ರಾಜ್ಯಪಾಲರ ಸ್ನೇಹ–ಸಮ್ಮೇಳನಗಳಿಗೆಲ್ಲಾ ಆಮಂತ್ರಣ ಇದ್ದೇ ಇರುತ್ತಿತ್ತು. ನಿವೃತ್ತಿಯ ನಂತರ ಒಂದೇ ಒಂದು ಇಂಥ ಆಮಂತ್ರಣ ಬಾರದ್ದರಿಂದ ವ್ಯಕ್ತಿಗಿಂತ ಅಧಿಕಾರದ ಖುರ್ಚಿಗೆ ಆ ಗೌರವದ ಸಂದಾಯ ಎಂಬ ಮೊದಲೇ ಮನವರಿಕೆಯಾಗಿದ್ದ ಮಾತು ದೃಢಪಟ್ಟಿತು.

ದೊಡ್ಡವರ ಸಹವಾಸ ಎಂದೂ ಬೇಕಿರಲಿಲ್ಲ. ಇನ್ನು ಮೇಲಾದರೂ ಜನಸಾಮಾನ್ಯರೊಂದಿಗೆ ಒಂದಾಗಿ ಬಾಳೋಣವೆಂದು ನಿರ್ಧರಿಸಿದೆ. ಈ ಮೊದಲು ಶಾಲೆಗಳ ವಾರ್ಷಿಕೋತ್ಸವಕ್ಕೆ ಮುಖ್ಯ ಅತಿಥಿಯಾಗಿ, ವಿವಿಧ ಸಂಘಗಳ ಉದ್ಘಾಟನೆ ಮಾಡುವದಕ್ಕೆ. ಕವಿಮೇಳ ಮುಶೈರಾಗಳಲ್ಲಿ ಭಾಗವಹಿಸಲಿಕ್ಕೆ. ಪ್ರಚಾರ ಸಭೆ, ಸನ್ಮಾನ ಸಭೆಗಳಲ್ಲಿ ಗೌರವ ಅತಿಥಿಯಾಗಲಿಕ್ಕೆ ಬಹಳಷ್ಟು ಆಮಂತ್ರಣಗಳು ಬರುತ್ತಿದ್ದವು. ನೃತ್ಯ ಕಲಾವಿದರ ರಂಗಪ್ರವೇಶ, ಸಂಗೀತ ವಿದ್ವಾಂಸರ ಸತ್ಕಾರಗಳಿಗಂತೂ ಲೆಕ್ಕವಿರುತ್ತಿರಲಿಲ್ಲ. ಇವಕ್ಕೆಂದೂ ಹೋಗದಿದ್ದರೂ ಪರಿಪರಿಯಿಂದ ವಿನಂತಿಸಿಕೊಳ್ಳುತ್ತಿದ್ದರು. ಇತರರಿಂದ ಹೇಳಿಸುತ್ತಿದ್ದರು. ಹೊಗಳಿ ತಲೆಕೆಡಿಸುತ್ತಿದ್ದರು. ಕೆಲವೊಮ್ಮೆ ಅವರು ಹೇಳಿದ್ದು ನಿಜವಿರಬೇಕು ಎನಿಸಿದ್ದೂ ಇದೆ!

ಒಮ್ಮಿಂದೊಮ್ಮೆ ಈ ಎಲ್ಲ ಆಹ್ವಾನಗಳು ನಿಂತು ಹೋದವು. ಗೃಹಪ್ರವೇಶ, ನಿಶ್ಚಯ ತಾಂಬೂಲ, ಉಪನಯನ, ಮದುವೆಗಳ ಆಮಂತ್ರಣ ಪತ್ರಿಕೆಗಳೂ ಕೂಡ, ಸಮಾರಂಭ ಮುಗಿದ ನಂತರ ಕೈಸೇರುವ ವ್ಯವಸ್ಥೆಯಾಯಿತು. ಈ ವ್ಯವಸ್ಥೆಗೆ ಅಂಚೆ ಖಾತೆ ಯವರ ಸಂಪೂರ್ಣ ಸಹಕಾರ ಒದಗಿತು. ಮಾನವಜನ್ಮದ ಹೀನತೆಯ ಪರಿಚಯ ಈ ರೀತಿಯಲ್ಲಾಗಬೇಕೇ ! ಸಮಯದ ಸದುಪಯೋಗ ಹೇಗೆ ಮಾಡಿಕೊಳ್ಳುವುದು ? ಎಂಬ ಪ್ರಶ್ನೆ ಕಾಡಿಸಿತು. ನನ್ನ ಗೊಂದಲದ ಮನಸ್ಥಿತಿ ತಿಳಿದುಕೊಂಡವರಂತೆ ''ಸಮಾನತಾ ಸಂಘ'' ದವರು ತಮ್ಮೊಂದಿಗೆ ಸೇರಿಕೊಳ್ಳಲು ಆಮಂತ್ರಿಸಿದರು. ಅವರ ಅತ್ಯಂತ ಕಳಕಳಿಯ, ಹೆಂಗಳೆಯರ ಉದ್ಧಾರಕ್ಕಾಗಿಯೇ ಹುಟ್ಟಿಕೊಂಡ ಸಂಸ್ಥೆಗೆ ಇನ್ನು ಮುಂದೆ ನನ್ನ ತನು, ಮನ, ಧನಗಳನ್ನು ಮೀಸಲಿಡಬೇಕೆಂದುಕೊಂಡೆ. ''ವಿಮುಕ್ತ ವನಿತೆ'', ''ಜಾಗೃತ ನಾರಿ'', ''ಮಹಿಳಾಂದೋಲನ''ಗಳ ಪ್ರತಿನಿಧಿಗಳೂ ಒಬ್ಬೊಬ್ಬರಾಗಿ ಬಂದು ಮಾತನಾಡಿಸಿ ನನ್ನ ವಿಚಾರವು ನಿರ್ಧಾರವಾಗಿ ಮಾರ್ಪಡುವಂತೆ

ಸಹಕರಿಸಿದರು. ''ಆಂದೋಲನ''ದ ಪ್ರಧಾನ ಕಾರ್ಯದರ್ಶಿಯೇ ಮನಗೆ ಬಂದು ತಮ್ಮ ಸಂಸ್ಥೆಗೆ ಕರೆದೊಯ್ದು ಸಹೋದ್ಯೋಗಿಗಳನ್ನೆಲ್ಲ ಪರಿಚಯಿಸಿದಾಗ, ನಿವೃತ್ತ ಜೀವನವನ್ನು ಫಲಕಾರಿಯಾಗಿ ಮಾಡುವ ಸಾಧ್ಯತೆ ಕಂಡು ನೆಮ್ಮದಿಯೆನಿಸಿತು. ಖಜಾಂಚಿಯವರು ಕೂಡಲೇ ಪ್ರತ್ಯಕ್ಷರಾಗಿ ಸಂಘ ಪ್ರಾರಂಭವಾದಾಗಿನಿಂದ ಆವರೆಗೆ ಸದಸ್ಯತ್ವದ ಮೊಬಲಗು ಎಂದು ಐದು ನೂರು ರೂಪಾಯಿಯ ಚೆಕ್ ಆ ಕೂಡಲೇ ಪಡೆದು ರಸೀದಿ ಕೊಟ್ಟರು. ''ವಿಮುಕ್ತ ವನಿತೆ'' ಯವರು ವಿಶೇಷ ಸಭೆ ಕರೆದು ನನ್ನ ನಿವೃತ್ತಿಯ ನಂತರ ಬಂದ ಹಣದಲ್ಲಿ ಮಹಿಳೆಯರ ಏಳ್ಗೆಯ ಗಂಭೀರ ಚಿಂತನಪರ ಪುಸ್ತಕಕ್ಕೆ ನನ್ನ ಹೆಸರಿನಲ್ಲಿ ಪ್ರಶಸ್ತಿಯನ್ನು ಸ್ಥಾಪಿಸಬೇಕೆಂದು ಮನ ಒಲಿಸಿದರು. ''ಗಂಭೀರ ಚಿಂತನೆ''ಯ ಲೇಶಕಲ್ಪನೆಯೂ ಇಲ್ಲದ ನಾನು ಈ ವಿಚಾರಕ್ಕೆ ಪ್ರತಿಕ್ರಿಯಿಸುವ ಮೊದಲೇ ಸೇರಿದ್ದ ಲಲನಾಮಣಿಗಳೆಲ್ಲ ತುರುಸಿನ ಚರ್ಚೆ ಪ್ರಾರಂಭಿಸಿಬಿಟ್ಟರು. ಒಂದು ಗುಂಪಿನವರು ಪ್ರಾದೇಶಿಕ ಭೇದ ಮಾಡದೇ ಇಡೀ ಭಾರತೀಯ ನಾರೀ ವರ್ಗವನ್ನು ಪ್ರಶಸ್ತಿಗೆ ಪರಿಗಣಿಸಬೇಕು ಎಂದರೆ, ಇನ್ನೊಂದು ವರ್ಗ ಅದು ಕನ್ನಡ ನಾಡಿಗಷ್ಟೇ ಅನ್ವಯಿಸಬೇಕು! ಎಂದು ಕೂಗಿ ಹೇಳಿತು. ಕನ್ನಡಿಗರಲ್ಲದಿದ್ದರೂ ಕನ್ನಡದಲ್ಲಿ ಬರೆದ ಮಹಿಳಾ ಕೃತಿಗೆ ಈ ಪ್ರಶಸ್ತಿ ಸಲ್ಲಬೇಕು ಎಂದು ಒಬ್ಬಾಕೆ ಪರಿಶೀಲಿಸಿ ನುಡಿದರೆ, ಅದನ್ನು ಸಮರ್ಥಿಸಿ ಇನ್ನೊಬ್ಬಾಕೆ, ಪ್ರಥಮ ಪ್ರಶಸ್ತಿ ಜ್ಯೋತ್ಸ್ನಾ ಅವರಿಗೆ ಸ್ಲಲಬೇಕಾದದ್ದು ನ್ಯಾಯ ! ಎಂದು ವ್ಯವಹಾರ ಕುಶಲತೆ ತೋರ್ಪಡಿಸಿದಾಗ ಎಲ್ಲರೂ ಟೇಬಲ್ ಕುಟ್ಟಿ, ಕುಟ್ಟಿ ಅದನ್ನು ಅನುಮೋದಿಸಿ ಬರೆಯದ ಪುಸ್ತಕ, ದೊರೆಯದ ಮೊತ್ತಕ್ಕೆ ನನ್ನನ್ನು ಉತ್ತರಾಧಿಕಾರಿಯನ್ನಾಗಿ ಮಾಡಬೇಕೆ ?

ತಮಾಷೆ ನೋಡಲೆಂದು ಬಂದವಳಿಗೆ ಮಸೀದೆ ಕೊರಳಿಗೆ ಬಿದ್ದಂತಾಗಿ ದಿಕ್ಕೇ ತೋಚದಾಯ್ತು ! ಈ ಕುರಿತು ರಾಯರನ್ನು ವಿಚಾರಿಸಿ ನನ್ನ ನಿರ್ಧಾರ ತಿಳಿಸುತ್ತೇನೆ''ಎಂದಾಗ ಎಲ್ಲರ ಮುಖದಲ್ಲೂ ಆಶ್ಚರ್ಯ. ಅಪನಂಬಿಕೆ, ತಿರಸ್ಕಾರಗಳ ಕಳೆ. ''ಅಲ್ರೀ ! ನಿಮ್ಮ ಹಣ ಹೇಗೆ ವಿತರಣೆ ಮಾಡುವದೆಂದು ಅವರನ್ನು ಯಾಕ್ರೀ ಸಲಹೆಗೆ ಎಳಿತೀರಿ !' ಎಂದು ಒಟ್ಟಾಗಿ ಅಸಮಾಧಾನವನ್ನು ತೋಡಿಕೊಂಡರು ಸಭೆಯಲ್ಲಿದ್ದ ಸಮಾನತಾ ಸಂಘದ ಸದಸ್ಯರುಗಳು. ನಾನು ಜೋರಾಗಿ ಉಸಿರಾಡಿಸಲು, ಗೊರಕೆ ಹೊಡೆಯಲು ಪತಿಯ ಪರವಾನಿಗಿ ಪಡೀತೀನ್ರಿ!'' ಎಂದಾಗ ಮುಖ ಸಿಂಡರಿಸಿದವರೆಷ್ಟೋ ಜನ.ಇದಾವ ವಿಚಿತ್ರ ಪ್ರಾಣಿ! ಎನ್ನುವಂತೆ ಕೆಲವರು ದುರುಗುಟ್ಟಿ ನೋಡಿದರು. ಗುಜುಗುಜು ಮಾತನಾಡುತ್ತ ಮಹಿಳಾ ಪ್ರತಿನಿಧಿಗಳೆಲ್ಲ ಪ್ರತಿಭಟನೆಯೆಂಬಂತೆ ಎದ್ದು ಹೊರಟೇ ಬಿಟ್ಟರು. ನನ್ನನ್ನು ಕರೆತಂದ ಕಾರ್ಯದರ್ಶಿಯೂ ಕಣ್ಣಿಗೆ ಬೀಳಲಿಲ್ಲ. ಕಾರೂ ಕಾಣಿಸಲಿಲ್ಲ. ಹತ್ತಿರದಲ್ಲಿ ಯಾವ ಆಟೋ ಕೂಡ ಇರಲಿಲ್ಲ. ಅವರಿವರನ್ನು ವಿಚಾರಿಸಿ ಸಮೀಪದ ಬಸ್ ಸ್ಟಾಪ್‌ನ್ನು ಸೇರಿ ಎರಡೆರಡು ಬಸ್ ಬದಲಾಯಿಸಿ ಉಸ್ಸಪ್ಪ! ಎಂದು ಮನೆ ಸೇರಿದೆ.

ಉಳಿದ ಆಯುಷ್ಯವನ್ನು ಪಕ್ಕಾ ಗೃಹಿಣಿಯಾಗಿ ಮನೆಯಲ್ಲೇ ಇದ್ದು ಈಗಲಾದರೂ

ರಾಯರ ಸೇವೆ ಮಾಡಿದರಾಯಿತು ಎಂದು ನಿರ್ಧರಿಸಿದೆ. ಮಹಿಳಾ ಸಂಘಟನೆಗಳು ಬಿಟ್ಟಾವೆಯೇ? ''ಮಾನವತಿ'' ಬಳಗದವರು ಫೋನ್ ಮಾಡಿ ಆ ದಿನ ನನ್ನನ್ನು ಬೆಂಬಲಿಸದಿದ್ದುದಕ್ಕೆ ಕ್ಷಮೆ ಕೇಳಿದರು. ಮನೆಗೇ ಬಂದು ತಮ್ಮ ಬಳಗದ ಧ್ಯೇಯ, ಉದ್ದೇಶಗಳನ್ನು ವಿವರಿಸಿ, ''ಕಲಾವತಿ'' ಸಂಘವೂ ತಮ್ಮಲ್ಲಿ ಸೇರ್ಪಡೆಯಾಗಲಿದೆ. ಸಂಘಕ್ಕೆ ತಾವೇ ಗೌರವಾಧ್ಯಕ್ಷರಾಗಬೇಕು ಎಂದು ಪಟ್ಟು ಹಿಡಿದು ಒಪ್ಪಿಸಿದರು. ''ತಮಗೆ ಓಡಾಟ ಕಷ್ಟ. ಆದ್ದರಿಂದ ಕಾರ್ಯಕಾರಿ ಸಭೆಗಳನ್ನು ತಮ್ಮಲ್ಲಿ ನಡೆಸ ಬಹುದಲ್ಲ? ನಿಮ್ಮ ಮನೆಯ ಹಾಲ್ ವಿಶಾಲವಾಗಿದೆ ! '' ಎಂದು ಮೆಚ್ಚಿಗೆ ಸೂಚಿಸಿ ಹೋದರು.

ಮರುವಾರವೇ ಮಹಿಳೆಯರಿಗೇ ಮೀಸಲಾದ ''ಕಾವೇರಿ ಕಾವ್ಯ ಪ್ರಶಸ್ತಿ''ಯ ನಿರ್ಣಾಯಕ ಸಭೆ ನಮ್ಮಲ್ಲೇ ಸೇರುವಂತಾಯ್ತು. ೫–೬ ಜನರಿಗೆ ಉಪ್ಪಿಟ್ಟು, ಕೇಸರಿ ಭಾತು ಕಾಫಿ, ಚಹದ ವ್ಯವಸ್ಥೆಗೆ ನಸುಕಿನಿಂದಲೇ ಒದ್ದಾಡಿದ್ದಾಯ್ತು. ವೇಳೆಗೆ ಸರಿಯಾಗಿ ಬಂದ ಪಾರ್ವತಮ್ಮನವರು ತಮ್ಮೆರಡು ಮೊಮ್ಮಕ್ಕಳನ್ನು ಕರೆದುಕೊಂಡು ಬಂದಿದ್ದರು. ಉಳಿದ ಸದಸ್ಯರು ಬರುವತನಕ ಈ ಕಿರಿ ಸದಸ್ಯರು ಕಿರುಚಾಟ, ಕೂಗಾಟಗಳಿಂದ ಸಮಯ ತುಂಬಿದರು. ವೆಂಕಮ್ಮನವರು ''ಆಟೋ ಸಿಗಲು ಲೇಟಾಯ್ತು!'' ಎಂದರು. ಮೈಸೂರಿನಿಂದ ಬರಬೇಕಾದ ಮೈಥಿಲಿಗೆ ಸಹಜವಾಗಿಯೇ ಒಂದೂವರೆ ಗಂಟೆ ತಡ ವಾಗಿತ್ತು. ಅವರಾರೂ ಸ್ಪರ್ಧೆಗೆ ಬಂದ ಪುಸ್ತಕಗಳನ್ನು ಓದಿರಲಿಲ್ಲ. ಕೊನೆಗೆ ವೆಂಕಮ್ಮನವರ ಮಗಳು ಓದುವುದು ಉಳಿದವರು ಕೇಳುವುದು ಎಂದಾಯ್ತು. ಕಾಫಿ ಸರಬರಾಜು ಆಗುತ್ತಿದ್ದಂತೆ ಮೈಥಿಲಿಗೆ ಇನ್ನೊಂದು ಮೀಟಂಗಿಗೆ ಹೋಗಬೇಕಾಗಿದ್ದರಿಂದ ಮೆತ್ತಗೆ ಜಾರಿಕೊಂಡರು. ಪಾರ್ವತಮ್ಮನಿಗೆ ಮದುವೆ ಮನೆಗೆ ಹೋಗಬೇಕಾಗಿತ್ತು. ನಿರ್ಣಾಯಕ ಸಭೆ ಮುಂದೆ ಬಿತ್ತು.

ಮಹಿಳೆಯರಿಗೆ ಹೆಚ್ಚಿನ ಮೀಸಲಾತಿ, ಭಢ್ತಿಗಳಲ್ಲಿ ಆದ್ಯತೆ ಮುಂತಾದ ಮಹತ್ವದ ಮುದ್ದೆಗಳ ಕುರಿತಾದ ಚರ್ಚೆ ಇಟ್ಟುಕೊಂಡ ಸಭೆಗಳೂ ಯಾವ ನಿರ್ಣಯಕ್ಕೂ ಬಾರದೇ ''ಬರ್ಖಾಸ್ತ್'' ಆಗುವ ಸಂದರ್ಭಗಳು ಒದಗಿದವು. ಇವರಿಂದ ಯಾವ ಸೇವೆಯೂ ಮಹಿಳಾ ವರ್ಗಕ್ಕೆ ಸಲ್ಲುವದಿಲ್ಲವೆಂದು ಖಾತ್ರಿಯಾಯಿತು.

ಮೂರು, ನಾಲ್ಕು ಸಭೆಗಳು ಮನೆಯಲ್ಲೇ ಜರುಗಿದರೂ ರಾಯರು ಮನೆಯ ಲ್ಲಿರುತ್ತಿದ್ದುದು ಒಬ್ಬರಿಗೂ ತಿಳಿಯುತ್ತಿರಲಿಲ್ಲ. ತಮ್ಮ ಕಮ್ಮಟ ಸೇರಿ ಮರೆಯಾಗಿ ಬಿಡುತ್ತಿ ದ್ದರೂ ಅವರ ಗ್ರಹಣಶಕ್ತಿ ಅದ್ಭುತವಾದದ್ದೆಂದು ತಿಳಿದುಕೊಳ್ಳುವಂತೆ ಆಯಿತು. ಕಾಲ ಹೆಜ್ಜೆಯ ಸಪ್ಪಳದಿಂದಲೇ ಜೀಜಾಬಾಯಿ ಬರುತ್ತಿದ್ದಾರೆ.! ಎಂದು ಮುನ್ಸೂಚನೆ ಕೊಡು ತ್ತಾರೆ. ಅವೇಳೆಯಲ್ಲಿ ಫೋನ್ ಮಾಡುವವರು ನರಸಮ್ಮ ಎಂದು ಪತ್ತೆ ಹಚ್ಚಿದ್ದಾರೆ. ಕರೆಗಂಟೆಯ ಒತ್ತುವಿಕೆಯಿಂದಲೇ ರಾಧಮ್ಮನೆಂದು ಹೇಳಿಬಿಡುತ್ತಾರೆ. ತಾನು ಮರೆಯಲ್ಲಿದ್ದರೂ ಸಭೆಯ ಯಾವತ್ತೂ ಕಾರ್ಯಕಲಾಪಗಳ ವರದಿಯನ್ನು ಅನಂತರ ವಿನೋದಪೂರ್ವಕ ವರದಿ ರೂಪದಲ್ಲಿ ಪ್ರಸ್ತುತಪಡಿಸುತ್ತಾರೆ ! ಒಂದು ಸಭೆಯಲ್ಲಿ ಸ್ತ್ರೀ ಪುರುಷ ಸಮಾನತೆ ಹೇಗೆ ಸಾಧಿಸುವದೆಂದು ಬಿರುಸಿನ ಚರ್ಚೆಯಾಗಿತ್ತು. ಎಲ್ಲರೂ

ಚದರಿಹೋದ ನಂತರ ರಾಯರು ಪ್ರತ್ಯಕ್ಷರಾದರು. ''ಹೆಂಗಳೆಯರನ್ನು ನಿರ್ಮಿಸುವಾಗ ವಿಧಾತನು ಅವರ ರೂಪ, ಲಾವಣ್ಯಗಳಿಗೆ ವಿಶೇಷ ಲಕ್ಷ್ಯ ಪೂರೈಸಿ ಶಿರದಲ್ಲಿ ಮಜ್ಜಾತಂತುಗಳನ್ನು ಜೋಡಿಸುವದನ್ನೇ ಮರೆತು ಬಿಟ್ಟಿರಬೇಕು !'' ಎಂದು ಕಟುವಾಗಿ ಟೀಕಿಸಿದಾಗ ಅವಾಕ್ಕಾದೆ.

ಅವರು ಎಂದೂ ಯಾರ ಕುರಿತೂ ಲಘುವಾಗಿ ಮಾತನಾಡುವದಿಲ್ಲ, ಹೆಂಗಸರನ್ನಂತೂ ಹೆಚ್ಚಿನ ಗೌರವದಿಂದ ಕಾಣುತ್ತಾರೆ. ಅಂತೆಯೇ ''ನಿಮ್ಮ ಜಾಯಮಾನಕ್ಕೆ ಒಪ್ಪುವಂತಹ ಮಾತೇ ಇವು ?'' ಎಂದು ಪ್ರಶ್ನಿಸಿದೆ. ಅವರು ಇಡೀ ಮಹಿಳಾ ವರ್ಗದ ಕ್ಷಮೆ ಕೋರಿಯೇ ಭಾಷಣವನ್ನು ಪ್ರಾರಂಭಿಸಿದರು. ''ನಿನ್ನ ಸ್ನೇಹಿತೆಯರಿಗೆಲ್ಲ ಭಾರತೀಯ ಸಂಸ್ಕೃತಿ, ಇತಿಹಾಸ, ಧಾರ್ಮಿಕ ಹಿನ್ನಲೆಗಳ ಸ್ಥೂಲ ಪರಿಚಯ ಕೂಡ ಇಲ್ಲ! ಪಾಶ್ಚಾತ್ಯರಿಂದ ಎರವಲು ತಂದ ಹಲವಾರು ಘೋಷಣೆಗಳಂತೆ ಸ್ತ್ರೀಯರ ಎಲ್ಲ ಕಷ್ಟನಷ್ಟಗಳಿಗೆ ಪುರುಷರೇ ಕಾರಣ !'' ಎಂದು ದೂರುವದರಲ್ಲಿ ಏನು ಅರ್ಥವಿದೆ? ಯಾರೋ ಬಲಾತ್ಕಾರ ಮಾಡಿದರು. ಎಲ್ಲೋ ಅತ್ಯಾಚಾರ ನಡೆಯಿತು, ಇನ್ನಾರೋ ದುರಾತ್ಮರು ಹಣದಾಸೆಗೆ ಅಮಾಯಕ ಹುಡುಗಿಯರನ್ನು ಹಿಂಸಿಸಿ ಕೊಲೆ ಮಾಡಿದ್ದಕ್ಕೆ ಇಡೀ ಪುರುಷ ಸಮಾಜವನ್ನು ದೂಷಿಸುವುದು ಸರಿಯೇ? ನಮ್ಮ ಸಂವಿಧಾನದಲ್ಲಿ ಸ್ತ್ರೀ ಪುರುಷ ಸಮಾನತೆ ತೀರ ಸಹಜವೆಂಬಂತೆ ಸೇರ್ಪಡೆಯಾಗಿದೆ. ಅಂತೆಯೇ ಇಂದಿರಮ್ಮ ಪ್ರಧಾನಿಯಾಗಲು ಸಾಧ್ಯವಾಯಿತಲ್ಲದೇ ಪುರುಷರನ್ನು ಮೀರಿಸುವ ಸರ್ವಾಧಿಕಾರ ತೋರ್ಪಡಿಸಲಿಲ್ಲವೇ ? ಇಂದಿನ ದಿನಗಳಲ್ಲಿ ಸಮಾನತೆಯ ಜೊತೆಗೆ ಸ್ತ್ರೀಯರಿಗೆ ಲಭಿಸಿದ ವಿಶೇಷ ಸವಲತ್ತುಗಳ ಬಗ್ಗೆ ನೀವು ಒಬ್ಬರಾದರೂ ಮುಕ್ತ ಚರ್ಚೆ ಮಾಡಿದ್ದೀರಾ ? ಪುರುಷರಿಗೆ ಆಕ್ರೋಶ ಬರುವಷ್ಟು ಅವು ಹೆಚ್ಚಿವೆ ! ಸ್ಥಳೀಯ ಸಂಸ್ಥೆಗಳಿಂದ ರಾಷ್ಟ್ರೀಯ ಮಟ್ಟದವರೆಗೆ ಚುನಾವಣೆಗಳಲ್ಲಿ ಮಹಿಳಾ ಮೀಸಲಾತಿ, ಆದಾಯ ಕರದಲ್ಲಿ ವಿಶೇಷ ರಿಯಾಯ್ತಿ, ಬಸ್ ರೇಲ್ವೆ ಪ್ರಯಾಣಗಳಲ್ಲಿ ಮೀಸಲಾತಿ, ಮಹಿಳಾ ಸಾಹಿತ್ಯಕ್ಕೇ ಮೀಸಲಾದ ಬಹುಮಾನ, ಪ್ರಶಸ್ತಿಗಳು ! ನಾಲ್ಕಾಣೆಯ ಕಿರಿಪುಸ್ತಕ ಬರೆದಾಕೆಯೂ ಲೇಖಕಿಯೆಂದು ಪರಿಗಣಿಸಲ್ಪಡುತ್ತಾಳೆ ! ಲೇಖಕಿಯರ ಕಿರುಪರಿಚಯ ವಿಳಾಸಗಳ ದೊಡ್ಡ ಕೋಶವೇ ಇದೆ ! ಬಡ ಗಂಡಸರನ್ನು ಯಾರು ವಿಚಾರಿಸಿಕೊಳ್ಳುತ್ತಾರೆ ? ಪುರುಷ ಲೇಖಕರು ತಮ್ಮದೇ ಸಂಘ ಸ್ಥಾಪಿಸಿ ಯಾವ ಪ್ರಶಸ್ತಿಗೂ ಹೆಂಗಳೆಯರನ್ನು ಪರಿಗಣಿಸಬಾರದು ಎಂದು ನಿರ್ಣಯಿಸಿದ್ದರೆ ನೀವೆಲ್ಲ ಸುಮ್ಮನಿರುತ್ತಿದ್ದಿರಾ ? ನಮಗಿಲ್ಲದ ಎಷ್ಟೊಂದು ಸವಲತ್ತುಗಳು ನಿಮಗಿವೆ ಎಂದು ಮೊದಲ ಬಾರಿ ನನಗೆ ಹೊಟ್ಟೆಯುರಿ ಪ್ರಾರಂಭವಾಗಿದೆ !... ಅಂತೆಯೇ ಮುಂದಿನ ಜನ್ಮದಲ್ಲಿಯಾದರೂ ನಾನು ಹೆಣ್ಣಾಗಿ ಹುಟ್ಟಬೇಕು !''... ಎಂದು ಉಸುರ್ಗರೆದಾಗ ನಡುವೆಯೇ ಅವರನ್ನು ತಡೆದು ''ಬಿಡ್ರಿ ಅನ್ನಿ'' ಎಂದೆ. ''ನಿಮ್ಮ ಸಾಧನೆಗೆ ಏನು ಕಡಿಮೆಯಾಗಿದೆ ಎಂದು ಪಾಪ, ಹೆಂಗಳೆಯರ ಮೇಲೆ ಹೊಟ್ಟೆಕಿಚ್ಚು ಪಡ್ತೀರಿ ! ವಿದೇಶದಲ್ಲಿ ಪರಿಸರ ವಿಜ್ಞಾನದ ಪ್ರಸಿದ್ಧ ಕಾಲೇಜಿನ ಡಾಕ್ಟರೇಟು, ಹದಿನಾಲ್ಕು ಪುಸ್ತಕಗಳು, ಮೂರು ಬಾರಿ ಅಕಾಡೆಮಿ ಪುರಸ್ಕಾರ... ಎಂದು ಪ್ರಾರಂಭಿಸಿದಾಗ ಅವರು ನಡುವೆಯೇ ಕಡಿವಾಣ ಹಾಕಿ, ''ಅಲ್ವೇ, ನೀನು ಹೇಳ

ಹೊರಟ ಯಶಸ್ಸಿನ ಗಾಥೆಯಿಂದ ಆದಾಯ ಕರ ಕೊಡುವಷ್ಟೂ ಉತ್ಪನ್ನ ಬಾರದಿರುವಾಗ ಅವೆಲ್ಲ ಮಹಾಸಾಧನೆಗಳು ಹೇಗೆ ತಾನೇ ಆದಾವು ? ಅದೇ ಹೆಣ್ಣಾಗಿದ್ದರೆ ಕಿಶೋರಿಗೆ ಕಿವಿಮಾತು, ದಂಪತಿಗಳಿಗೆ ದಾಂಪತ್ಯ ವಿಜ್ಞಾನದ ಕುರಿತು ಪಿಸುನುಡಿ, ಹರೆಯದವರಿಗೆ ಪರಿಸರ ಪ್ರಜ್ಞೆಯ ಕುರಿತು ಎಚ್ಚರದ ಗಂಟೆ, ಎಲ್ಲರಿಗೂ ಫೋಟೋ ಕಾಮಿಕ್ಸ್ ಮಾಲಿಕೆ ಬರೆದೂ ಬರೆದೂ ಅದೆಷ್ಟೋ ಬಹುಮಾನ ಗಿಟ್ಟಿಸುತ್ತಿದೆ–ಗೊತ್ತೇ !

ಭಾರತೀ ಪೀಠ, ಪ್ರವರ್ಧಮಾನ ಪ್ರಶಸ್ತಿಗಳೂ ನನ್ನವಾಗುತ್ತಿದ್ದವು. ಪ್ರಕಾಶಕರು, ಚಲನಚಿತ್ರ ನಿರ್ಮಾಪಕರು ನನ್ನ ಬರವಣಿಗೆಗೆ ಹಪಹಪಿಸುತ್ತ ಮನೆಯ ಮುಂದೆ ಸಾಲು ಕಟ್ಟಿ ನಿಲ್ಲುತ್ತಿದ್ದರು... ಇವೆಲ್ಲಕ್ಕಿಂತ ಹೆಚ್ಚಾಗಿ ನಾನು ಹೆಣ್ಣಾಗಿ ಹುಟ್ಟಿದ್ದರೆ ನಿನ್ನ ಸ್ನೇಹಿತೆಯರಾದ ಸ್ತ್ರೀ ಸ್ವಾತಂತ್ರ್ಯ ಹೋರಾಟಗಾತಿಯರಂತೆ, ವಾಕ್ ಸ್ವಾತಂತ್ರ್ಯವನ್ನು ಧಾರಾಳವಾಗಿ ಬಳಸಬಹುದಿತ್ತು ಮತ್ತು ವೈಯಕ್ತಿಕ ಕುಂದುಕೊರತೆಗಳಿಗೆ ಪುರುಷರನ್ನು ಸದಾ ದೂಷಿಸಬಹುದಾಗಿತ್ತು ! ಎಂದರು. ಸ್ವಲ್ಪ ತಡೆದು, ''ಹೆಣ್ಣಿಗೆ ಮೀಸಲಾಗಿದ್ದ ಪಾರಿತೋಷಕ ಪುರಸ್ಕಾರಗಳ ಜೊತೆಗೆ ಇತರ ಸಾಮಾನ್ಯ ಪ್ರಶಸ್ತಿಗಳೂ ಸಲ್ಲುತ್ತಿದ್ದವು... ಅಲ್ಲದೇ ವಿಶ್ವಸುಂದರಿ ಸ್ಪರ್ಧೆಯಲ್ಲೂ ಒಂದು ಕೈ ನೋಡಿ ಬಿಡಬಹುದಾಗಿತ್ತು !'' ಎಂದಾಗ ಗೊಳ್ಳೆಂದು ನಕ್ಕು ಬಿಟ್ಟೆ. ''ಸಾಕು ಬಿಡಿ, ಈಗಲೂ ಬೊಕ್ಕತಲೆ, ಡೊಳ್ಳು ಹೊಟ್ಟೆ ಹೊತ್ತು 'ವಿಶ್ವ ಸುಂದರಿ' ಸ್ಪರ್ಧೆಗೆ ಹೋಗಬಹುದಂತೆ ! ಎಂದು ಚುಡಾಯಿಸಿದೆ. ''ಅದೆಲ್ಲ ಮರೆತು ಬಿಡು. ನಾವಿಬ್ಬರೂ ಹೆಣ್ಣಾಗಿ ಹುಟ್ಟಿದ್ದರೆ ಈ ರೀತಿ ಸಂಸಾರ ಮಾಡುವುದು ಅಸಾಧ್ಯವಾಗುತ್ತಿತ್ತು. ಪತಿ–ಪತ್ನಿಯರಾಗಿ ಬಾಳವುದು ಅತಿಮುಖ್ಯವೇ ಹೊರತು, ಪತಿ ಯಾರು ? ಪತ್ನಿ ಯಾರು ಆಗಬೇಕು ? ಎಂದು ಕಚ್ಚಾಡುವುದು ಬೇಡ. ಸುಖ ಸಂಸಾರಕ್ಕೆ ಒಂದು ಸೂತ್ರ ಹೇಳಿಬಿಡುತ್ತೇನೆ. ಗಂಡನಾದವನು ಹೆಂಡತಿಗೆ ಆಗಾಗ ಹಿಂದಿನ ಜನ್ಮದಲ್ಲಿ ನೀನು ಪುರುಷನಾಗಿದ್ದಿ! ಎಂದು ಹೇಳುತ್ತಾ ಇದ್ದರೆ ಎಲ್ಲ ಸರಿಹೋಗುತ್ತದೆ'' ಎಂದರು. ಈ ಸಾರ್ವಕಾಲಿಕ ಸೂತ್ರವನ್ನು ಎಲ್ಲ ಪುರುಷರೂ ಒಪ್ಪಿಯಾರೇ ?



# ೬. ವಿರಹದ ಬದುಕು

ನಮ್ಮೂರಿನಲ್ಲಿ ಡೇರೆ ಹಾಕಿದ ಪ್ರವಾಸಿ ಚಲಚ್ಚಿತ್ರ ಮಂದಿರದಲ್ಲಿ ಶಾಲಾ ಬಾಲಕಿಯಾಗಿ 'ಮೇಘದೂತ' ನೋಡುತ್ತಿದ್ದಾಗ ವಿಚಿತ್ರವಾದ ಅನುಭವಗಳಾಗಿದ್ದವು. ಕಾರ್ಮೋಡಗಳಿಂದ ಕವಿದ ಗಗನ ಮಂಡಲ ಅಬ್ಬರದಿಂದ ಬೀಸುವ ಗಾಳಿ, ವಿರಹದಿಂದ ಜರ್ಜರಿತನಾದ ನಾಯಕನು ತನ್ನ ಪ್ರೇಯಸಿಗೆ ಕಳಿಸುವ ಸಂದೇಶವನ್ನು ಮೋಡಕ್ಕೆ ವಿವರಿಸಿ ಹೇಳುವದು, ಕಲ್ಪನೆಗೆ ನಿಲುಕದ ಮಾತಾಗಿತ್ತು, ನಮ್ಮ ಹಿರಿಯರು ಯಾರೂ ವಿರಹ ವೇದನೆಯಿಂದ ಬಳಲುತ್ತಿರುವವರು, ಹೀಗೆ ವರ್ತಿಸಿರಲಾರರು ! ಎಂದು ಖಾತ್ರಿಯಾಗಿತ್ತು, ಮುಂದೆ ಕಾಲೇಜಿನಲ್ಲಿ ಸಂಸ್ಕೃತ ಓದುವಾಗ ಇದೇ ಕೃತಿಯನ್ನು ಅಭ್ಯಸಿಸುವಾಗ ಮೇಘದೂತನನ್ನು ಎದುರುಗೊಳ್ಳುತ್ತಿರಬಹುದಾದ ವಿರಹಿಣಿಯ ಭಾವಗಳನ್ನು ಕಲ್ಪಿಸಿಕೊಂಡು ರೋಮಾಂಚನವಾಗುತ್ತಿತ್ತು, ಆಗ ವಿವಾಹ, ಭಾವೀಪತಿ, ಸಂಸಾರಗಳ ವಿಚಾರಗಳು ತಲೆಯಲ್ಲಿ ಸುಳಿಸುಳಿದು, ಓದು ಹಿಂದಕ್ಕೆ ಬೀಳುತ್ತಿತ್ತು. ಮೆಚ್ಚಿದವರಿಂದ ದೂರ ಇದ್ದು ಕೊರಗುವ ಪ್ರಸಂಗಗಳು ಬರದಿರಲಿ ದೇವಾ ! ಎಂದು ಅಂತರಂಗ ಆಗಾಗ ಮೊರೆಯುತ್ತಿತ್ತು, ಆದರೆ ಜೀವನದ ವಿರೋಧಾಭಾಸಗಳು ತುಂಬ ! ಅಂತೆಯೇ ಅವುಗಳೊಂದಿಗೆ ಹೊಂದಾಣಿಕೆ ಸಾಧಿಸಿ ಬದುಕಲು ಕಲಿಯುವದೇ ಜಾಣತನ ಎನಿಸುತ್ತದೆ.

ಆದರ್ಶ ವರನು ಎಂಥವನಿರಬೇಕು? ಎಂದು ಕನಸು ಕಂಡ ವ್ಯಕ್ತಿಯನ್ನೇ ವರಿಸುವ ಭಾಗ್ಯ ನನ್ನದಾಯಿತು. ಆದರೆ ನಮ್ಮಿಬ್ಬರ ಕಾರ್ಯಕ್ಷೇತ್ರಗಳು ತೀರ ಭಿನ್ನವಾಗಿದ್ದವು. ಹೀಗಾಗಿ ವೈವಾಹಿಕ ಜೀವನದ ಹೆಚ್ಚಿನ ವರ್ಷಗಳನ್ನು ಒಬ್ಬರಿಂದ ಇನ್ನೊಬ್ಬರು ದೂರ, ಬಲುದೂರವಿದ್ದು ನಮ್ಮ ಕರ್ತವ್ಯಗಳನ್ನು ಪಾಲಿಸಬೇಕಾಯಿತು. ಪ್ರಾರಂಭದಲ್ಲೆ, ರಾಜಸ್ಥಾನದಲ್ಲಿ, ಜೈಪುರದಲ್ಲಿ ನಾನಿದ್ದರೆ, ಅರವತ್ತೈದು ಕಿಲೋಮೀಟರ ದೂರದ ಚಿಕ್ಕಹಳ್ಳಿ ಜೋಬನೇರದಲ್ಲಿ ಅವರು. ಈಗಿನ ಬೆಂಗಳೂರಿಗರಿಗೆ ಈ ಅಂತರ ಕಂಡಿರಲಾರದು ! ಆದರೆ ರಾಜಸ್ಥಾನದಲ್ಲಿ ಕಚ್ಚಾ ರಸ್ತೆ, ಅಸ್ತವ್ಯಸ್ತ ವಾಹನ ವ್ಯವಸ್ಥೆ, ಆಗಾಗ ನಿಂತೇ ಬಿಡುವ ಹಳೆಯ ಮುರುಕಲು ವಾಹನಗಳಿಂದಾಗಿ, ವಾರಕ್ಕೊಮ್ಮೆ ಬಂದು ಹೋಗುವದೇ ಕಷ್ಟಸಾಧ್ಯವಾದಾಗ, ಪ್ರತಿದಿನ ಪ್ರವಾಸ ಮಾಡುವ ಮಾತಂತೂ ದೂರವೇ ಉಳಿಯಿತು. ಅಂದಿನ ದೂರವಾಣಿ ಸಂಪರ್ಕ, ಸಿರಿವಂತರಿಗೂ ಎಟುಕದ ಮಾತಾಗಿತ್ತು, ಅಂಚೆಗೆ ಶರಣು ಹೋದರೆ, ಒಂದು ವಾರವಾದರೂ ಪತ್ರಗಳು

ತಲುಪುತ್ತಿರಲಿಲ್ಲ. ಹೀಗಾಗಿ ನಮ್ಮಿಬ್ಬರ ಎರಡು ಬಿಡಾರಗಳು ಜಯಪುರ ಜೋಬನೇರ ಗಳಲ್ಲಿ ಪ್ರಾರಂಭವಾದವು. ವಾರಾಂತ್ಯಕ್ಕೆ ಚಾತಕ ಪಕ್ಷಿಯಂತೆ ರಾಯರ ಬರವನ್ನು ಕಾಯುವದೇ ಗತಿಯಾಗಿತ್ತು, ಮೊದಮೊದಲು ರಾಯರ ಚಪ್ಪರ ಹಾರಿ ಹೋಗುವಂಥ ಗೊರಕೆಗೆ ಬೆಚ್ಚಿ ಬೀಳುತ್ತಿದ್ದೆ. ವಿರೋಧಿಸುತ್ತಿದ್ದೆ. ಗೊರಕೆ ನಿಲ್ಲಿಸಲು ತಜ್ಞ ವೈದ್ಯರಿಂದ ಚಿಕಿತ್ಸೆ ಪಡೆಯಲೂ ಸೂಚಿಸಿದ್ದೆ. ಆದರೆ ಜಯಪುರದ ಮನೆಯಲ್ಲಿ ಒಬ್ಬಳೇ ವಾಸ ಪ್ರಾರಂಭಿಸಿದಾಗ ನನ್ನ ಪ್ರೀತಿಯ ಮಾಲಕಂಸ್ ರಾಗಕ್ಕಿಂತ ಯಜಮಾನರ ಗೊರಕೆ ನಾದವೇ ಚೆನ್ನಾಗಿತ್ತಲ್ಲ! ಅನಿಸಲಾರಂಭಿಸಿತು.

ರಾಯರು ಜಯಪುರದಲ್ಲಿ ಬಗೆ ಬಗೆಯ ತಿಂಡಿ, ಹಣ್ಣು ಕಾಯಿಪಲ್ಲೆಗಳನ್ನು ತಂದಿಡುತ್ತಿದ್ದರು. ಜೋಬನೇರಕ್ಕೆ ಹೋದ ಮೇಲೆ ತೋಚಿದ ಅಡಿಗೆ ತಾವೇ ಮಾಡಿ ಕೊಳ್ಳುತ್ತಿದ್ದಾಗ ನನಗೆ ಕೊಡಮಾಡಿದ ಸೌಕರ್ಯ ಸ್ವತಃ ಅವರಿಗೇ ಇಲ್ಲವಲ್ಲ! ಎಂದು ನೆನಪಿಸಿಕೊಂಡು ವಿರಹವೇದನೆ ಹೆಚ್ಚಾಗುತ್ತಿತ್ತು. ಅಕ್ಕಪಕ್ಕದವರು. ಹಬ್ಬ ಹುಣ್ಣಿವೆಗಳ ವಿಶೇಷ ತಿಂಡಿಗಳನ್ನು ಕೊಡಮಾಡಿದಾಗ, ಒಬ್ಬಳಿಗೇ ತಿನ್ನಲು ಮನಸ್ಸು ಬಾರದು ! ಅವರಿಂದ ದೂರವಿದ್ದಾಗ ಅವರು ಬಿಟ್ಟು ಹೋದ ಶರ್ಟು ಪ್ಯಾಂಟುಗಳನ್ನು ತೊಳೆದು ಇಸ್ತ್ರೀ ಮಾಡುವದರಲ್ಲೇ ಸಮಾಧಾನ ಪಟ್ಟುಕೊಳ್ಳುತ್ತಿದ್ದೆ.

ರಾಯರು ಇನ್ನೂ ದೂರದ ಪ್ಲಾಸಿಗೆ (ಪ. ಬಂಗಾಲ) ಹೊರಟು ಹೋಗುವದು ನಿಶ್ಚಿತವಾಯಿತು. ತಾಯಿಯಾಗಲಿದ್ದೇನೆ, ಎಂದು ತಿಳಿದಾಗ, ಇದ್ದುದರಲ್ಲೇ ಹುರುಪು ಹುಟ್ಟಿತು. ರಾಯರಿಲ್ಲದಾಗ, ಜೊತೆ ಕೂಡಲು ಅವರದೇ ಪುಟ್ಟ ಪ್ರತಿರೂಪ ಬರಲಿದೆ! ಎನ್ನುವ ವಿಚಾರ, ಒಂಟಿತನ ಕಡಿಮೆ ಮಾಡುತ್ತಿತ್ತು, ಆಗಾಗ ಉದರದಲ್ಲಿ ಪುಟ್ಟ ಕಾಲುಗಳು ಒದ್ದ ಅನುಭವವಾದಾಗ. 'ತಾಳು, ಒಮ್ಮೆ ಹೊರಬಂದ ಮೇಲೆ ಅಪ್ಪನಿಂದ ಛೀ ಮಾರಿ ಹಾಕಿಸುತ್ತೇನೆ !'' ಎಂದು ನನಗೆ ನಾನೇ ಹೇಳಿಕೊಳ್ಳುವೆ. ಅದನ್ನು ತಿಳಿದುಕೊಂಡಿದೆಯೋ ಏನೋ ಅನ್ನುವಂತೆ ಹೊಟ್ಟೆಯೊಳಗಿನ ಜೀವ, ಆಮೇಲೆ ತೆಪ್ಪಗಿರುತ್ತಿದ್ದುದನ್ನು ಅನುಭವಿಸಿ ಅಚ್ಚರಿಯಾಗದೇ ಇರುತ್ತಿರಲಿಲ್ಲ ! ಭಾವೀ ಮಗನ ಸಾನ್ನಿಧ್ಯವೇ ನವಮಾಸ ತುಂಬುತ್ತಿದ್ದ ಒಂಟಿ ಹೆಣ್ಣಿಗೆ ಧೈರ್ಯಸ್ಥೈರ್ಯಗಳನ್ನು ತಂದುಕೊಟ್ಟವು. ಕೊನೆಗೊಮ್ಮೆ ಹೆರಿಗೆಗೆ ಸಹಾಯ ಮಾಡಲು ಅತ್ತೆ–ನಾದಿನಿಯರು ಬಂದು ಇಳಿದಾಗ, ಯುವರಾಜ ಕಾಣಿಸಿಕೊಂಡ. ತಂದೆಗಿಂತ ತಾನೇ ಹತ್ತಿರದವನಾದ. ''ನಿನ್ನ ಯಜಮಾನ ಹುಟ್ಟಿದಾಗ ಹೀಗೇ ಇದ್ದ !'' ಅತ್ತೆಯವರು ನೆನಪಿಸಿಕೊಂಡರೆ, ಸೋದರನೇ ಇನ್ನೊಂದು ರೂಪದಲ್ಲಿ ಬಂದಂತೆ ಇದ್ದಾನೆ ! ಎಂದು ನಾದಿನಿ ಮೆಚ್ಚಿಗೆ ಸೂಸಿದಳು. ನಂತರ ಧಾರವಾಡ ತಲುಪಿದಾಗ, ತುಂಬ ದಿನದಿಂದ ಕೆಲಸಕ್ಕಿದ್ದ ಆಲಾಬಿ, ''ನಿಮ್ಮ ಸಾಹೇಬ್ರನ್ನ ಮರೆಸಬೇಕ್ರೀ. ಇವನ್ನ ತೋರಿಸಬೇಕ್ರ !'' ಎಂದು ತಂದೆ, ಮಗನಿಗಿದ್ದ ಹೋಲಿಕೆಯನ್ನು ಎತ್ತಿ ತೋರಿಸಿದಳು. ಇನ್ನು ಈ ಮರಿರಾಯ, ನನ್ನ ಕಾಯಂ – ವಿರಹ ಕಡಿಮೆ ಮಾಡಿಯಾನು ! ಎಂಬ ನೆಮ್ಮದಿ, ಬಹಳ ದಿನ ಉಳಿಯಲೇ ಇಲ್ಲ. ''ವರ್ಷದುದ್ದಕ್ಕೂ ತಂದೆಯಿಂದ, ದಿನದುದ್ದಕ್ಕೂ ತಾಯಿಂದ ಮಗು ದೂರ ಇರುವದು

ಬೇಡ. ಮನೆತುಂಬ ಮಕ್ಕಳಿರುವ ಮನೆಯಲ್ಲಿ ಆತ ಸುಖವಾಗಿ, ತಂದೆಯಂತೆ ಶಾಣ್ಯಾ ಆಗಿ ಬೆಳೆಯಲಿ !'' ಎಂದು ಅತ್ತೆಯವರು ಅವನನ್ನು ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರಕ್ಕೆ ಕರೆದುಕೊಂಡೇ ಹೋದರು. ರಾಯರು ಅದಾಗಲೇ ಪಶ್ಚಿಮ ಬಂಗಾಲದ ಪ್ಲಾಸಿಗೆ ಹೋಗಿದ್ದರು. ತಿರುಗಿ ಒಂಟಿತನ ನನ್ನದಾಯಿತು.

ದೂರದಲ್ಲಿದ್ದ ಯಜಮಾನರು ಈಗ ಪತ್ರದೂತನನ್ನು ಸಜೀವವಾಗಿಸಿದರು. ದಿನಕ್ಕೊಂದು ಪರಸ್ಪರ ಪತ್ರ ಬರೆಯುವ ಪರಂಪರೆಯನ್ನು ಪ್ರಾರಂಭಿಸಿದರು. ಅವರಿಂದ ಬರುತ್ತಿದ್ದ ಪ್ರತಿಯೊಂದು ಪತ್ರದಲ್ಲಿಯೂ ಜೀವನದಲ್ಲವರು ಪಾಲಿಸಿ ಕೊಂಡು ಬಂದಿದ್ದ ಕಟ್ಟು ನಿಟ್ಟು, ಶಿಸ್ತುಗಳಿಗೆ ಪ್ರಾಧಾನ್ಯ ನೀಡಲಾಗಿತ್ತು. ಪ್ರತಿ ಪತ್ರದಲ್ಲಿ ದಿನಾಂಕದ ಜೊತೆಗೆ ಅನುಕ್ರಮ ನಂಬರು ಇರುತ್ತಿತ್ತು. ಅಕಸ್ಮಾತ್ ಪತ್ರವೊಂದು ಕಾಣೆಯಾದರೆ, ನೆನಪಿನಿಂದಲೇ ಆ ಪತ್ರವನ್ನು ಯಥಾವತ್ ಪುನಃ ಬರೆಯುವ ಅದ್ಭುತ ಶಕ್ತಿ ಅವರದು. ಪತ್ರಗಳ ಅಂಚನ್ನು ನೀಟಾಗಿ ಕತ್ತರಿಸಿ ಒಡೆಯಬೇಕೆಂದು ಒಂದು ಚಿಕ್ಕ ಕತ್ತರಿ ಬೇರೆ ಕೊಡಿಸಿದ್ದರು. ಆಫೀಸಿನ ಕೆಲಸ ಮನೆಗೆಲಸಗಳಿಂದ ಬಳಲಿದರೂ, ಪತ್ರ ದರ್ಶನದಿಂದಲೇ ಪುಳಕಿತಳಾಗುತ್ತಿದ್ದ ದಿನಗಳು.

ಈಗ ರಾಯರು ಬೆಂಗಳೂರಿನಲ್ಲಿ ನೆಲೆಸಿದರು. ಆಕಾಶವಾಣಿಯವರು ಕಲಕತ್ತೆಗೆ ನನ್ನನ್ನು ವರ್ಗಾಯಿಸಿದರು. ನಮ್ಮ ಪತ್ರ ಸಂಸಾರ ಮುಂದರಿಯಿತು. ಚಿಕ್ಕ ಚಿಕ್ಕ ಅಕ್ಷರಗಳಲ್ಲಿ ಒಂದಿಷ್ಟು ಚಿತ್‌ಕಾಟು ಇಲ್ಲದೇ ಪುಟದುದ್ದಕ್ಕೂ ಬರುತ್ತಿದ್ದ ದೈನಂದಿನ ಪತ್ರಗಳನ್ನು ನೋಡಿ ಹಾಸ್ಟೆಲಿನ ಸಹವಾಸಿನಿಯರು ಅಸೂಯೆ ಪಡುತ್ತಿದ್ದರು. ಅವರ ಕಣ್ಣುತಪ್ಪಿಸಿ ಎರಡು ಮೂರು ಬಾರಿ ಓದುವ ಚಟ ಬೆಳೆಸಿಕೊಂಡಿದ್ದೆ. ಜೊತೆಯಲ್ಲಿದ್ದಾಗ ಮಿತಭಾಷಿ ಯಿದ್ದವರು ಪತ್ರದಲ್ಲಿ ವಾಚಾಳಿ! ಬರೆಯದ ವಿಷಯವೇ ಇರುತ್ತಿರಲ್ಲಿಲ್ಲ. ಅಸಾಮಾನ್ಯರು, ಕಂಡ ವಿಶೇಷ ಘಟನೆ –ವ್ಯಕ್ತಿಗಳು ಓದಿದ ಪುಸ್ತಕ, ಕೇಳಿದ ಸಂಗೀತ, ಬರೆದ ಲೇಖನ, ವಿನೋದ, ವಿಚಾರ, ಪ್ರದೇಶ ಪರಿಚಯ ಅನಿಸಿಕೆಗಳು ಹಣಕಾಸಿನ ವ್ಯವಸ್ಥೆ, ರಾಜಕೀಯ ಆಗು–ಹೋಗುಗಳು, ಆದರ್ಶಗಳು, ಜನಜೀವನ, ಅಂತೂ ಯಾವತ್ತೂ ಜೀವನ ಪಾಠಗಳು, ಅವುಗಳಲ್ಲಿ ಸಮಾವೇಶಗೊಂಡಿರುತ್ತಿದ್ದವು. ಎಂದಾದರೂ ರಜೆ ಪಡೆದು ರಾಯರ ಊರಿಗೆ ಹೋದರೆ, ಅವರು ವಿವಿಧ ಚಟುವಟಿಕೆಗಳಲ್ಲಿ ತೊಡಗಿದ್ದು, ನಿರೀಕ್ಷಿಸಿದಷ್ಟು ಸಮಯವನ್ನು ಜೊತೆಯಲ್ಲಿ ಕಳೆಯಲಾಗುತ್ತಿರಲಿಲ್ಲ, ಕಲಕತ್ತೆಗೆ ಹಿಂದಿರುಗಿದಾಗ ತಿರುಗಿ ಪತ್ರಗಳೇ ಸಂಗಾತಿ! ದಿನಂಪ್ರತಿ ಪಡೆಯುತ್ತಿದ್ದ ಪತ್ರಗಳಲ್ಲಿ ಬರೆಯುತ್ತಿದ್ದುದೇನು ? ಎಂದು ಕನ್ನಡ ಅರಿಯದ ಗೆಳತಿಯರ ಕುತೂಹಲ ತಣಿಸಲೆಂದು ಕೆಲಭಾಗಗಳನ್ನು ಭಾಷಾಂತರಿಸಿ ಹೇಳುತ್ತಿದ್ದೆ. ''ನಿಮ್ಮ ಪತಿ ಉತ್ತಮ ಲೇಖಕರಿರಬೇಕಲ್ಲವೇ?'' ಎಂದು ವಿಸ್ಮಯ ಪಡುವರು. ''ಏನಿದ್ದರೇನು? ಅವರೊಂದಿಗೆ ಸಂಸಾರ ಹೂಡುವ ಯೋಗವಿಲ್ಲವಲ್ಲ ? ಎಂದು ಬೇಸರಿಸಿದರೆ. ಒಬ್ಬಾಕೆ, ''ಪತ್ರ–ಪತಿ ಇದ್ದಾರಲ್ಲ? ದಿನವೂ ಪತ್ರಮೂಲಕ ನಿಮ್ಮನ್ನು ಮುಟ್ಟುತ್ತಾರೆ!'' ಎಂದು ಚಟಾಕಿ ಹಾರಿಸಿದರೆ, ಇನ್ನೊಬ್ಬಾಕೆ, ನಮಗೆ ಪತಿಯೂ ಇಲ್ಲ!

ಪತ್ರವೂ ಇಲ್ಲ. ನಾವೇನು ಅನ್ನಬೇಕು ?'' ಎಂದು ಪ್ರಶ್ನಿಸುವಳು. ಅವರ ಹಾಸ್ಯ, ತರ್ಕಗಳು ವಿರಹವನ್ನು ಮರೆಸುತ್ತಿದ್ದವು.

ವಿರಹದ ಮೂರನೆಯ ಘಟದಲ್ಲಿ ಮಗನೊಂದಿಗೆ ಧಾರವಾಡದಲ್ಲಿ ಸಂಸಾರ ಹೂಡಿದೆ. ಅವನಿಗೆ ಕಥೆ ಕೇಳುವದೆಂದರೆ ಪಂಚಪ್ರಾಣ. ಹುಲಿ ಕರಡಿಗಳ ಕಥೆಗಳೆಲ್ಲ ಮುಗಿದ ನಂತರ ಅವನನ್ನೇ ನಾಯಕನನ್ನಾಗಿ ಮಾಡಿ ಕಥೆಗಳನ್ನು ಹೆಣೆಯಲಾರಂಭಿಸಿದೆ. ತಂದೆಯನ್ನು ಅವನು ಬಹಳಷ್ಟು ಹೋಲುತ್ತಿದ್ದುದರಿಂದ ''ವಿಕಾಸನು ಸಾಹೇಬನಾಗಿದ್ದ'' ಕಥೆ ಹೇಳುತ್ತಿದ್ದೆ. ಒಂದು ದಿನ ಅವನು ತಂದೆಯ ಬಟ್ಟೆ ಬರೆಗಳನ್ನು ತೊಟ್ಟು, ಶ್ಯೂ ಹಾಕಿಕೊಂಡು ದಪ್ಪವಾದ ಕೃತಕ ಮೀಸೆಗಳನ್ನು ಅಂಟಿಸಿಕೊಳ್ಳುತ್ತಾನೆ. ರಾಜ ಠೀವಿಯಿಂದ ಅಪ್ಪನ ಆಫೀಸಿಗೆ ಹೋದಾಗ ಸಹೋದ್ಯೋಗಿಗಳೆಲ್ಲ ಎದ್ದು ನಿಂತು ನಮಸ್ಕಾರ ಮಾಡಿ ಗೌರವ ತೋರಿಸುತ್ತಾರೆ. ಖುರ್ಚಿಯಲ್ಲಿ ಕುಳಿತಾಗ ಟೇಬಲ್ ಅಡ್ಡಬಂದು ಮುಂದೆ ಕುಳಿತವರು ಕಾಣಿಸುವದಿಲ್ಲ ! ಆಗ ಈತನು ಖುರ್ಚಿಯಿಂದ ಟೇಬಲ್ ಏರಿ ಕುಳಿತು ಬಿಡುತ್ತಾನೆ. ಹಿರಿಯ ಕೆಲಸಗಾರನಿಗೆ ಏಕೋ ಅನುಮಾನ ಬಂದು, ಜೇಬಿನಿಂದ ಒಂದು ಚಾಕಲೇಟ್ ತೆಗೆದು ಯಾರಿಗೆ ಬೇಕು ಚಾಕಲೇಟ್ ? ಎನ್ನುತ್ತಾನೆ. ವಿಕಾಸನು ತನ್ನ ಸಾಹೇಬ ಗಿರಿಯನ್ನು ಮರೆತು, ಅವನ ಕೈಯಿಂದ ಚಾಕಲೇಟ್ ಕಿತ್ತುಕೊಂಡು ಬಿಡುವದರಿಂದ ಗುಟ್ಟು ರಟ್ಟಾಗಿ ಬಿಡುತ್ತದೆ. ಆಗ ಅಲ್ಲಿದ್ದ ಒಬ್ಬಾತ, ಆತನನ್ನು ಸ್ಕೂಟರ ಮೇಲೆ ಮನೆಗೆ ತಂದು ಬಿಡುತ್ತಾನೆ.

ಇಂಥ ವಿಕಾಸನು 'ಅಪ್ಪ' ಆದಾಗಿನ ಕಥೆಗಳನ್ನು ಅವನಿಗೆ ಎಷ್ಟು ಕೇಳಿದರೂ ಸಾಕಾಗುತ್ತಿರಲಿಲ್ಲ. ಆಗ ಕಥೆ ಹೇಳುತ್ತ ರಾಯರು ಜೊತೆಗೇ ಇದ್ದಾರೆಂಬ ಭ್ರಮೆಯಲ್ಲಿ ಇರುತ್ತಿದ್ದೆ !

ಮುಂದೆ ಮೈಸೂರಿಗೆ ವರ್ಗವಾಯಿತು. ಪತ್ರ ಸಂಸಾರ ನಿಂತು ವಾರಾಂತ್ಯದ ಸಂಸಾರ ಪ್ರಾರಂಭವಾಯಿತು. 'ಅಮ್ಮನಿಗೆ ಏನಾದರೂ ಸಮಸ್ಯೆ ಬಂದರೆ ಸಾಕು, ಬಾಪ್ಪಾ (ಅಪ್ಪ) ಇದ್ದಲ್ಲಿ ಧಾವಿಸಿ ಬರುತ್ತಾರೆ !' ಎಂದು ವಿಕಾಸನು ಗೇಲಿ ಮಾಡುತ್ತಿದ್ದ. ಮುಂದಾಗಿ ತಿಳಿಸದೇ ಬೆಂಗಳೂರಿಗೆ ಬರುತ್ತಿದ್ದೆನಾದ್ದರಿಂದ ಮನೆ ಸೇರಿದಾಗ ರಾಯರು ಅಲ್ಲಿ ಇರದಿರುವ ಸಂದರ್ಭಗಳೇ ಹೆಚ್ಚಾಗಿರುತ್ತಿದ್ದವು. ಆದರೆ ಅಂಥ ಸಂದರ್ಭಗಳಲ್ಲಿ ನಿರಾಶೆಗೆ ಅವಕಾಶವಾಗದಂತೆ ಬಂದ ಪತ್ರಗಳು, ಬೇಕಾದ ಕಾಗದ ಪತ್ರಗಳನ್ನೆಲ್ಲ ಟೇಬಲ್ಲಿನ ಮೇಲೆ ಕ್ರಮವಾಗಿ ಜೋಡಿಸಿಡುವರು. ಊರಲ್ಲೇ ಇಲ್ಲದಾಗ ಬಸ್ಸಿಗೆ, ಖರ್ಚಿಗೆ ಬೇಕಾಗುವ ಹಣ ಇಡುವರು. ಊಟ, ತಿಂಡಿ – ಲಭ್ಯವಿದ್ದ ಸಾಮಗ್ರಿಗಳ ಯಾದಿಯೊಂದು ಕಾದಿರುತ್ತಿತ್ತು. ಇತ್ತೀಚಿನ ಛಾಯಾಚಿತ್ರಗಳು ಇರುತ್ತಿದ್ದವು. ವಿಶೇಷ ಸೂಚನೆಗಳು ಇರುತ್ತಿದ್ದವು. ಅವರ ಸಾಮಾನುಗಳಿಂದ ತುಂಬಿತುಳುಕುತ್ತಿದ್ದ ಮನೆ, ಸಂಗಾತಿಯ ಸುಖ ಕೊಡಮಾಡುತ್ತಿದ್ದವು. ಶರೀರದ ಸಾನ್ನಿಧ್ಯಕ್ಕಿಂತ ಮಾನಸಿಕ ಅಸ್ತಿತ್ವವನ್ನು ವಿರಹಿಗಳು ಹೆಚ್ಚೆಚ್ಚು ರೂಢಿಸಿಕೊಳ್ಳಬೇಕಾದದ್ದು ಮುಖ್ಯವೆಂದು ಮನಗಾಣುವಂತೆ ಆಯಿತು.

ಮುಂದೆ ಮುಂಬಯಿಗೆ ವರ್ಗವಾಯಿತು. ಮಗ ಮೈಸೂರಿನಲ್ಲಿ ಪತಿ ಬೆಂಗಳೂರಿನಲ್ಲಿ, ಮಗ ಮಹಾಶಯನು ಒಂದೆರಡು ಸಾಲಿನ ಪತ್ರ ಗೀಚಿ ಹಾಕಿದರೂ ತನಗೆ ಪ್ರತ್ಯೇಕವಾಗಿ ಉದ್ದ ಪತ್ರ ಬರೆಯಬೇಕೆಂದು ತಾಕೀದು ಮಾಡಿದ್ದ! ದಿನಕ್ಕೊಂದು ಪತಿಗೆ ಪತ್ರ ಇದ್ದೇ ಇರಬೇಕಲ್ಲ! ಮುಂಬೈ ಜೀವನದ ಬಹುಭಾಗ ಬಿಡುವಿನಲ್ಲಿ ಮಾಡುವ ಪತ್ರಲೇಖನದಲ್ಲಿ ಕಳೆಯಿತು.

ಮಗ ವಿಕಾಸನಿಗೆ ಬರೆಯುವ ಪತ್ರಗಳಲ್ಲಿ ನನ್ನ ಅರಿವು ಇಲ್ಲದೇ ರಾಯರ ಪ್ರವೇಶವಾಗುತ್ತಿತ್ತು. 'ಜೀಜಾಮಾತಾ ಝೂ' ಕುರಿತು, ಅಲ್ಲಿಯ ಕಾಡು ಪ್ರಾಣಿಗಳ ಕುರಿತು ಬರೆಯುವಾಗ ರಾಯರು ಜೊತೆಯಲ್ಲಿದ್ದರೆ, ಆಯಾ ಪ್ರಾಣಿಗಳ ಕುರಿತು ಅದೆಷ್ಟು ರೋಚಕ ಸುದ್ದಿಗಳನ್ನು ಹೇಳುತ್ತಿದ್ದರೋ! ಎಂದು ಹಲುಬಿದೆ. 'ಪ್ರಿನ್ಸ್ ಆಫ್ ವೇಲ್ಸ' ಸಂಗ್ರಹಾಲಯಕ್ಕೆ ಹೋದಾಗ, ಮೊಗಲ್, ರಾಜಸ್ಥಾನಿ ಚಿಕಣಿ ಚಿತ್ರಗಳನ್ನು ನೋಡಿ ಅವುಗಳಲ್ಲಿ ರೂಪಗೊಂಡ ಸರಸ, ವಿರಹ ಭಾವಗಳನ್ನು ವೀಕ್ಷಿಸುತ್ತಿದ್ದಾಗ ಕಸಿವಿಸಿ ಯಾಗುತ್ತಿತ್ತು. ಎಲಿಫಂಟಾ ಗುಹಾಲಯಗಳಿಗೆ ನಾವೆಯಲ್ಲಿ ಹೊರಟಾಗ, ಅನತಿ ದೂರದಲ್ಲಿ ಕಾಣುವ ಮುಂಬಯಿ ಮಹಾನಗರದ ವಿವಿಧ ನೋಟಗಳನ್ನು, ರಾಯರು ಇದ್ದರೆ ಕ್ಯಾಮೆರಾದಲ್ಲಿ ಸೆರೆ ಹಿಡಿಯುತ್ತಿದ್ದರು! ಅನಿಸುತ್ತಿತ್ತು. ಕಾನ್ಹೇರಿ ಗುಹಾಲಯಗಳ ಬೌದ್ಧಶಿಲ್ಪಗಳನ್ನು, ಉಬ್ಬು ಚಿತ್ರಗಳನ್ನು ಚಿತ್ರಿಸುತ್ತಿದ್ದರು, ಅಲ್ಲದೇ ಇತರರಿಗೆ ಗೋಚರಿಸದ ಹಲವಾರು ಅನೇಕಾನೇಕ ವಿವರಗಳನ್ನು ಬಟ್ಟು ಮಾಡಿ ತೋರಿಸುತ್ತಿದ್ದರು. ಎಂದು ಪರಿತಪಿಸುತ್ತಿದ್ದೆ. ಆ ಶಿಲ್ಪದ ಕೇಶಾಲಂಕಾರ ಗಮನಿಸಿದೆಯಾ ? ಈ ಗಂಡು ಆಕೃತಿಯ ಲೋಲಾಕು ಎಷ್ಟು ವಿಚಿತ್ರವಾಗಿದೆ ನೋಡು. ನಾಭಿಯ ಕೆಳಗೆ ಉಡುವ ಪದ್ಧತಿ ಅಂದೂ ಜಾರಿಯಲ್ಲಿ ಇರಬೇಕಲ್ಲವೇ ?' ಮುಂತಾದ ಉದ್ಗಾರಗಳನ್ನು ಹೊರಡಿಸುವದು ಅವರ ಕ್ರಮ.

ಅನೇಕ ಬಾರಿ ವರ್ಗಾಯಿಸಿ, ಬೇಸತ್ತು ಕೊನೆಗೊಮ್ಮೆ ನಿವೃತ್ತಿ ಸಮೀಪಿಸುತ್ತಿದ್ದ ರಿಂದ, ಈಗಲಾದರೂ ಈ ಮಹಾರಾಯತಿ, ಪತಿಯೊಂದಿಗೆ ವಾಸಿಸಲಿ! ಎಂದು ಕೃಪೆ ತೋರಿ ಘನ ಸರಕಾರ, ಮುಂಬಡತಿಯೊಂದಿಗೆ ಬೆಂಗಳೂರಿಗೆ ಕಳಿಸಿತು. ಪತಿ–ಪುತ್ರರೊಂದಿಗೆ ವಾಸಿಸುವ ಸದವಕಾಶ ಕೂಡಿ ಬಂದಿತು, ಎಂದು ನೆಮ್ಮದಿಯ ಉಸಿರು ಬಿಡುವಂತೆ ಇರಲಿಲ್ಲ. ಏನಕೇನ ಪ್ರಕಾರೇಣ ಟ್ರಾನ್ಸಫರ್ ತಪ್ಪಿಸಿಕೊಂಡು ಬೆಂಗಳೂರಿನಲ್ಲೇ ಭದ್ರವಾಗಿ ತಳವೂರಿದ, ಸುಖ ಜೀವನ ರೂಢಿಸಿಕೊಂಡ ತಂಡದಿಂದ ಕೆಲಸ ತೆಗೆದುಕೊಳ್ಳುವದು ಸುಲಭ ಸಾಧ್ಯವಾಗಿರಲಿಲ್ಲ! ಬಿರುನುಡಿ ಕೇಳಿಸಿಕೊಂಡು ಪರಿಚಯವಿಲ್ಲದವರು, ಕೆಲಸಕ್ಕೆ ಮೈಬಗ್ಗದವರು, ಈ ಅಮ್ಮನಿಗೆ ಬುದ್ಧಿ ಕಲಿಸಬೇಕು ಎಂದೇ ಹೊಂಚು ಹಾಕುತ್ತಿದ್ದರು. ಕೆಲವು ಹಿತೈಷಿಗಳು ಈ ವಿಚಾರವನ್ನು ತಿಳಿಸಿದರು. ರಾಯರಿಗೆ ಒಮ್ಮೆ ಈ ವಿಷಯ ಅರುಹಿದಾಗ, ''ನಿನ್ನ ಇಷ್ಟು ವರ್ಷಗಳ ಅನುಭವಗಳಿಗೆ ಇದು ಸವಾಲು ಎಂದು ತಿಳಿ! ಎಂಥ ಪ್ರಸಂಗ ಬಂದರೂ ಹೆದರಕೂಡದು'' ಎಂದಿಷ್ಟೇ ಹೇಳಿದರು. ಸಮಯನಿಷ್ಠೆ. ಕೊಂಚವಾದರೂ ಕಾರ್ಯನಿಷ್ಠೆ ತೋರ್ಪಡಿಸುವಂತೆ ಹೆಚ್ಚಿನ

ಸಿಬ್ಬಂದಿಯನ್ನು ತೊಡಗಿಸುವದರಲ್ಲಿ ಸಫಲಳಾದೆ. ಮಲೆತು ನಿಂತವರನ್ನು ತಾತ್ಪೂರ್ತಿಕವಾಗಿ ದೂರ ಕಳಿಸಿಯೋ, ಕೆಲಕಾಲ ದೂರ ಇರಿಸುವಂತೆಯೂ ಮಾಡುವದು ಸಾಧ್ಯವಾಯಿತು.

ಕಳೆದ ಕೆಲ ವರ್ಷದಿಂದ ನಿವೃತ್ತಳಾಗಿದ್ದೇನೆ. ವಿರಹ ವಿಶಿಷ್ಟವಾಗಿದ್ದ ಜೀವನದ ಘಟ್ಟ ಮುಗಿದಿದೆ. ಆದರೆ ಸದಾಕಾಲ ಜೊತೆಗೆ ಇರುವದೇ ರಾಯರಿಗೆ ಇರಸು ಮುರುಸು ! 'ಧಾರವಾಡಕ್ಕೆ ಗೆಳತಿಯಲ್ಲಿ ಹೋಗು, ಮುಂಬಯಿಗೆ ಸೋದರನಲ್ಲಿ ಹೋಗು, ದಿಲ್ಲಿಯ ಆಪ್ತರಲ್ಲಿ ಹೋಗಿ ಬಾ' ಎಂದು ಪದೇ ಪದೇ ರಾಯರು ಹೇಳುತ್ತಾರೆ. ಜೊತೆಗೇ ಇದ್ದರೆ ನನ್ನ ಮೂಡ್ ಸರಿಯಿರುವದಿಲ್ಲ, ವಿರಹದಲ್ಲೆ ನಾನು ಸರಿಯಾಗಿ ನಡೆದುಕೊಳ್ಳುವ ವ್ಯಕ್ತಿ ಎಂದು ಅವರು ಭಾವಿಸಿದಂತೆ ಇದೆ ! ದೂರವಿದ್ದಾಗಲೇ "ಸಹಜೀವನ" ಸವಿಯಾಗಿ ಕಾಣುತ್ತದೆ. ಅರ್ಥಪೂರ್ಣವಾಗುತ್ತದೆ" ಎಂದು ಸೂಚ್ಯವಾಗಿ ಹೇಳುತ್ತಲೇ ಇರುತ್ತಾರೆ. ಈಗ ಅಮೇರಿಕೆಯಲ್ಲಿರುವ ವಿಕಾಸನು ಅಲ್ಲಿ ಬಂದು ಹೋಗಲು ಒತ್ತಾಯಿಸುತ್ತಿದ್ದಾನೆ. ಸಧ್ಯಕ್ಕೆ ಮೂರು ತಿಂಗಳಿಗೆಂದು ಹೊರಟು ನಿಂತಿದ್ದೇನೆ. ಮೂರೇ ವಾರಗಳಲ್ಲಿ ಹಿಂದಿರುಗಿದರೆ ನಗಬೇಡಿ !

■ ■

## ೭. ಅಮ್ಮನ ಕೈಗೆ ಭೀಮಬಲ !

ಇತ್ತೀಚೆಗೆ, ಅಮೇರಿಕೆಯಲ್ಲಿರುವ ನಮ್ಮ ಮಗ ವಿಕಾಸ, ಬೆಂಗಳೂರಿಗೆ ಬಂದಾಗ, ''ಸ್ವಲ್ಪ ಕೈ ಕಾಲು ಆಡಿಸಿ ಬಾ !'' ಎಂದು ಆಗ್ರಹದಿಂದ ಅಮೇರಿಕೆಗೆ ಕರೆದೊಯ್ದಿದ್ದ. ಆಗ ಅವನು ಎರಡು ಕಂಡೀಶನ್ ಹಾಕಿದ್ದ, ''ಮೊದಲನೆಯದು ಯಾವುದಕ್ಕೂ ಎಷ್ಟು ದುಡ್ಡು ಕೊಟ್ಟೆ ? ಅಂತ ಕೇಳಬಾರದು ! ಎರಡನೆಯದು ಹೊರಗೆ ಊಟ ಮಾಡೋ ಪ್ರಸಂಗ ಬಂದಾಗ, ಊಟ–ತಿಂಡಿಯೊಳಗೆ ಏನೇನು ಹಾಕಿದ್ದಾರೆ ? ಎಂದು ವಿಚಾರಿಸ ಬಾರದು'' ಎಂದು. ಇವೆರಡಕ್ಕೂ ಕಾರಣ ಊಹಿಸ ಬಲ್ಲಿರಿ ! ಡಾಲರಿಗೆ ೩೫ ರೂಪಾಯಿ ಅಂದ ಕೂಡಲೆ ನಾಲಿಗೆ ಗುಣಾಕಾರ ಗುಣಗುಣಿಸಲಿಕ್ಕೆ ಪ್ರಾರಂಭಿಸುತ್ತದೆ ! ಎರಡನೆಯದಕ್ಕೆ ಊಟದೊಳಗೆ ಎಂಥೆಂಥ ಮಾಂಸ ಹಾಕಿದ್ದರೋ ಏನೋ ? ಎಂದು ಮೀಮಾಂಸೆ ಶುರು ಆಗುತ್ತದೆ ! ಆದ್ದರಿಂದ ಮೊದಲೇ ''ನೆನಪಿಡು, ಅಮೇರಿಕೆಯೊಳಗೆ ಇವೆರಡೂ ನಿಷಿದ್ಧ!'' ಎಂದು ದಬಾಯಿಸಿ ಹೇಳಿದ್ದ. ನಾನೂ ನನ್ನ ಮಗನ ಕೈಯಲ್ಲಿ ಬುದ್ಧಿ ಕೊಟ್ಟು, ಬಾಯಿ ಮುಚ್ಚಿಕೊಂಡು ಇದ್ದೆ, ನನ್ನ ಸ್ವಭಾವಕ್ಕೆ ವಿರುದ್ಧವಾಗಿ ! ಕಣ್ಣು ಮಾತ್ರ ತೆರೆದಿಟ್ಟು ನೋಡ್ತಿದ್ದೆ. ಲೋಕ ವ್ಯವಹಾರವನ್ನು.

ಅಮೇರಿಕಾದ ದಕ್ಷಿಣದ ರಾಜ್ಯ ಅಲಬಾಮದ ಪ್ರಮುಖ ಪಟ್ಟಣ ಬರ್ಮಿಂಗ್ ಹ್ಯಾಂ, ವಿಕಾಸ ಇದ್ದ ಊರು. ಹೊರಡುವಾಗ 'ಬೆಂಗಳೂರಿನಿಂದ ಏನೂ ಒಯ್ಯುವುದು ಬೇಡ. ಮನೆಯೊಳಗೆ ಎಲ್ಲ ಸಾಮಾನೂ ಇದೆ. ಅಮೇರಿಕೆಯೊಳಗೆ ಸಿಗುವ ಸಾಮಾನು ಗಳಿಂದಲೇ ಅಡಿಗೆ ಮಾಡಿ ಹಾಕು ! ಎಂದು ಕಟ್ಟು ನಿಟ್ಟಾಗಿ ಹೇಳಿದ್ದ. ಅದಕ್ಕೂ 'ಹೂಂ' ಗುಟ್ಟಿದ್ದೆ.

ನಮ್ಮ ಪ್ಲೇನು, ಮಧ್ಯರಾತ್ರಿ ಅಟ್ಲಾಂಟಾ ತಲುಪಿ, ಅಲ್ಲಿಂದ ಕಾರಿನಲ್ಲಿ ಬರ್ಮಿಂಗ್ ಹ್ಯಾಂಗೆ ಇನ್ನೊಂದು ಪ್ರವಾಸ ಪ್ರಾರಂಭವಾಯಿತು. ರಸ್ತೆಯಲ್ಲಿ ವಿಕಾಸನಿಗೆ, ಹಸಿವು ಕಾಣಿಸಿಕೊಂಡಿತು. ಏನಾದರೂ ತಿಂದು ಬರೋಣ. ಎಂದು ರಾಜಮಾರ್ಗದ ತಿರುವಿನಲ್ಲಿ ರಾತ್ರಿಯಿಡೀ ತೆರೆದಿರುವ ರೆಸ್ಟೋರೆಂಟ್‌ಗೆ ಕರೆದೊಯ್ದ. ಅವನು ಗ್ರಿಟ್, ಬರ್ಗರ್ ಎಂದು ಏನೇನೋ ತಿನ್ನುತ್ತಿದ್ದಾಗ ನಾನು ಕಾಫಿ ತರಿಸಿದೆ. ಬರೆ ಡಿಕಾಕ್ಶನ್ ಬಂದಿತು ! ಅದಕ್ಕೆ 'ಸ್ವೀಟನರ್' ಹಾಕಿ ಕುಡಿಯುವ ರೀತಿಯನ್ನು ವಿಕಾಸ ತೋರಿಸಿಕೊಟ್ಟನಾದರೂ, ಕಾಫಿಯ ಕಹಿ ಕಾಯಂ ನಾಲಿಗೆಯ ಮೇಲೆ ಉಳಿದೇ ಬಿಟ್ಟಿತು !

ವಿಕಾಸ, ತಿಂಡಿ ತಿನ್ನುತ್ತಿದ್ದಾಗ, ''ಮನೆಯಲ್ಲಿ ಅಕ್ಕಿ ಬೇಳೆ ತಂದದ್ದು ಇದೆಯೇ ?'' ಎಂದು ವಿಚಾರಿಸಿದೆ. ಆತನಿಗೆ ಒಮ್ಮೆಲೇ ನೆನಪಾಯಿತು. ''ಅಮ್ಮಾ ಇವೆರಡು ಬಿಟ್ಟು

ಉಳಿದೆಲ್ಲ ಸಾಮಾನು ಇದೆ !'' ಎಂದ. ''ಮತ್ತೆ ಹೋದೊಡನೆ ಏನು ಗತಿ !'' ಎಂದೆ. ಇಲ್ಲಿಯಂತೆ ಓಣಿಗೊಂದು ಗ್ರಾಸರಿ ಶಾಪ್, ಬೀದಿಗೊಂದು ತರಕಾರಿ ಅಂಗಡಿ, ಅಮೇರಿಕೆಯಲ್ಲಿ ಇರುವದಿಲ್ಲ. ಪ್ರತಿಯೊಂದಕ್ಕೆ ಸೂಪರ್ ಮಾರ್ಕೇಟ್‌ಗೇ ಹೋಗಬೇಕು ಎಂದು ಅರಿತಿದ್ದೆ. ''ಇಲ್ಲೆ ಏನಾದರೂ ಕಟ್ಟಿಸಿಕೊಂಡು ಹೋಗೋಣ'' ಎಂದ. ಮೊಟ್ಟೆ ಹ್ಯಾಂಬರ್ಗರ್, ಹಾಟ್‌ಡಾಗ್, ಚಿಕನ್, ಪೋರ್ಕ್ (ಸೂಕರ ಮಾಂಸ) ಸ್ಯಾಂಡ್‌ವಿಚ್‌ಗಳ ಮಾಂಸಾಹಾರದ ಪಕ್ವಾನ್ನಗಳು ಅಲ್ಲಿದ್ದವು. ಆದರೆ ನಾನು ತಿನ್ನುವಂತಹದು ಯಾವುದೂ ಇರಲಿಲ್ಲ. ''ಹೋಗಲಿ, ಸ್ಯಾಲೆಡ್ ಕಟ್ಟಿಸಿಕೊಂಡು ಬರ್‍ಲಾ?'' ಎಂದು ಕೇಳಿದ.

ಅಮೇರಿಕನ್ ಸ್ಯಾಲೆಡ್ ಎಂಬ ತಿಂಡಿ ಎಂತಹದು ? ಎಂದು ಕೊರಳು ಹಿಗ್ಗಿಸಿ ನೋಡುತ್ತೇನೆ ! ಕ್ಯಾಬೇಜು, ಲೆಟ್ಯೂಸ್, ಬ್ರೊಕ್ಕೊಲಿ (ಹಸಿರು ಕಾಲಿ ಫ್ಲಾವರ್) ಸೆಲೆರಿ, ಕಾಲಿಫ್ಲಾವರ್, ಈರುಳ್ಳಿ, ಟೊಮ್ಯಾಟೊ, ಪರಿಚಯ ಹತ್ತದ ಹತ್ತೆಂಟು ಸೊಪ್ಪು, ತರಕಾರಿಗಳನ್ನು ಸಣ್ಣದಾಗಿ ಹೆಚ್ಚಿ ಪ್ರತಿಯೊಂದೂ ಬೆಟ್ಟದಷ್ಟು ರಾಶಿಯನ್ನು ಗಾಜಿನ ಕಪಾಟಿನಲ್ಲಿ ಕಣ್ಣು ಕೋರೈಸುವಂತೆ ಇಟ್ಟಿದ್ದರು. ''ನೋಡು ಹತ್ತು ಡಾಲರಿಗೆ ಒಂದು ಪಾರ್ಸಲ್ ಡಬ್ಬಿ ಕಟ್ಟಿಕೊಡುತ್ತಾರೆ ! ಬೇಕಾದ್ದನ್ನು ಆರಿಸು. ಮನೆಗೆ ಒಯ್ದುಬೇಕಾದರೆ ಉಪ್ಪು ಹಾಕಿ ತಿಂದರೆ ಆಯಿತು !'' ಎಂದ. ನಾನು ಕಣ್‌ಕಣ್ ಬಿಟ್ಟರೆ, ''ನಾನು ಆಫೀಸಿನಲ್ಲಿ ಸ್ಯಾಂಡ್‌ವಿಚ್ ತಿಂತೀನಿ ಇದು ನಿನಗೆ ಊಟ !'' ಎಂದು ವಿವರಿಸಿದ.

''ಏನೋ ! ಚೌಂ ಚೌಂ ! ಕ್ರಂಪ್ ಕ್ರಂಪ್ ! ಎಂದು ಹಸಿ ತರಕಾರಿ ತೊಪ್ಪಲು ಮೇಯಲಿಕ್ಕೆ ನಾನೇನು ಹೇಸರಘಟ್ಟದ ಹಸು ಎಂದು ತಿಳಿದಿದ್ದೀಯಾ ? ಡಾಯಟ್ ಮಾಡಿ ಮೈ ಕರಗಿಸಲು, ಈ ಮಧ್ಯಾಹ್ನದೂಟ ಒಳ್ಳೆಯದು ನಿಜ ! ಆದರೆ ಅನ್ನವಿಲ್ಲದೇ ನಾನು ಬವಳಿ ಬಿದ್ದರೆ, ನೀನು ಆಫೀಸಿನಿಂದ ಹಿಂದಿರುಗುವ ತನಕ ಗತಿ ? ಎಂದು ಗುರುಗುಟ್ಟುತ್ತಲೇ ಹೆದರಿಸಿದೆ. ''ಹೋಗಲಿ ! ಸ್ಯಾಲೆಡೂ ಬೇಡಾ, ಏನೂ ಬೇಡ, ರವೆ ತಂದಿದ್ದು ಇದೆ ಎಂದೆಯಲ್ಲ? ಉಪ್ಪಿಟ್ಟು ಮಾಡುತ್ತೇನೆ'' ಎಂದೆ.

ಮನೆಗೆ ಬಂದೊಡನೆ ಸ್ನಾನ ಆಗಬೇಕಲ್ಲ? ಅಚ್ಚುಕಟ್ಟಾದ ಮನೆ, ಬಾತ್ ರೂಂ, ನೆಲಕ್ಕೆಲ್ಲ ದಪ್ಪ ಕಾರ್ಪೆಟ್ ದೋಣಿಯಂತಹ ದೊಡ್ಡ ಟಬ್, ಅದರೊಳಗೆ ನೀರು ಬೀಳುವಂತೆ ಜೋಡಿಸಿದ. ತಣ್ಣೀರು, ಬಿಸಿನೀರು ನಲ್ಲಿಗಳು, ನೀರು ಹೊರಗೆ ಬೀಳಿಸದೆ ಸ್ನಾನ ಮಾಡು !'' ಮೊದಲನೇ ವಾರ್ನಿಂಗ್ ಬಂದಿತು. ಶಾವರ್ ಇದೆ. ಬಕೆಟ್ ಇಲ್ಲ! ಟಬ್ ಇದೆ. ಟಂಬ್ಲರ್ ಇಲ್ಲ ! ''ಇಲ್ಲಿ ಹೇಗಪ್ಪ ! ಸ್ನಾನ ಮಾಡುವದು ? ತಲೆ ಒದ್ದೆ ಮಾಡಿಕೊಳ್ಳದೇ ?'' ದಿಙ್ಮೂಢಳಾಗಿ ಕೇಳಿದೆ. ''ಅದೆಲ್ಲ ನನಗೆ ಗೊತ್ತಿಲ್ಲ. ಇಲ್ಲಿದ್ದಷ್ಟು ದಿನ ಅಮೇರಿಕನ್‌ರ ತರಹ ಇರಲಿಕ್ಕೆ ಕಲಿ !'' ಎರಡನೆಯ ವಾರ್ನಿಂಗ್ ಬಂದಿತು. ತುಂಬ ತಲೆ ಓಡಿಸಿ ಮನೆಯಲ್ಲಿ ಇದ್ದುದರೊಳಗೆ ದೊಡ್ಡ ಪಾತ್ರೆ ತಂದೆ. ಇದ್ದುದರಲ್ಲೆ ಸಣ್ಣ ನೀರು ಕುಡಿಯುವ ಪ್ಲಾಸ್ಟಿಕ್ ಗ್ಲಾಸ್ ತಂದೆ. ಟಬ್‌ನಲ್ಲೇ ಕುಳಿತು ಪಾತ್ರೆಯಿಟ್ಟು ಹವಣಾದ ಬಿಸಿ ನೀರು ಬಿಟ್ಟುಕೊಂಡು ಗ್ಲಾಸಿನಿಂದ ಸುರಿದುಕೊಂಡು ಸ್ನಾನ ಮುಗಿಸಿದೆ. ''ಇಲ್ಲಿ ಯಾರೂ

ಬಕೆಟ್ ಬಳಸುವದಿಲ್ಲ!'' ಅಂದವನು, ಸಂಜೆ ತನ್ನ ಕಾರನ್ನು ಹೊರತೆಗೆದಾಗ, ಅದರ ಬೆನ್ನಿನೊಳಗಿಂದ ಸಣ್ಣ ಬಕೆಟ್ ಅಣಕಿಸಿತು. ಅಂತೂ ಸ್ನಾನದ ಸಮಸ್ಯೆ ಬಗೆಹರಿಯಿತು.

ಎರೆದುಕೊಳ್ಳುವ ದಿನ ಬಂದಿತು. ಹೊಸದಾಗಿ ಸ್ಪೆಶಲ್ ಶಾಂಪೂ ಮರೆಯದೇ ತಂದುಕೊಟ್ಟಿದ್ದ ಮಗ. ಆದರೆ ಅದರ ಮುಚ್ಚಳ ತೆಗೆದು ಜೀರ್ಕೊಳವೆಯಂತಹ ಸಾಧನವನ್ನು ಮಾತ್ರ ಹೇಗೆ ಬಳಸುವದು ? ಎಂದು ಹೇಳಿಕೊಟ್ಟಿರಲಿಲ್ಲ. ಅವನ ಪಾಡಿಗೆ ಅವನು ಆಫೀಸಿಗೆ ಹೋದ. ನಾನು ನನಗೆ ತಿಳಿದಂತೆ ಆದರ ಬಿರಡೆ ತೆಗೆಯಲು ಹೋಗಿ, ಮುಚ್ಚಳ, ಕೊಳವೆ ಎರಡೂ ಮುರಿದವು ! ಕೊನೆಗೆ ಬೇಕಾದಷ್ಟು ಶಾಂಪೂ ಪೇಸ್ಟ್‌ನ್ನು ಬೌಲಿಗೆ ಹಾಕಿಕೊಂಡು, ತಲೆ ತಿಕ್ಕಿಕೊಂಡು, ಚೆನ್ನಾಗಿಯೇ ಸ್ನಾನ ಮಾಡಿದೆ ಅನ್ನಿ ! ಗೋಣು ಮುರಿದುಕೊಂಡು, ಬೇಸಿನ್ ಮೂಲೆಯಲ್ಲಿ ನಿಂತ ಶಾಂಪೂ ಬಾಟ್ಲಿ ನೋಡಿ ವಿಕಾಸ ನಕ್ಕನಾದರೂ ಏನೂ ಹೇಳಲಿಲ್ಲ ಸಧ್ಯ !

ಕೆಲವು ದಿನ ಕಳೆದ ಮೇಲೆ ಮಗನಿಗೆ ಮಸಾಲೆ ದೋಸೆ ತಿನ್ನಿಸೋಣ ಎಂದು ಮನಸ್ಸಾಯಿತು. ಅಲ್ಲಿಯ ಚೀನೀಯರ ಅಂಗಡಿಯೊಳಗೆ ಅಕ್ಕಿ ಉದ್ದಿನ ಬೇಳೆ ಸಿಗುತ್ತಿತ್ತು. ಸಂತೋಷದಿಂದ ತಂದು ನೆನೆಹಾಕಿಯೂ ಆಯಿತು. ಅಂದದ ದೊಡ್ಡ ಅಮೇರಿಕನ್ ಮಿಕ್ಸಿ ಮನೆಯಲ್ಲಿತ್ತು. ಅಮೇರಿಕನ್‌ರ ತರಹಾನೇ ಬಲವಾಗಿದ್ದಿರಬಹುದು. ಭಾರತೀಯ ಮಿಕ್ಸಿಗಿಂತ ನಯವಾಗಿ ರುಬ್ಬಿಕೊಡಬಹುದು. ಅನ್ನುವ ಭರವಸೆಯಿಂದ ನೆನೆಹಾಕಿದ ಅಕ್ಕಿ–ಬೇಳೆ ಅದರಲ್ಲಿ ಹಾಕಿ, ನೀರನ್ನೂ ಸೇರಿಸಿ ಸ್ವಿಚ್ ಆನ್ ಮಾಡಿದೆ. ಗುಂಯ್ ! ಗುಂಯ್ ! ಸಪ್ಪಳ, ನಿಮಿಷದೊಳಗೆ ರೋಂಯ್ ! ರೊಂಯ್ ! ಗರ್ಜನೆಗೆ ತಿರುಗಿ ಗಕ್ಕನೆ ನಿಂತು ಬಿಟ್ಟಿತು ! ಓಡಿಬಂದೆ. ಮಿಕ್ಸರ್ ಕೆಳಗೆ ಕಿಡಿ ಮತ್ತು ಸುತ್ತ ಹೊಗೆ ! ಅಮೇರಿಕೆಯ ಮನೆಗಳೆಲ್ಲ ಕಟ್ಟಿಗೆಯವು. ಪ್ರತಿ ಮನೆಗೂ ಅಲಾರಂ ಜೋಡಿಸಿ, ಹೊಗೆ ಕಾಣಿಸಿಕೊಂಡೊಡನೆ ಕಿವಿಗಡಚಿಕ್ಕುವ ಅಲಾರಂ ಕೂಗಿಕೊಳ್ಳುತ್ತದೆ. ಜನ ಬಂದು ನೆರೆಯುತ್ತಿದ್ದಂತೆ ಅಗ್ನಿಶಾಮಕದಳ ಕ್ಷಣದಲ್ಲಿ ಹಾಜರಾಗಿ ಯೋಗಕ್ಷೇಮ ನೋಡಿ ಕೊಳ್ಳುತ್ತದೆ, ಎಂದೆಲ್ಲ ತಿಳಿದುಕೊಂಡಿದ್ದೆ. ಪುಣ್ಯಕ್ಕೆ ಅಲಾರಂ ಹೊಡೆದುಕೊಳ್ಳುವಷ್ಟು ಹೊಗೆ ತುಂಬಿಕೊಂಡಿರಲಿಲ್ಲ! ಕಿಟಕಿ ಬಾಗಿಲು, ಮನೆ ಬಾಗಿಲು ತೆರೆದೆ. ಫ್ಯಾನ್ ಹಾಕಿದೆ. ಪುನಃ ಮೊದಲಿನಂತಾದ ಮೇಲೆ, ಸರಾಗವಾಗಿ ಉಸಿರಾಡಿದೆ.

ಮಿಕ್ಸಿಗತಿ ಮುಗಿದಿತ್ತು, ಭಾರತೀಯ ದೋಸೆ ಹಿಟ್ಟು ತಿರುವುವ ತಾಕತ್ತು , ಅಮೇರಿಕನ್ ಮಿಕ್ಸಿಗೆ ಇಲ್ಲ ಎಂದು ಸಮಾಧಾನವಾದರೂ, ಅದನ್ನೆತ್ತಿ ವಿಕಾಸ್ ಕಸದ ತೊಟ್ಟಿಗೆ ಒಗೆದಾಗ ಅಯ್ಯೋ ! ಅನಿಸಿತು. ''ಇಲ್ಲಿ ರಿಪೇರಿ ವ್ಯವಸ್ಥೆಯಿಲ್ಲ ! ರಿಪೇರಿ ಖರ್ಚಿಗೆ ಹೊಸ ಮಿಕ್ಸಿ ಬರುತ್ತದೆ! ಎಂದು ಅಮೇರಿಕನ್ ಅರ್ಥಶಾಸ್ತ್ರದ ಪಾಠ ಕಲಿಸಿದ.

ಅಮೇರಿಕೆಯೊಳಗೆ ಎಲ್ಲವೂ ನಮ್ಮ ದೇಶದ ಪದ್ಧತಿಗಿಂತ ಉಲ್ಟಾಪಲ್ಟಾ ಎಂಬ ವಿಚಾರ ನಿಮ್ಮಲ್ಲಿ ಅನೇಕರಿಗೆ ತಿಳಿದಿರಲು ಸಾಕು. ಸಾಮಾನ್ಯವಾಗಿ ಎಡಕ್ಕೇ ಡ್ರಾಯವರ್ ಸೀಟು. ಎಲ್ಲರು ನಡೆದು ಹೋಗುವ ದಾರಿ ಬಲಕ್ಕೆ, ಎಡಕ್ಕಲ್ಲ. ಕಾರು ಬಲಕ್ಕೇ ಹೊರಳ ಬೇಕು. ಸ್ವಿಚ್ ಹಾಕುವದು ಕೆಳಗಿನಿಂದ ಮೇಲಕ್ಕೆ, ನಲ್ಲಿ ತಿರುಗಿಸೋದು, ಡೋರ್

ಲಾಕ್ ಮಾಡುವದು, ಎಲ್ಲವೂ ನಮ್ಮಲ್ಲಿಗಿಂತ ಉಲ್ಟಾ ! "ಊರು ಉರ್ಪಾಟಿ" ಧಾರವಾಡಿ ಭಾಷೆಯಲ್ಲಿ! ಇದೆಲ್ಲ ರೂಢಿಯಾಗಲು ಸಮಯ ಹತ್ತುತ್ತದೆ.

ಒಮ್ಮೆ, ಅಲ್ಲಿಯ ಜೀವನದ ಸ್ವಲ್ಪ ರೂಢಿ ಆದ ಮೇಲೆ ಸಾಯಂಕಾಲ ತಿರುಗಾಡಿ ಕೊಂಡು ಬರೋಣ ಎಂದು, ತಯಾರಾಗಿ ಕೀ ತೆಗೆದುಕೊಂಡು ಬಾಗಿಲು ಎಳೆದು ಕೊಂಡು ಹತ್ತಿರದ ಪಾರ್ಕಿನಲ್ಲಿ ಅಡ್ಡಾಡಿ ಬಂದೆ. ಬೆಂಗಳೂರಿಗೆ ತಿರುಗಿ ಹೋಗುವ ದಿನಗಳು ಸಮೀಪಿಸಿದ್ದರಿಂದ, ಏನೇನು ಸಾಮಾನು ಒಯ್ಯುವದೆಂದು ಧೇನಿಸುತ್ತ ಮನೆ ಬಾಗಿಲು ತೆಗೆಯಲು ಕೀ ಹಾಕಿದೆ. ಅದು ಹೊರಗೆ ಬರಲು ನಿರಾಕರಿಸಿತು. ಶಕ್ತಿಯನ್ನೆಲ್ಲಾ ಹಾಕಿ ತಿರುವಿದೆ. ಕೀಯ ತಲೆ ಕೈಯೊಳಗೆ ಬಂದಿತು. ಬಾಲ ಮಾತ್ರ ಬಾಗಿಲ ಒಳಗೇ ಉಳಿದುಬಿಟ್ಟಿತು! ಆಗ ನೆನಪಾಯಿತು. ಬೀಗದ ಕೈಯನ್ನು ಬೆಂಗಳೂರಿನ ತರಹ ತಿರುಗಿಸಿ ಬಿಟ್ಟಿದ್ದೆ. ಬರ್ಮಿಂಗ್ ಹ್ಯಾಂ ತರಹ ಅಲ್ಲ ! ನನಗೆ ಲಾಕ್‌ಔಟ್ ಆಗಿತ್ತು ! ಪುಣ್ಯಕ್ಕೆ ಆಫೀಸಿನಿಂದ ವಿಕಾಸ್, ಮನೆಗೆ ಬರುವ ಸಮಯವಾಗಿತ್ತು, ಬಂದವನೇ ಫೋನ್ ಮಾಡಿ ಬೀಗಕ್ಕೆ ಸಂಬಂಧಿತರನ್ನು ಕರೆಸಿ, ಬಾಗಿಲಿನ ಲಾಕ್ ಮತ್ತು ಬೀಗದ ಕೈಗಳನ್ನು ಸರಿಪಡಿಸಿದ.

ಅಮೇರಿಕೆಗೆ ಹೋಗುವ ಮೊದಲೆ ನನ್ನ ಎಡಗೈಗೆ ಸೋವು ಕಾಣಿಸಿಕೊಂಡಿತ್ತು. ಅಲ್ಲಿ ಹೋದ ಮೇಲೆ ವಿಕಾಸ್, ನರರೋಗ ತಜ್ಞರಿಂದ ಚಿಕಿತ್ಸೆ ಕೊಡಿಸಲಾರಂಭಿಸಿದ್ದ. ಪ್ರತಿ ರವಿವಾರ ತಪ್ಪದೇ ಬೆಂಗಳೂರಿನಲ್ಲಿರುವ ತನ್ನ ತಂದೆಗೆ ಫೋನ್ ಮಾಡಿ, ನನ್ನ ಆರೋಗ್ಯದ ವಿಚಾರ, ಇತರ ವಿಚಾರ ತಿಳಿಸುತ್ತಿದ್ದ. ಈ ವಾರವೂ ನಮ್ಮವರಿಗೆ ಫೋನ್ ಮಾಡಿ ಹೇಳುತ್ತಿದ್ದ ವಿಚಾರ ಕೇಳಿಸಿಕೊಂಡೆ.

"ಬಾಪ್ಪ, ಇಲ್ಲಿ ಬಂದಾಗಿನಿಂದ ಅಮ್ಮನ ಆರೋಗ್ಯ ತುಂಬ ಸುಧಾರಿಸಿದೆ. ಮುಖ್ಯವಾಗಿ ಕೈಗಳಿಗೆ ತುಂಬ ಬಲ ಬಂದಿದೆ. ಶಾಂಪೂ ಬಾಟ್ಲಿ ಕಿಚನ್ ಮಿಕ್ಸಿಗಳು. ಮುಖ, ಮೈ ಮುರಿದುಕೊಂಡು ನಿಂತವು ! ಈ ಸಾಯಂಕಾಲವಂತೂ ಮನೆಯಿಂದ ಬರುವಾಗ, ಅಮ್ಮನಿಂದಾಗಿ ಮನೆಯ ಮುಖ್ಯ ಬಾಗಿಲೇ ಕೀ ಮುರಿದುಕೊಂಡು ನಿಂತಿತ್ತು ! ಅಪ್ಪಾ ! ಜಾಗ್ರತೆ ! ಬೆಂಗಳೂರಿನ ಮನೆ – ಬಾಗಿಲು ಭದ್ರ ! ಅಮ್ಮನ ಕೈಗೆ ಭೀಮಬಲ ಬಂದಿದೆ !"

ಇವು ಮಗನ ಮಾತುಗಳು. ಆದರೆ ನನ್ನ ಎಡಗೈ, ಎಡವಟ್ಟಾಗಿಯೇ ಉಳಿದಿದೆ ಎನ್ನುವದು, ಅಮೇರಿಕೆಯಿಂದ ಹಿಂದಿರುಗಿದ ನಂತರ, ಇವರ ಲಕ್ಷ್ಯಕ್ಕೆ ಬಂದಿದೆ. ಹಗುರವಾಗಿ, ಉಪಾಯವಾಗಿ ತಿರುಗಿಸಿ ಮುಚ್ಚಳ, ಬಾಗಿಲು ತೆಗೆಯಬೇಕಾದ ಅಮೇರಿಕನ್ ಯುಕ್ತಿಗೆ ಕನ್ನಡ ಶಕ್ತಿ ಬಳಸಿ ಸಾಮಾನು ಮುರಿದ ವೈಶಿಷ್ಟ್ಯ ಮಾತ್ರ ನನ್ನದಾಗಿಯೇ ಉಳಿದುಕೊಂಡಿದೆ !

■ ■

# ೮. ಸಡಗರದ ಷಷ್ಟ್ಯಬ್ದಿ

ದೇಶದಾದ್ಯಂತ ಹೆಸರು ಪಡೆದ 'ಕಾಮತ್ ಹೊಟೇಲ್' ಸ್ಥಾಪಕರ ಷಷ್ಟ್ಯಬ್ದಿ ಪೂರ್ತಿ ಸಮಾರಂಭವನ್ನು ಉತ್ತರ ಕನ್ನಡ ಜಿಲ್ಲೆಯ ವೆಂಕಟಾಪುರದಲ್ಲಿ ಅದ್ದೂರಿಯಿಂದ ಆಚರಿಸಿದ್ದರೆಂದು ಹಿಂದೆ ಓದಿದ್ದೆ. ಈಗ ಅದೇ ನಾಮಧಾರಣೆಗೆ ಪಾತ್ರರಾಗಿದ್ದ ನಮ್ಮ ರಾಯರಿಗೆ ಅರವತ್ತು ತುಂಬಿದಾಗ ಎಲ್ಲರ ಕಣ್ಣು ಕೋರೈಸುವಂತೆ ಶಾಂತಿ ಸಮಾರಂಭ ವನ್ನು ಏರ್ಪಡಿಸಬೇಕೆಂದು ಲೆಕ್ಕ ಹಾಕಿಕೊಂಡಿದ್ದೆ. ಆದರೆ 'ಪ್ರಸಿದ್ಧಿಪರಾಙ್ಮುಖಿ' ಎಂದು ಬಿರುದನ್ನು ೨ ದಶಕಗಳ ಹಿಂದೆಯೇ ಹೊಂದಿ ಅಜ್ಞಾತರಾಗಿ ಬಾಳುತ್ತಿದ್ದು, ''ಕತ್ತೆ ಮುದಿಯಾದರೆ ಕುದುರೆಯಾಗದು !'' ಎಂದು ದೃಢವಾಗಿ ನಂಬಿದವರು, ಇದಕ್ಕೆ ಒಪ್ಪುವದಿಲ್ಲ, ಎಂಬ ದುಗುಡ ಬಾಧಿಸುತ್ತಲೇ ಇತ್ತು. ನಮ್ಮ ಏಕಮಾತ್ರ ಪುತ್ರನು ನನ್ನ ಪರವಾಗಿ ವಕಾಲತ್ತು ವಹಿಸಿದರೆ ಒಪ್ಪಿಸಬಹುದು, ಎಂಬ ದೂರದ ಆಸೆಯಿಂದ, ಅಮೇರಿಕೆ ನೋಡುವ ನೆವದಿಂದ ಅವನೊಡನೆ ವಿಚಾರವಿಮರ್ಶೆಗೆಂದು ಪ್ರಯಾಣ ಬೆಳೆಸಿದೆ. ಅವನೋ ! ಧನಸಹಾಯ ಬಿಟ್ಟು ಇಂಥ ಗುರುತರ ಜವಾಬ್ದಾರಿ ತನ್ನಿಂದಾ ಗದು ! ಎಂದು ಕಡ್ಡಿ ಮುರಿದಂತೆ ಸಾರಿಬಿಟ್ಟ. ಒಂದು ಸಹಸ್ರಡಾಲರ್‌ಗಳ ಚೆಕ್ ಕೈಗೆ ಹಾಕಿ, ''ಕಡಿಮೆಬಿದ್ದರೆ ತಿಳಿಸು, ಕ್ಯೂರಿಯರ್‌ದಿಂದ ಇನ್ನಷ್ಟು ಕಳಿಸುವೆ. ನಿನ್ನ ಯತ್ನಕ್ಕೆ ಸಂಪೂರ್ಣ ಯಶಸ್ಸು ಸಿಗಲಿ !'' ಎಂದು ಹಾರೈಸಿ ಬೀಳ್ಕೊಟ್ಟ. ಭಾರತಕ್ಕೆ ಹಿಂದಿರುಗಿ ಬರುವ ಹೊತ್ತಿಗೆ ಡಾಲರ್ ಬೆಲೆ ಗಗನಕ್ಕೆ ತಲುಪಿದ್ದರಿಂದ ನಾನು ತಂದ ಮೊತ್ತವನ್ನು ರೂಪಾಯಿಗಳಿಗೆ ಪರಿವರ್ತಿಸಿದರೆ ಬರುವ ಹಣವನ್ನೂ, ಷಷ್ಟ್ಯಬ್ದಿಯ ಸಡಗರವನ್ನೂ ಕಲ್ಪಿಸಿಕೊಂಡು ಹಿರಿಹಿರಿ ಹಿಗ್ಗಿದೆ.

ಇನ್ನು ಕಠಿಣ ಕೆಲಸ ಕಾದಿತ್ತು, ಈ ಕುರಿತು ರಾಯರ ಮನ ಒಲಿಸುವದು. ಷಷ್ಟ್ಯಬ್ದಿ ಮನುಷ್ಯನ ಜೀವನದಲ್ಲಿ ಎಂಥ ಮಹತ್ವಪೂರ್ಣ ಘಟ್ಟವೆಂದು ಮನವರಿಕೆ ಮಾಡಲು, ನಾನು ಯತ್ನಿಸಿದಂತೆ ರಾಯರೇ, ಅದರ ಕುರಿತು ತಮ್ಮ ವಿಚಾರಗಳನ್ನು ಹೇಳಲಾ ರಂಭಿಸಿದರು. 'ತಾನು ಅರವತ್ತರ ಗಡಿ ತಲುಪುತ್ತೇನೋ ಇಲ್ಲವೋ ಎಂದು ಅನುಮಾನ ವಿದ್ದವರು, ಅರ್ಧ ಶತಮಾನೋತ್ಸವನ್ನೂ ಏರ್ಪಡಿಸಿಕೊಳ್ಳುತ್ತಾರೆ ! ನಿವೃತ್ತಿಯಾಗಿ ಅಧಿಕಾರ ಬಿಟ್ಟು ಕೊಟ್ಟ ಮೇಲೆ ನರಿ, ನಾಯಿಗಳೂ ಗಣನೆಗೆ ತೆಗೆದುಕೊಳ್ಳುವದಿಲ್ಲ, ಎಂದು ಖಚಿತವಿದ್ದವರು, ಐವತ್ತೈದನೆಯ ವರ್ಷವನ್ನು ಆಚರಿಸುತ್ತಾರೆ ! ಮಾನಸಿಕ ವಾಗಿ, ಶಾರೀರಿಕವಾಗಿ ಹಣ್ಣಾದವರು, ಇನ್ನು ಮುಂದೆ ತಮ್ಮಿಂದ ಯಾವ ರೀತಿಯ ರಚನಾತ್ಮಕ ಕೆಲಸಗಳು ಅಸಾಧ್ಯವೆಂದು ಮನಗಂಡವರು ಷಷ್ಟ್ಯಬ್ದಿ ಶಾಂತಿಗೆ ಸ್ವಾಗತ

ನೀಡುವರು. ಸಮಾಜ, ರಾಜ್ಯ, ರಾಷ್ಟ್ರ ಸೇವೆಯಲ್ಲಿ ತಾನು ಸವೆದಿದ್ದೇನೆ ! ಎಂದು ನಂಬಿದವರ ವಯಸ್ಸನ್ನು ಅವರ ಭಜಕರು ನೆನಪಿಡುವಂತೆ ಸಕ್ರಿಯವಾಗಿ ಸ್ವತಃ ತೊಡಗಿ ಎಲ್ಲಕ್ಕೂ ವಿಜೃಂಭಣೆಯಿಂದ ಆಚರಿಸುವಂತೆ ಸೂಚಿಸಬೇಕಾಗುತ್ತದೆ. ಕೆಲವರು ಸಮಾರಂಭಕ್ಕೆ ಮಂತ್ರಿ ಮಹೋದಯರನ್ನು ಆಮಂತ್ರಿಸಿ, ಮನೆ – ಸ್ಯಾಟುಗಳ ಏರ್ಪಾಡು ಆಗುವಂತೆ ನೋಡಿಕೊಳ್ಳುತ್ತಾರೆ. ವಿವಿಧ ಪ್ರಶಸ್ತಿಗಳನ್ನು ದೋಚುವವರೂ ಇಲ್ಲದಿಲ್ಲ ! ವಿವಿಧ ಸಂಸ್ಥೆಗಳಿಂದ ಧನಸಹಾಯವನ್ನು ಪಡೆಯುವದಂತೂ ಸರ್ವೇ ಸಾಮಾನ್ಯ ! ಇಂದಿನ ದಿನಗಳಲ್ಲಿ ಯಾವ ಯಾವದೋ ಕಾರಣಕ್ಕಾಗಿ ಸಿರಿವಂತರಾದವರ ಸಂತಾನ, ತಾವು ನಿರಕ್ಷರಿಗಳಲ್ಲ ! ಎಂದು ಸಿದ್ಧ ಮಾಡಲೆಂದೇ ಸುಂದರವಾದ ಅಭಿನಂದನಾ ಸಂಪುಟ, ಸಂಭಾವನಾ ಗ್ರಂಥಗಳನ್ನು ಹಿರಿಯರ ಹೆಸರಿನಲ್ಲಿ ಹೊರ ತರುತ್ತಿದ್ದಾರೆ. ಧನ, ಗೌರವ, ಪ್ರಚಾರ, ಪ್ರಸಿದ್ಧಿ, ಪ್ರಶಸ್ತಿಗಳ ಆಸೆ ಇಲ್ಲದವನು ಇಂಥ ವೈಭವೀಕರಣ ಸಮಾರಂಭದಿಂದ ದೂರ ಇರುವದೇ ಸರಿ ಅಲ್ಲವೇ ?'' ಎಂದು ಖಂಡಿತ ಅಭಿಪ್ರಾಯವಿತ್ತರು.

ಈ ಸಂದರ್ಭದಲ್ಲಿಯಾದರೂ ವಾದದಲ್ಲಿ ಸೋಲಬಾರದು, ಎಂದು ದೃಢಸಂಕಲ್ಪ ಮಾಡಿದ್ದೆ, ''ನೋಡಿ ರಾಯರೇ ! ಮೂರು ದಶಕಗಳ ವಿವಾಹ ಜೀವನದಲ್ಲಿ ನಾನು ಎಂದೂ ಯಾವದೇ ಬೇಡಿಕೆ ಮುಂದಿಟ್ಟವಳಲ್ಲ. ನೀವು ತಂದುಕೊಟ್ಟ ರೇಶ್ಮೆಸೀರೆಗಳನ್ನೇ ಉಟ್ಟುನಲಿದೆ. ನೀವಾಗಿ ಮಾಡಿಸಿಕೊಟ್ಟ ಹವಳದ ಸರ, ಮುತ್ತಿನ ಬಳೆಗಳನ್ನೇ ಧರಿಸಿ ಆನಂದಿಸಿದೆ. ನೀವು ಕಾಶ್ಮೀರ, ರಾಜಸ್ಥಾನ, ಮಧ್ಯಪ್ರದೇಶ, ಪಶ್ಚಿಮಬಂಗಾಲಕ್ಕೆ ಬಾ ಎಂದಾಗ ಹಿಂದೆ – ಮುಂದೆ ನೋಡದೆ ಹಿಂಬಾಲಿಸಿದ್ದೇನೆ. ನಾಲ್ಕು ತಿಂಗಳು ಅಮೇರಿಕೆಯಲ್ಲಿ ಸಂಚರಿಸು, ಎಂದು ಸೂಚಿಸಿದಾಗ ಶಿರಸಾವಹಿಸಿದ್ದೇನೆ ! ನಿಮಗೆ ಡಾಕ್ಟರೇಟು ದಕ್ಕಿದಾಗ, ವಿವಾಹಯೋಗ ಕೂಡಿಬಂದಾಗ, ಪುತ್ರೋತ್ಸವವಾದಾಗ, ಸ್ವಗೃಹಯೋಗ ಒದಗಿದಾಗ ಒಂದು ಕಾಸಿನ ಕಾಣಿಕೆಯನ್ನೂ ಕೇಳಿದ್ದಿಲ್ಲ ! ಈಗ ಜೀವನದಲ್ಲಿ ಒಮ್ಮೆ ನನಗಾಗಿ, ಈ ಸಮಾರಂಭಕ್ಕೆ ವಿರೋಧಿಸಬೇಡಿ !'' ಎಂದು ಪ್ರಯತ್ನ ಪೂರ್ವಕ ಕಣ್ಣು ತೇವಮಾಡಿಕೊಂಡಾಗ, ಕೊನೆಯ ಮಾತನ್ನು ಮೆಲುಕು ಹಾಕಿದ ರಾಯರ ಕಲ್ಲು ಮನಸ್ಸು ಮೇಣದಂತೆ ಕರಗಿಹೋಯಿತು. ಕೊಂಚಹೊತ್ತು ಸುಮ್ಮನಿದ್ದು, ''ನೀನು ಹಾಕಿಕೊಂಡ ಕಾರ್ಯಕಲಾಪಗಳ ವಿವರಗಳನ್ನಾದರೂ ಕೊಡು ಮಹಾರಾಯ್ತಿ!'' ಎಂದುಸುರಿದರು. ತನಗೆ ಒಪ್ಪಿಗೆಯಾಗದ್ದನ್ನು ಕಡಾಖಂಡಿತ ವಿರೋಧಿಸುವ ಪರಿಪಾಠ ಬೆಳೆಸಿಕೊಂಡವರು ಹಾಗೆ ಹೇಳದಿದ್ದಾಗ, ಒಪ್ಪಿಕೊಳ್ಳುವ ಮೂಡ್‌ನಲ್ಲಿದ್ದಾರೆ, ಎಂದು ಭಾವಿಸುವದನ್ನು ನಾನು ರೂಢಿಸಿಕೊಂಡಿದ್ದೇನೆ !

'ನೀವು ಸದಾಕಾಲ, ಸೀದಾ–ಸಾದಾ ಆಚರಣೆಯಲ್ಲಿ ವಿಶ್ವಾಸವಿಟ್ಟಿದ್ದರಿಂದ ಯಾವ ಝುಂಝಾಟವನ್ನೂ ಇಟ್ಟುಕೊಂಡಿಲ್ಲ, ಕೇವಲ ಆತ್ಮೀಯರಿಗೆ, ಚಿರಪರಿಚಿತರಿಗೆ, ಕಿರು ಆಮಂತ್ರಣ ಪತ್ರಿಕೆಯನ್ನು ಸ್ಕ್ರೀನ್ ಪ್ರಿಂಟ್ ಮಾಡಿಸಿ, ಅದರಲ್ಲಿ ೬೦ ವರ್ಷಗಳ ಸಾಧನೆಯನ್ನು ಸಂಕ್ಷಿಪ್ತವಾಗಿ ನೋಂದಾಯಿಸುವದು........'' ಎಂದಾಗ ''ಏಕೆ ?

ಮನುಷ್ಯನಾಗಿ ಹುಟ್ಟಿದ್ದು ಮತ್ತು ಈಗ ಅರವತ್ತು ದಾಟಿದ್ದು, ಸಾಧನೆಗಳಲ್ಲಿ ಸೇರ್ಪಡೆಯಾಗುವದಿಲ್ಲವೇ ?'' ಎಂದುಕೊಂಡು ನುಡಿದರು. ''ತಾಳ್ಮೆಗೆಡಬೇಡಿ ! ಹೇಳುವದನ್ನಾದರೂ ಕೇಳಿ, ಆಮಂತ್ರಣ ಪತ್ರಿಕೆಯಲ್ಲಿ ದಪ್ಪ ಅಕ್ಷರಗಳಲ್ಲಿ ಉಡುಗೊರೆಗಳನ್ನು ಖಂಡಿತ ಸ್ವೀಕರಿಸುವದಿಲ್ಲ ! ಎಂದು ಸೂಚಿಸುವದು. ಶ್ರೀನಿವಾಸ ಕಲ್ಯಾಣ ಮಂಟಪ ಅಥವಾ ಬೇರೆ ಹಾಲ್‌ದಲ್ಲಿ ಕಾರ್ಯಕ್ರಮ ಇಟ್ಟುಕೊಂಡು ಹೆಸರುವಾಸಿ ಕೇಟರರ್ಸ್‌ಗೆ, ಒಂದು ದಿನದ ಕಾಫಿ–ತಿಂಡಿ ಊಟದ ವ್ಯವಸ್ಥೆಗೆ ಆರ್ಡರ್ ಕೊಡುವದು....... ಸಂಗೀತ ಕಚೇರಿ ಬೇಡವಾದರೆ ಬಿಡಿ. ಫೋಟೋ ಕಾರ್ಯಕ್ರಮ ಬೇಕು. ಶಾಂತಿ ಹವನದ ಏರ್ಪಾಡಂತೂ ಸರಿ........ ಮುಖ್ಯವಾಗಿ ನೀವು ಒಂದು ಒಳ್ಳೆಯ ಸೂಟು ಹೊಲಿಸಿಕೊಳ್ಳಬೇಕು ಅಮೇರಿಕೆಯಿಂದಲೇ ತರಬೇಕು, ಎಂದುಕೊಂಡಿದ್ದೆ. ಆದರೆ ನಿಮಗದು ಮನಸ್ಸಿಗೆ ಬರುವದಿಲ್ಲವೆಂದು ಆ ಸಾಹಸಕ್ಕೆ ಕೈಹಾಕಲಿಲ್ಲ ! ಈಗ ಈ ಮನವಿಯ ನಂತರ ನನ್ನ ಸೂಚನೆಗಳೆಲ್ಲ ಮಾನ್ಯವೆಂದು ನಂಬಿ ಕಾರ್ಯೋನ್ಮುಖಿಯಾಗಲೇ?'' ಎಂದು ಕಾತರತೆಯಿಂದ ಉತ್ತರಕ್ಕೆ ಕಾದೆ. ರಾಯರು ಗಂಭೀರವಾಗಿ, ಆಳವಾಗಿ ಯೋಚಿಸಿ ತಮ್ಮ ಅನಿಸಿಕೆಗಳನ್ನು ಒಂದೊಂದಾಗಿ ಹೊರ ಹಾಕಲಾರಂಭಿಸಿದರು.

''ಇದನ್ನು ಅದ್ದೂರಿಯಿಂದ ಆಚರಿಸುವ ವಿಚಾರವನ್ನೇ ಮಾಡಿಲ್ಲ ! ಆದ್ದರಿಂದ ಆಮಂತ್ರಣ ಪತ್ರಿಕೆಗಳು ಬೇಕಾಗಿಯೇ ಇಲ್ಲ, ಅಲ್ಲದೇ ಅವನ್ನು ಪಡೆದವರಿಗೆ ಸಂತೋಷವಾಗದಿದ್ದರೂ, ಕಳಿಸದೇ ಇದ್ದವರು ನೊಂದುಕೊಳ್ಳುವಂತೆ ಆಗುತ್ತದೆ. ಪತ್ರಿಕೆ ಅತ್ಯವಶ್ಯ! ಅನಿಸಿದರೆ ನಮ್ಮ ಇಲೆಕ್ಟ್ರಾನಿಕ್ ಬೆರಳಚ್ಚಿನ ಯಂತ್ರದಲ್ಲಿ ಅಂಚೆ ಕಾರ್ಡುಗಳ ಮೇಲೆ ಸ್ವಚಾಲಿತವಾಗಿ ಮುದ್ರಿಸಿದರೆ ಕೇವಲ ಹದಿನೈದು ಪೈಸೆಗೆ ಒಂದು ಆಮಂತ್ರಣ ಪತ್ರಿಕೆ ಸಿದ್ಧವಾಗುತ್ತದೆಂದು ನಿನಗೆ ತಿಳಿದಿರಲಿಕ್ಕಿಲ್ಲ ! ಇನ್ನು ನಮ್ಮ ವಿವಾಹಕ್ಕೇ ಕಲ್ಯಾಣ ಮಂಟಪದ ಸೌಕರ್ಯ ಬಳಸದೇ ಇದ್ದಾಗ, ಈಗ ಅದರ ಆಶ್ರಯ ಪಡೆಯುವ ಮಾತು ದೂರವೇ ಉಳಿಯಿತು........ ಈ ಇಳಿವಯಸ್ಸಿನಲ್ಲಿ ಎಂದಿಲ್ಲದ ಸೂಟು ಧರಿಸಿದರೆ...... ಮಿದುಳಿಲ್ಲದ ಬೊಕ್ಕತಲೆಯ ಉಚ್ಚ ಸರಕಾರಿ ಅಧಿಕಾರಿಯಂತೆ ಅನಿಸಬಹುದು ! ಇನ್ನು ಮುಂದೆ ಪಂಚೆ, ಜುಬ್ಬ ಧರಿಸಿದರೆ ಹೇಗಿರುತ್ತದೆ ! ಎಂದು ಯೋಚಿಸಲಾರಂಭಿಸಿದ್ದೇನೆ. ಹೀಗಿದ್ದಾಗ ಸೂಟ್ ಯಾರಿಗೆ ? ಯಾತಕ್ಕೆ ? ಷಷ್ಠ್ಯಬ್ಧಿ–ಪೂರ್ತಿ ವಿಚಾರ, ತೀರ ವೈಯಕ್ತಿಕವಾದದ್ದು. ನಮ್ಮಿಬ್ಬರಿಗೆ ಬಿಟ್ಟದ್ದು. ಅದನ್ನು ವಿಶಿಷ್ಟವಾಗಿ ಆಚರಿಸೋಣ ಆಯಿತೇ? ಉಳಿದೆಲ್ಲ ವಿಚಾರ ನನಗೆ ಬಿಡು'' ಎಂದರು. ಇಷ್ಟಾದರೂ ಒಪ್ಪಿಕೊಂಡರಲ್ಲ ! ಎಂದು ನೆಮ್ಮದಿ ತಂದುಕೊಳ್ಳಬೇಕಾಯಿತು.

ಮರುದಿನ, ಒಮ್ಮೆಯಾದರೂ ಬೆಳಿಗ್ಗೆ ನಾಲ್ಕು ಗಂಟೆಗೆ ಕಾಫಿಯ ಸರಬರಾಜಿಗೆ ಎದ್ದೇಳುವ ಗೋಜಿಲ್ಲವೆಂದು ಬೆಚ್ಚಗೆ ಹೊದ್ದು ಹಾಸಿಗೆಯಲ್ಲಿಯೇ ವಿಶ್ರಾಂತಿಯನ್ನು ಮುಂದರಿಸಿದೆ. ಮೂರು ಗಂಟೆಗೇ ಎದ್ದು ಬಿಡುವ ಅಭ್ಯಾಸ ಮಾಡಿಕೊಂಡ ರಾಯರು ಪ್ರಾತರ್ವಿಧಿ ಮುಗಿಸಿ ಬ್ರಶ್ ಮಾಡಿಬಂದು ಶತಪಥ ಹಾಕುತ್ತ, ಆಗಾಗ ಆಕಳಿಸುತ್ತ

ಗಡಿಯಾರ ನೋಡುತ್ತಿರುವದು ಮೋಜಾಗಿತ್ತು. ಹಾಲು ಬಂದಾಯಿತು. ವೃತ್ತಪತ್ರಿಕೆಯವನೂ ಬಂದು ಹೋದ. ಮೆಲ್ಲಗೆ ರಾಯರು ಪ್ಯಾಂಟು ಶರ್ಟು ತೊಟ್ಟು, ಶೂ ಧರಿಸಲಾರಂಭಿಸಿದರು. ಇಷ್ಟಾದರೂ ಕತ್ತಲೂ ಹರಿದು ಬೆಳಕು ಬಂದಿರಲಿಲ್ಲ. ಹೊರಳಾಟ ಬೇಸರಿಕ್ಕಿಟ್ಟುಕೊಂಡಾಗ ನಾನೂ ಎದ್ದು ಬೆಳಗಿನ ಅವಶ್ಯಕತೆಗಳನ್ನು ಮುಗಿಸಿ ಹೊರಗೆ ಹೋಗಲು ಸಿದ್ಧಳಾದೆ. ನಿತ್ಯದ ತಿರುಗಾಟ ಮುಗಿಸಿ ಬಂದ ಮೇಲೆ ಸುಪ್ರಸಿದ್ಧ ಹೊಟೇಲಿನಲ್ಲಿ ತಿಂಡಿ–ತೀರ್ಥವೆಂದು ನಿರ್ಧಾರವಾಗಿತ್ತು. ಹೋಟೆಲುಗಳೆಲ್ಲ ಇರುವದು ಸೂರ್ಯವಂಶಿಗಳಿಗಾಗಿ. ಈ ಚಂದ್ರವಂಶಿಗಳು ಅಲ್ಲಿ ತಲುಪಿದಾಗ ಮಾಣಿಗಳೆಲ್ಲ ಹಾಸಿಗೆ ಬಿಟ್ಟೇ ಎದ್ದಿರಲಿಲ್ಲ. ಇನ್ನೇನು ? ಕಂಡರಿಯದ ಮಲ್ಲೇಶ್ವರವನ್ನು ತಿರುಗಾಡಿ ತಿಳಿದುಕೊಳ್ಳೋಣ, ಎಂದು ಹೊರಟಾಗ ಎಲ್ಲೆಲ್ಲೂ ಒಂಟಿ ಶ್ವಾನ, ಶ್ವಾನ ದಂಪತಿ, ಶ್ವಾನ ಪರಿವಾರಗಳೆಲ್ಲ ಬೊಗಳಿ, ಬೊಗಳಿ ಈ ಅಪರಿಚಿತರನ್ನು ಬೆನ್ನಟ್ಟಿಕೊಂಡು ಬಂದವು. ಉಸ್ಸಪ್ಪ ! ಎಂದು ಹೊಟೆಲ್ ತೆರೆಯುವದನ್ನೇ ಕಾಯುತ್ತ ಸ್ವಲ್ಪ ದೂರ ಮುಚ್ಚಿದ್ದ ಅಂಗಡಿಯ ಮೆಟ್ಟಿಲುಗಳ ಮೇಲೆ ಕುಳಿತುಕೊಳ್ಳಬೇಕಾಯಿತು. ಕೊನೆಗೊಮ್ಮೆ ಹೊಟೇಲಿನ ಪೋರ ನೀರು, ಕಾಫಿಗಳ ಲೋಟಗಳನ್ನು ತಂದು ರಸ್ತೆಗೆ ಸುರಿದು ಬರಿದು ಮಾಡಿದಾಗ, ಗಿರಾಕಿಗಳಿಗೆ ಸ್ವಾಗತ ಸಿಕ್ಕಂತಾಯಿತು. ಸಾವಕಾಶ ಎದ್ದು ಒಳಗೆ ಹೋದೆವು.

ಮಾಣಿಗಳು ಸಮವಸ್ತ್ರ ಧರಿಸಿ ತಂತಮ್ಮ ಚೀಟಿ ಪುಸ್ತಕ, ಮೊಂಡಾದ ಪೆನ್ಸಿಲ್‌ಗಳನ್ನು ಚೂಪು ಮಾಡಿಕೊಂಡು, ನೀರಿನ ಲೋಟಗಳನ್ನು ಟೇಬಲ್ಲಿಗೆ ಸಾಗಿಸುವದರಲ್ಲಿ ಇನ್ನರ್ಧ ಗಂಟೆಯೇ ಜಾರಿಕೊಂಡಿರಬೇಕು. ಇಷ್ಟಾದರೂ ರಾಯರು ತಮ್ಮ ತಾಳ್ಮೆ ಕಳೆದುಕೊಳ್ಳದೇ, ''ಚೆನ್ನಾಗಿ ರೋಸ್ಟ್ ಮಾಡಿದ ಎಗಡು ಮಸಾಲೆ ಕೊಡಪ್ಪ..........' ಎಂದು ಮಾತು ಮುಗಿಸುವ ಮೊದಲೇ ಮಾಣಿ, ತಾವು ಈ ಊರಿಗೆ ಹೊಸಬ್ರೇ ಸಾರ್ ? ಹತ್ತು ಗಂಟೆಗೆ ಮೊದಲು ಇಲ್ಲಿ ಯಾವ ಹಾಟೇಲಿನಲ್ಲೂ ದೋಸೆ ಸಿಗಲ್ಲ! ಎಂದು ಕರಾರುವಾಕ್ಕಾಗಿ ಹೇಳಿಬಿಟ್ಟ. ''ಹೋಗಲಿ ಬಿಡು ! ವಡಾ ಸಾಂಬಾರ್ ಕೊಡು, ಎಂದಾಗ. ''ವಡೆ ಲೇಟಾಗುತ್ತೆ ಎಂದ. ''ಇಡ್ಲಿನಾದ್ರೂ ಕೊಡಯ್ಯ, ಎಂದು ವಿನಂತಿಸಿಕೊಂಡಾಗ ''ಸಾಂಬಾರಕ್ಕೆ ಕುದಿ ಬಂದಿಲ್ಲ. ಚಟ್ನಿ ಈಗ ತಾನೆ ಫ್ರೀಜರ್‌ದಿಂದ ತೆಗೆದು ಹಿಮದ ಗಡ್ಡೆಯಾಗಿದೆ. ಇಡ್ಲಿ ಬೇಯ್ತಾ ಇದೆ ! ಎಂದು ಗೊಣಗಿದ. ಏನಿದೆ ? ನೀನೇ ಕೊಡಯ್ಯ ಎಂದು ನಿರುಪಾಯವಾಗಿ ಹೇಳಿದಾಗ, ಕಾಫಿ ಕೊಟ್ಟು ಬಿಡ್ತೀನಿ ಸಾರ್ ! ಎಂದ. ಅರೆಬಿಸಿ ಕಾಫಿಗೆ ಹಣತೆತ್ತು ಮನೆಗೆ ಹಿಂದಿರುಗಿದಾಗ, ಮನೆಯಲ್ಲಿದ್ದ ಬ್ರೆಡ್, ಬೆಣ್ಣೆ ಜಾಮ್, ಕಾಫಿಗಳಿಗೆ ಹೆಚ್ಚಿನ ರುಚಿ ಬಂದಿತ್ತು.

ಇನ್ನಿತರರ ನಾಶ್ತಾ ಸಮಯ, ನಮ್ಮವರಿಗೆ ಲಂಚ್ ಸಮಯ. ಆದ್ದರಿಂದ ಮುಂಜಾವು ಹಿಂದೆ ಸರಿದು ಮಧ್ಯಾಹ್ನದ ಬರವಿಗೆ ಆಕಳಿಸುತ್ತ ತೂಕಡಿಸುತ್ತ ಕಾದರು. ಮುನ್ನಾದಿನ ತುಂಬ ಹುಡುಕಾಡಿ ಉತ್ತಮ ಚಾಯನೀಸ್ ಭೋಜನ ಸಿಗುವ ಹೆಸರುವಾಸಿ 'ಹೊಟೆಲ್ ಪತ್ತೆಹಚ್ಚಿದ್ದರು. ಹೀಗಾಗಿ ಶಿವಾಜಿನಗರಕ್ಕೆ ಹೊರಟೆವು. ಬೇಕಾದ

ಭೋಜನಾಲಯ ಸ್ವಲ್ಪ ಹುಡುಕಿದ ಮೇಲೆ ಕಂಡಿತಾದರೂ ಅದು ನಿರ್ಜನವಾಗಿ ಕಂಡಿತು. ಗಿರಾಕಿಗಳಿಲ್ಲದೇ ದಿವಾಳಿಯೆದ್ದಿರಬೇಕು ನಿಮ್ಮ ಪ್ರಸಿದ್ಧ ಜಾಗ ! ''ಎಂದು ಅಧೈರ್ಯ ತೋರಿದೆ. ಹೊರಗಿದ್ದ ದರವಾನನನ್ನು ವಿಚಾರಿಸಿದಾಗ, ಇನ್ನೂ ತರಕಾರಿ, ಮೀನು ಮಾಂಸ ಬಂದಿಲ್ಲ. ಅಡಿಗೆ ತಯಾರಾಗಲು ಇನ್ನೆರಡು ಗಂಟೆ ಬೇಕು ! ಮೊದಲೇ ಟೇಬಲ್ ರಿಝರ್ವ ಮಾಡಿಸಿದ್ದೀರಾ ಸಾರ್? ಮ್ಯಾನೇಜರಿಗೆ ವಿಚಾರ್ಸಿ ! ಸಾಯಂಕಾಲಕ್ಕೆ ಈಗಲೇ ಮಾಡಿಸಬಹುದು. ಸಂಗೀತ, ಡ್ಯಾನ್ಸ ಎಲ್ಲ ಚೆನ್ನಾಗಿರುತ್ತೆ'' ಎಂದಾಗ. ಅಯ್ಯೋ ಇದೆಂಥ ಹೋಟೆಲು ಆರಿಸಿದಿರಿ ? ಎಂದು ರಾಯರನ್ನು ದೂರುತ್ತ ಹೊರಗೆ ಬಂದಾಗ ತಲೆ ಎತ್ತಿನಿಂತ ಕೆ.ಎಫ್.ಸಿ. ಬೋರ್ಡು ಕಂಡಿತು. ಅಮೇರಿಕೆಯಲ್ಲಿ ಕೆ.ಎಫ್.ಸಿ. ಅಥವಾ ಕೆಂಟಕಿ ಫ್ರ್ಯಾಡ್ ಚಿಕನ್ ಪಾರ್ಲರ್‌ದಲ್ಲಿ ಬಫೆ ರುಚಿ ಕಂಡಿದ್ದೆನಾದ್ದರಿಂದ ರಾಯರಿಗೆ ಅದನ್ನು ವರ್ಣಿಸಿ ಸದ್ಯಕ್ಕೆ ಇದು ಅಡ್ಡಿಯಿಲ್ಲವೇನೋ ! ಎಂದೆ. ತಾವು ನಾಲ್ಕುವರ್ಷ ಅಮೇರಿಕೆಯಲ್ಲಿದ್ದರೂ ತಿಂದರಿಯದ ಊಟದ ಪರಿಚಯ ರಾಯರಿಗೆ ಮಾಡಿಸುವದು ನನ್ನ ಉದ್ದೇಶವಾಗಿತ್ತು.

ಸಮವಸ್ತ್ರಧಾರಿ ವೇಟರ್ ತಂದುಕೊಟ್ಟ ಮೆನುಕೋಷ್ಟಕವನ್ನು ನೋಡುತ್ತಿದ್ದಂತೆ,ತಲೆಸುತ್ತಲಾರಂಭಿಸಿತು. ಕೇಳರಿಯದ ಹೆಸರು. ಬೆಲೆಗಳು ೨೦೦ ರೂ.ಗೆ ಕಡಿಮೆ ಒಂದೂ ಡಿಶ್ ಇರಲಿಲ್ಲ ! ನನ್ನ ಗಲಿಬಿಲಿಯನ್ನು ಗಮನಿಸಿದ ಒಬ್ಬ ಕೆಲಸಗಾರ, ಹತ್ತಿರ ಬಂದು ಟೇಬಲ್ ಬಟ್ಟೆ ಸರಿಪಡಿಸುವಂತೆ ನಟಿಸಿ, ಅಮ್ಮಾವ್ರೇ ಇಲ್ಲಿ ಕೊಡೊ ಊಟ ಹಂದಿ, ಗೋಮಾಂಸ ಮತ್ತು ಕಪ್ಪೆಯ ಕಾಲು, ಇತ್ಯಾದಿ ಗೊತ್ತಿರಲಿ ! ಎಂದು ಪಿಸುಗುಟ್ಟಿ ಮರ್ಯಾದೆ ಉಳಿಸಿದ. ನಮ್ಮ ಅತಿಥಿಗಳು ಇನ್ನೂ ಬರಬೇಕಾಗಿದೆ ! ಎಂದು ನಯವಾಗಿ ಹೇಳಿ ಹೊರಗೆ ಬಂದು ಸರಿಯಾಗಿ ನೋಡಿದಾಗ ಕೆ.ಎಫ್.ಸಿ ಎಂಬುದು ಕೇರಳ ಫ್ರಾಯ್ಡ್ ಸೆಂಟರ್ ಎಂಬುದರ ಸಂಕ್ಷಿಪ್ತ ರೂಪವಾಗಿತ್ತೆಂದು ಮರುಗುವಂತಾಯ್ತು. ಒಂದೆರಡು ಪಾಶ್, ಎಂದು ತೋರುವ ಹೊಟೇಲ್‌ಗಳಲ್ಲಿ ವಿಚಾರಿಸಿ ಊಟ ಇನ್ನೂ ತಡವೆಂದು ಅರಿತು ಮನೆಗೇ ಬಂದು ಮೊಸರವಲಕ್ಕಿ ಉಪ್ಪಿನಕಾಯಿ ಬಾಳೇಹಣ್ಣು ಚಿಪ್ಸ್‌ಗಳ ಉಪಹಾರ ಮುಗಿಸಿ ವಿಶ್ರಾಂತಿ ಪಡೆದವು.

ಮಧ್ಯಾಹ್ನದ ಸುಖನಿದ್ರೆಯಲ್ಲಿ ಇರುವಾಗಲೇ ಕರೆಗಂಟೆ ಕಿರುಚಿಕೊಂಡಿತು. ಆಗಂತುಕನೊಬ್ಬ ಸುಂದರವಾದ ಗುಲಾಬಿ ಹೂಗಳ ಗುಚ್ಛವೊಂದನ್ನು ಹಿಡಿದು ನಿಂತಿದ್ದ. 'ಇಂದು ಡಾ. ಕಾಮತರ ಷಷ್ಟ್ಯಬ್ದಿಯಲ್ಲವೇ ? ಅವರಿಗೆ ನಮ್ಮೆಲ್ಲರ ಶುಭಾಯಗಳು ನಾವು ಸ್ಕ್ಯಾಲಾರ್ಕ್ ಕುರಿಯರ್‌ದವರು. ಅಮೇರಿಕೆಯಲ್ಲಿರುವ ಮಿಸ್ಟರ್ ವಿ. ಕೆ. ಕಾಮತ್, ನಿಮಗೆ ಇದನ್ನು ತಲುಪಿಸುವಂತೆ ನಿನ್ನೆಯೇ ತಿಳಿಸಿದ್ದರು. ಎಂದು ಹೇಳುವಷ್ಟರಲ್ಲಿ ರಾಯರು ಎದ್ದು ಬಂದು ಯಾರು, ಕ್ಯೂರಿಯರ್ ಸೇವಾ ಕಂಪನಿಯ ಹೆಸರೇನು ? ಇದಕ್ಕಾಗಿ ಕೊಡಬೇಕಾದ ಕಮಿಷನ್ ಏನು ಎಂದೆಲ್ಲ ವಿಚಾರಿಸಿ, ಏನೂ ಇಲ್ಲವೆಂದು ಅರಿತು ಕೇವಲ ಹಸ್ತಾಕ್ಷರವಿತ್ತು, ತಂದವನಿಗೆ ಬಕ್ಷೀಸ್ ಕೂಡ ಕೊಡದೇ ಸಾಗ ಹಾಕಿದರು. ''ನೋಡು. ನಿನ್ನ ಮಗನಿಗೆ ಬುದ್ಧಿ ಇದೆಯೇ ? ಹತ್ತು–ಹದಿನೈದು

ರೂಪಾಯಿಗಳಿಗೆ ಇಷ್ಟು ಹೂ ಬರುತ್ತಿರುವಾಗ ಮೂರುನೂರ ಎಂಬತ್ತು ರೂಪಾಯಿಗಳನ್ನು ಸುರಿದಿದ್ದಾನೆ! ಈ ರವಿವಾರ ಅವನು ಫೋನಿಸಿದಾಗ ಸ್ವಲ್ಪ ಬುದ್ಧಿವಾದ ಹೇಳು! ಎಂದು ಗರ್ಜಿಸಿದರು. ಎಚ್ಚರಿಕೆಯ ಬುದ್ಧಿವಾದ ಹೇಳಲು ಅದಕ್ಕೂ ಹೆಚ್ಚು ಖರ್ಚು ಬರುತ್ತದೆಂದು ರಾಯರ ಗಮನಕ್ಕೆ ತರುವ ಸಾಹಸಕ್ಕೆ ಹೋಗಲಿಲ್ಲ. ನಂತರ ಕ್ಯಾಮರಾ ಕೊರಳಿಗೆ ಹಾಕಿಕೊಂಡು, ಪುಷ್ಪ ಗುಚ್ಛವನ್ನು ಹಿಂದೆ ಮುಂದೆ ಹೊರಳಿಸಿ ನೋಡಿ ಅದರೊಂದಿಗೆ ಬಿಸಿಲಿದ್ದ ಬಾಲ್ಕನಿಗೆ ಹೊರಟಾಗ, ಇಷ್ಟಾದರೂ ಸಂತೋಷ ಪಟ್ಟರಲ್ಲ! ಎಂದು ನೆಮ್ಮದಿಯಾಯಿತು.

ಬ್ಯಾಂಕಿನ ಉಚ್ಚ ಅಧಿಕಾರಿಗಳನ್ನು ವರಿಸಿದ ರಾಯರ ಇಬ್ಬರು ಸೋದರಿಯರು ನಗರದಲ್ಲಿಯೇ ವಾಸವಾಗಿದ್ದರು. ಎರಡೂ ಸಂಸಾರಗಳು ದೊಡ್ಡ ಕೇಕ್ ಒಂದನ್ನು ಹೊತ್ತು ಆಗಮಿಸಿ ಜೀವನದಲ್ಲಿ ಸುಖ, ಶಾಂತಿ, ದೀರ್ಘಾಯುಗಳನ್ನು ಆಶಿಸಿದರು. ಜೊತೆಗೆ ತಂದ ತಿಂಡಿಗಳನ್ನು ಚಹಾದೊಂದಿಗೆ ಎಲ್ಲರಿಗೂ ಹಂಚಿದರು. ಅವರೆಲ್ಲ ಬೀಳ್ಕೊಂಡ ನಂತರ ರಾಯರು, ಕೇಕ್‌ನ್ನು ಪರೀಕ್ಷಿಸಿ ನೋಡಿ, 'ಸುಡುಗಾಡು ಕೃತ್ರಿಮ ಅಲಂಕಾರದ ಕೇಕಿಗೆ ಅದೆಷ್ಟು ಹಣ ಸುರಿದಿದ್ದಾರೋ! ಈ ವಯಸ್ಸಿನಲ್ಲಿ ತಿಂದರೆ ನಮ್ಮ ಇಬ್ಬರ ಆರೋಗ್ಯಕ್ಕೂ ಒಳ್ಳೆಯದಲ್ಲ, ಎನ್ನುತ್ತ ಅದರ ತಯಾರಕರು ಯಾರು? ಕೊಂಡದ್ದು ಎಲ್ಲಿಂದ? ಎಂಬ ಹುಡುಕಾಟಕ್ಕೆ ತೊಡಗಿದರು. ನಾವು ತಿನ್ನುವದು ಬೇಡವಾದರೆ ಬಿಡಿ ನೆರೆ ಹೊರೆಯಲ್ಲಿ ಮಕ್ಕಳಿಲ್ಲವೇ ? ಸಾಕಷ್ಟು ಪರಿಚಿತರಿಲ್ಲವೇ ? ಅವರಿಗೆ ಕೊಡೋಣವೆಂದಾಗ ''ಇಂದಿನ ಮಕ್ಕಳಿಗೆ ತಾಯ್ತಂದೆಗಳು ಕೊಡಿಸುವ ಕೇಕ್ ಚಾಕಲೇಟ್, ಆಯ್ಸಕ್ರೀಮ್ ಇನ್ನಿತರ ಬೇಕರಿ ತಿಂಡಿಗಳಿಂದ ಅವು ಕೊಬ್ಬತ್ತುನಡೆದಿವೆ! ಇನ್ನಷ್ಟು ಅವರಿಗೆ ಕೊಬ್ಬು ತಿನಿಸುವ ಮನಸ್ಸಿಲ್ಲ!' ಎನ್ನುತ್ತ ಆ ದೊಡ್ಡ ಕೇಕಿನೊಂದಿಗೆ ಹೊರಟೇ ಬಿಟ್ಟರು. ಅರ್ಧತಾಸಿನಲ್ಲಿ ತಿರುಗಿ ಬಂದು ಇನ್ನೊಂದು ಪೊಟ್ಟಣವನ್ನು ಕೈಗೆ ಕೊಡುತ್ತ, ಇದು ನೀಲಗಿರಿಯವರದು, ಎಂಬ ನನ್ನ ಊಹೆ ಸರಿಯಾಯಿತು ಕಣೇ! ಸಕ್ಕರೆ ತೊಂದರೆಯಿರುವವರಿಗೆ ಕೇಕು ಅಪಥ್ಯವಾಗುವದರಿಂದ ಇದರ ಬದಲಿಗೆ ರಸ್ಕ್, ಬಿಸ್ಕತ್ತು, ನಿಪ್ಪಟ್ಟುಗಳನ್ನು ಕೊಡಿ ಎಂದಾಗ ಕೂಡಲೇ ಒಪ್ಪಿಕೊಂಡು ಇವನ್ನೆಲ್ಲ ಕೊಟ್ಟು ಬಿಟ್ಟರು. ಇನ್ನೆರಡು ತಿಂಗಳು ಮಧ್ಯಾಹ್ನದ ತಿಂಡಿಗೆ ತೊಂದರೆಯಿಲ್ಲವಲ್ಲ! ಎಂದಾಗ ನಾನೂ ದೇಶಾವರಿ ನಗು ಸೂಚಿಸಿದರೂ ನೆಮ್ಮದಿಯಾಗಲಿಲ್ಲ.

ಮೊದಲಿನ ಯೋಜನೆಯಂತೆ, ಮುಂಜಾನೆಯಿಂದ ಸಂಜೆಯವರೆಗೆ ತಿಂಡಿ, ಊಟ, ಅಲೆದಾಟಗಳನ್ನು ನಡೆಸುವದು. ನಂತರ ಚೌಡಯ್ಯ ಕಲಾಕ್ಷೇತ್ರದಲ್ಲಿ ಏರ್ಪಟ್ಟ ಪ್ರಸಿದ್ಧ ನೃತ್ಯ ಕಾರ್ಯಕ್ರಮವನ್ನು ವೀಕ್ಷಿಸುವದು ಹಿಂದಿರುಗಿ ಬಂದು ಹಣ್ಣು ಹಂಪಲು ತಿಂದು, ಹಾಲು ಕುಡಿದು ಸಡಗರದ ಈ ದಿನಕ್ಕೆ ವಿದಾಯ ಹೇಳುವದೆಂದು ಕೊಂಡಿದ್ದೆ. ಆದರೆ ಯಾವ ಚಟುವಟಿಕೆಯೂ ಯೋಜನೆಯಂತೆ ನಡೆಯದ್ದರಿಂದ, ಅಂದು ಎಂದಿಗಿಂತಲೂ ಹೆಚ್ಚು ಹಸಿವು ಕಾಣಿಸಿಕೊಂಡಿತ್ತು! ಹೀಗಾಗಿ ಸಾಯಂಕಾಲ ಎಲ್ಲಿಯೂ ಹೋಗದೇ ಅನ್ನ, ಸಾರು, ಪಲ್ಯ, ಕೋಸಂಬರಿಗಳ ಊಟವನ್ನೇ ಮುಗಿಸಿ ದಣಿದ ದೇಹಕ್ಕೆ ವಿಶ್ರಾಂತಿ ಕೊಡುವದೇ ದೊಡ್ಡ ಸಾಧನೆ ಎನಿಸಿಬಿಟ್ಟಿತ್ತು.

ಷಷ್ಠ್ಯಬ್ದಿ ಆಚರಣೆಗೆಂದು ಮಗಕೊಟ್ಟ ಹಣ ಹಾಗೇ ಉಳಿದು ಬಿಟ್ಟಿತಲ್ಲ! ಎಂದು ಗೊಣಗಿದಾಗ, ನೀನೇನೂ ಯೋಚಿಸಬೇಕಾಗಿಲ್ಲ, ಅದರ ವಿತರಣೆ ಯೋಗ್ಯವಾಗಿ ಇಂದೇ ನೆರವೇರಿಸಿ ಬಿಡುತ್ತೇನೆ. ಎಂದು ಮರುದಿನ ಬೆಳಿಗ್ಗೆ ಹೊರಟೇ ಬಿಟ್ಟರು. ಠೇವಣಿ ರಶೀದಿಯನ್ನು ಕೈಯಲ್ಲಿಡುತ್ತ ನಮ್ಮ ಬ್ಯಾಂಕಿನವರು ಹೊಸ ಯೋಜನೆಯೊಂದನ್ನು ಜಾರಿಗೆ ತಂದಿದ್ದಾರೆ ! ಇವತ್ತು ನೂರು ರೂಪಾಯಿ ಇಟ್ಟರೆ, ಇಪ್ಪತ್ತೈದು ವರ್ಷಗಳ ನಂತರ, ಅವರು ಎರಡುವರೆ ಸಹಸ್ರ ರೂಪಾಯಿ ಹಿಂದಿರುಗಿಸುತ್ತಾರೆ. ಮಗನ ಈ ಕೊಡುಗೆ ಕಾಲುಶತಕದ ನಂತರ ಎಂಥ ಬೃಹತ್ ರೂಪ ತಾಳುತ್ತದೆ ಎಂದು ನೀನೇ ಲೆಕ್ಕಾಚಾರ ಮಾಡಿ ನೋಡು ! ಎಂದು ನನ್ನ ಗಣಿತ ಕಚ್ಚಾ ಇರುವದನ್ನು ಇನ್ನೊಮ್ಮೆ ನೆನಪಿಸುವ ಅಣಕುದನಿಯಲ್ಲಿ ನುಡಿದರು. ಇನ್ನೂ ಸೊಸೆಯನ್ನು ಮನೆ ತುಂಬಿಸಿಕೊಳ್ಳದೇ ಇರುವಾಗ ಮೊಮ್ಮಕ್ಕಳ ಹೆಸರಿನಲ್ಲಿ ಠೇವಣಿ ಇಡುವ ಇವರ ವಿಚಾರಕ್ಕೆ ಏನು ಹೇಳುವದೆಂದು ಮೂಕಳಾದೆ. ರಾಯರು ಇನ್ನಷ್ಟು ಉತ್ಸಾಹಗೊಂಡು, 'ಮಗ ಕಳಿಸಿದ ಗುಲಾಬಿ ಗುಚ್ಛದ ವರ್ಣಪಾರದರ್ಶಿಕೆ ತುಂಬ ಸುಂದರವಾಗಿ ಬಂದಿದೆ ! ಯಾವುದಾದರೂ ವಾರಪತ್ರಿಕೆಗೆ ಕಳಿಸಿದರೆ ಒಳ್ಳೆ ಗೌರವಧನ ಗಿಟ್ಟುತ್ತದೆ! ಎಂದಿನ ಲವಲವಿಕೆಯಿಂದ ನುಡಿದರು. ಇದು ಅವರಿಂದಾಗುವ ಕೆಲಸವಲ್ಲ ಎಂದು ಗೊತ್ತಿದ್ದರೂ, ರಾಯರ ಪಾಲಿಗೆ ಇದೇ ಅತ್ಯಂತ ಸಡಗರದ ಷಷ್ಠ್ಯಬ್ದಿಯಾಗಿದ್ದರೆ ನಾನೇಕೆ ಬೇಸರಿಸ ಬೇಕೆಂದು ನಕ್ಕು ಅವರ ಸಂತೋಷದಲ್ಲಿ ಪಾಲುಗೊಂಡೆ.



# ೯. ನಿವೃತ್ತಿ ಯಾರಿಗೆ ?

ಮೂವತ್ತು ವರ್ಷಗಳ ಸುದೀರ್ಘ ಸರಕಾರಿ ಸೇವೆ ಮುಗಿಯುತ್ತ ಬಂದಂತೆ, ಬರಲಿರುವ ನೆಮ್ಮದಿಯ ನಿವೃತ್ತಿ ಜೀವನಕ್ಕಾಗಿ ಸಂತೋಷ, ಕಾತರತೆ, ದುಗುಡುಗಳಿಂದ ಕಾಯಲಾರಂಭಿಸಿದೆ. ಅದರ ಪೂರ್ವಸಿದ್ಧತೆಗೆ ೩೦ ತಿಂಗಳೂ ಸಾಲದಾದವು ! ಹತ್ತಾರು ಸರ್ಟಿಫಿಕೇಟು ಹೊಂದಿಸಿದ್ದಾಯಿತು. ನಿವೃತ್ತಿ ವೇತನಕ್ಕೆ ದಂಪತಿಗಳ ಭಾವಚಿತ್ರದ ಆರು ಪ್ರತಿಗಳು ಬೇಕೇಬೇಕು ಎಂದರು ಆಫೀಸಿನವರು, ಅದರೆ ಸ್ವತಃ ಛಾಯಾ ಚಿತ್ರಕಾರರನ್ನು ಈ ಕೆಲಸಕ್ಕೆ ಒಪ್ಪಿಸಬೇಕಾದರೆ ಅದೆಷ್ಟು ಕಷ್ಟಕರ ಎಂದು ಯತ್ನಿಸಿ ದಾಗಲೇ ತಿಳಿಯಬೇಕು. ಕೋವಿಗಿಂತ ಹೆಚ್ಚಾಗಿ ಕ್ಯಾಮರಾಕ್ಕೆ ಹೆದರುವ ಸಿದ್ದಿ, ಹಾಲಕ್ಕಿ ಗೌಡಿತಿಯನ್ನಾದರೂ ಪುಸಲಾಯಿಸಿ ಒಪ್ಪಿಸಬಹುದು, ರಾಯರನ್ನಲ್ಲ ! "ಕಾಲುಶಕತದ ಹಿಂದೆಯೇ ನಿವೃತ್ತನಾದಾಗ ತಾನು ಈ ಯಾವ ಜಂಜಾಟಕ್ಕೂ ಸಿಲುಕಿರಲಿಲ್ಲ, ಈಗ ಈ ಪೀಡಾ ಬೆನ್ನು ಬಿಡುವಂತೆ ಕಾಣುವುದಿಲ್ಲ!'' ಎಂದು ಒಂದೇ ಸವನೆ ಗುರುಗುಟ್ಟಿದರು. ಫೋಟೋಸ್ಟೂಡಿಯೋ ಹೊಕ್ಕು ಕ್ಲಿಕ್ಕಿಸಿಕೊಳ್ಳುವುದು ತನ್ನ ಜನ್ಮಕ್ಕೇ ಅವಮಾನ ವೆಂದರು. ಕೊನೆಗೆ ಕ್ರಿಕೆಟ್ ಬಿಟ್ಟರೆ ಇನ್ನೊಂದು ಗೊತ್ತಿಲ್ಲದ ಸೋದರಳಿಯನ ಕೈಯಲ್ಲಿ ಕ್ಯಾಮರಾ ಕೊಟ್ಟು ಸ್ವತಃ ಕೋನ ಹೊಂದಿಸಿ ನಮ್ಮಿಬ್ಬರನ್ನು ಕ್ಲಿಕ್ಕಿಸಿಕೊಂಡಾಗ, ಸರ್ವಿಸ್ ದಂಡಯಾತ್ರೆ ಗೆದ್ದುದಕ್ಕಿಂತ ಹೆಚ್ಚಿನ ಆನಂದ ನನ್ನದಾಗಿತ್ತು!

ಎಂದೂ ಕಚೇರಿಯಲ್ಲಿ ಕಾಲಿಡದಿದ್ದ ಸಹೋದ್ಯೋಗಿಗಳಿಗೆಲ್ಲ ರಾಯರ ಬಗ್ಗೆ ಕುತೂಹಲ. "ಮ್ಯಾಡಂ ಯಜಮಾನರಿಗೆ ತುಂಬ ವಯಸ್ಸಾಗಿರಬೇಕು ?'' ಹೌದು ಕಣೆ ! "ಯಾರ ಸಹಾಯವಿಲ್ಲದೆ ನಡೆಯೋದು ಕೂಡ ಆಗಲ್ವಂತೆ !'' ಒಬ್ಬಳೆಂದರೆ ತನಗಿಂತ ೧೦ ವರ್ಷ ಚಿಕ್ಕೋರನ್ನ ಅಮ್ಮಾವ್ರು ಟ್ರ್ಯಾಪ್ ಮಾಡಿ ಮದ್ವೆ ಮಾಡ್ಕೊಂಡಿ ರಬೇಕು ! ಅದಕ್ಕೇ ಜೊತೆಗೆ ಓಡಾಡೋದಿಲ್ಲ !'' ಇನ್ನೊಬ್ಬಾತ ತನ್ನ ತೀರ್ಪು ನೀಡಿದ. "ಹೌದೌದು ! ಅದಕ್ಕೆ ಆಫೀಸಿನಲ್ಲಿ ಕಾಣಿಸಿಕೊಳ್ಳಿಕ್ಕೆ ಹಿಂದೇಟು ಹಾಕ್ತಾರೆ'' ಎಲ್ಲರೂ ಸಾಮೂಹಿಕ ನಿರ್ಣಯ ಕೈಕೊಂಡರು. ನಿವೃತ್ತಿ ಪೇಪರುಗಳಲ್ಲಿ ಭಾವಚಿತ್ರದ ಪ್ರತಿನೋಡಿ, ಏನೋ ಗುಜುಗುಜು ಮಾತಾನಾಡಿಕೊಂಡರು.

ಕೊನೆಗೊಂದು ದಿನ ಕಾರ್ಯಕ್ರಮಗಳ ಕಾರ್ಯದರ್ಶಿ, ಕಲಾವಿದರ ಪ್ರತಿನಿಧಿ, ಕಾರ್ಮಿಕವರ್ಗದ, ರಕ್ಷಕ ಸಿಬ್ಬಂದಿಯ ಪ್ರತಿನಿಧಿಗಳೆಲ್ಲ ಬಂದು, ತಮ್ಮಲ್ಲಿ ಒಂದು ಪ್ರಾರ್ಥನೆಯಿದೆ'. ಎಂದು ಹಿಂಜರಿಯುತ್ತ ಹೇಳಿಕೊಂಡರು. ಏನು ? ಎಂದು ಕೇಳಿ ದಾಗ, ಅನುಮಾನಿಸುತ್ತ, "ಬೀಳ್ಕೊಡುವ ಸಮಾರಂಭಕ್ಕೆ ಸಾಹೇಬರನ್ನು ಅಮಂತ್ರಿಸ

ಬೇಕೆಂದಿದ್ದೇವೆ ಬೇಡ ಎನ್ನಬೇಡಿ'' ಎಂದು ಹೇಳಿದರು. ''ಸಾಹೇಬರನ್ನು (ಡಾಯರೆಕ್ಟರ್ ಜನರಲ್) ದಿಲ್ಲಿಯಿಂದ ಕರೆಯಿಸುವ ದಿವ್ಯ ವಿಚಾರ ಯಾರದು ?'' ಎಂದು ವಿವರಣೆ ಕೇಳಿದಾಗ, ''ಅವರಲ್ಲ ಪ್ರೊಫೆಸರರು, ಮ್ಯಾಡಂ'' ಇನ್ನೊಬ್ಬ ತಿದ್ದಿಕೊಂಡ. ''ನನ್ನ ಪ್ರೊಫೆಸರಿಗೆ ವಯಸ್ಸಾಗಿದೆ. ಅಲ್ಲದೇ ಅವರು ಧಾರವಾಡದಿಂದ, ಈ ಚಿಕ್ಕ ಕಾರ್ಯಕ್ರಮಕ್ಕೆ ಬರಲಾರರು !'' ಎಂದೆ. ಬಂದವರು ಮುಖ ಮುಖ ನೋಡಿ, 'ಮೇಡಂ ಸಾರ್‌ರನ್ನು ಕರೆಯಬೇಕೆಂದಿದ್ದೇವೆ' ತಾಂತ್ರಿಕ ಪ್ರತಿನಿಧಿ ನನ್ನ ಅಜ್ಞಾನಕ್ಕೆ ನಕ್ಕಂತೆ ಮಾಡಿ ಉತ್ತರಿಸಿದ. ಆದರೂ ಕಣ್ ಕಣ್ ಬಿಟ್ಟಾಗ ಅನುಭವಿ, ಹಿರಿಯ ಕಲಾವಿದರು, 'ತಮ್ಮ ಯಜಮಾನರನ್ನೂ ಬೀಳ್ಕೊಡುವ ಸಮಾರಂಭಕ್ಕೆ ಕರೀಬೇಕೆಂದಿದ್ದಾರೆ !'' ಎಂದು ಗೂಢವಾಗುತ್ತ ಬಂದಿದ್ದ ಸಮಸ್ಯೆಯ ಮೇಲೆ ಬೆಳಕು ಚೆಲ್ಲಿದರು.

ವೈಜ್ಞಾನಿಕ ಛಾಯಾಚಿತ್ರಕಾರರಾಗಿ ಈ ಎರಡೂವರೆ ದಶಕ ಕೆಲಸ ಮಾಡುತ್ತ ಬಂದಿರುವ ರಾಯರು. ಇಂಡಿಯನ್ ಇನ್‌ಸ್ಟಿಟ್ಯೂಟಿನ ದೊಡ್ಡ ವಿದ್ಯಾರ್ಥಿ ಬಳಗಕ್ಕೆ ಪ್ರೊಫೆಸರ್, ಸರ್. ಕಿರಿಯ ಲೇಖಕರು ಕೆಲವರಿಗೆ ''ಮೇಷ್ಟ್ರು'' ಆಗಿದ್ದರೂ, ನನ್ನ ಆಕಾಶವಾಣಿ ಆಫೀಸಿನಲ್ಲಿ ಚಿರಅಪರಿಚಿತರಾಗಿದ್ದರಿಂದ, ''ಈ ಆಫೀಸಿನವರಿಗೆ ಅವರು ಎಂದಿನಿಂದ ಸಾಹೇಬರು. ಪ್ರೊಫೆಸರ್ ಮತ್ತು ಸರ್ ಆದರು ? ಅವರಿಗೆ ತಾವು ಅಮೆರಿಕನ್ ಡಾಕ್ಟರೇಟ್ ಪಡೆದದ್ದು ಕೂಡ ಮರೆತು ಯಾವ ಕಾಲವಾಯ್ತೋ ! ಅವರು ಬರುವದಿಲ್ಲ, ಅವರ ಪಾಡಿಗೆ ಅವರನ್ನು ಬಿಟ್ಟುಬಿಡಿ !'' ಎಂದಾಗ ಎಲ್ಲರ ಮುಖದಲ್ಲೂ ಸೋಲಿನ ಛಾಯೆ ಆವರಿಸಿತ್ತು.

ಬೀಳ್ಕೊಡುವ ಸಮಾರಂಭಗಳು ಪೈಪೋಟಿಯಿಂದ ನಡೆದವು. ದೇಶದ ಉದ್ದಗಲಕ್ಕೂ ವರ್ಗಾವಣೆಯ ಸುಖಾನುಭವ ಹೊಂದಿದವಳಿಗೆ ಸರ್ವಿಸಿನ ಕೊನೆಯ ಐದು ವರ್ಷಗಳನ್ನು ಬೆಂಗಳೂರಿನಲ್ಲಿ ಕಳೆಯುವ ಅವಕಾಶವನ್ನು ಘನಸರಕಾರ ಒದಗಿಸಿ ಪುಣ್ಯಕಟ್ಟಿಕೊಂಡಿತ್ತು, ಆದ್ದರಿಂದ ವಿವಿಧ ಸಿಬ್ಬಂದಿಯವರೆಲ್ಲ ಮುಖತಃ ಪರಿಚಿತರಾಗಿ ಅಭಿಮಾನ ತಾಳಿದ್ದರು. ಪ್ರತ್ಯೇಕವಾಗಿ ಊಟ, ಉಡುಗೂರೆಗಳ ಉಪಚಾರ ಸಲ್ಲಿಸಿದರು.

ನಿವೃತ್ತಿಯ ದಿನ ಫಲ–ಪುಷ್ಪ, ಶಾಲು, ಮಾಲಾರ್ಪಣೆ ನಂತರ ಹೆಗ್ಗಳಿಕೆಯ ಬೀಳ್ಕೊಡುವಿಕೆ ಪ್ರಾರಂಭವಾಯ್ತು. ಹಿರಿಯ ಅಭಿಮಾನಿ ಓಬಳಪ್ಪನವರು ಕವನಕಟ್ಟಿ ಹಾಡಿದರು. ಅನಂತರ ಒಬ್ಬೊಬ್ಬರಾಗಿ ಅಮ್ಮಾವ್ರ ಗುಣಗಾನ ಪ್ರಾರಂಭಿಸಿದರು. 'ಮೇಡಂ ಯಾವ ವಿಧದಲ್ಲೂ ಅಧಿಕಾರದ ದುರುಪಯೋಗ ಮಾಡಿಕೊಳ್ಳಲಿಲ್ಲ! ಕಾರಣ ಅವರ ಯಜಮಾನ್ರು ದೊಡ್ಡ ಆದರ್ಶವಾದಿಗಳು' ಅವರನ್ನು ಎಂದೂ ಕಂಡಿರದ ಕಿರಿಯ ಇಂಜಿನಿಯರ್ ನನ್ನ ಗುಟ್ಟುರಟ್ಟು ಮಾಡಿದ. ಪ್ರಚಂಡ ಕರತಾಡನವಾಯಿತು. 'ಮ್ಯಾಡಂಗೆ ಸುಭದ್ರ ಆರ್ಥಿಕ ನೆಲೆ ಒದಗಿದೆ. ಈ ಮಹಾನಗರದ ಹೃದಯಸ್ಥಾನವಾದ ಮಲ್ಲೇಶ್ವರಂದಲ್ಲಿ ಒಂದು ಫ್ಲ್ಯಾಟ್ ಸಿಗುವಂತೆ ನೋಡಿಕೊಂಡವರೇ ಅವರ ಯಜಮಾನರು !'' ಲೆಕ್ಕ ಪತ್ರ ತಪಾಸಿಗರು ನುಡಿದರು. 'ಮ್ಯಾಡಂ ಅವರ ಏಕಮಾತ್ರ

ಪುತ್ರ ಕಂಪ್ಯೂಟರ್ ಇಂಜಿನಿಯರ್, ಕನ್ನಡ ಮಾಧ್ಯಮದಲ್ಲಿ ಓದಿಯೇ ಅಮೇರಿಕೆಗೆ ಹೋಗಿ ಸ್ನಾತಕೋತ್ತರ ಡಿಗ್ರಿ ಮುಗಿಸಿ, ಅಮೇರಿಕನ್ನರೊಂದಿಗೆ ಸ್ಪರ್ಧಿಸಿ, ಸಂಶೋಧನಾಧಿಕಾರಿಯ ಹುತ ತಲುಪಿದ್ದಾನೆ. ಆತನಿಗೆ ಸ್ಫೂರ್ತಿ ಮನೆಯಲ್ಲಿರುವ ಪ್ರೊಫೆಸರ್ ಎಂದು ಬೇರೆ ಹೇಳಬೇಕೆ ?' ನನ್ನ ಕುಟುಂಬದ ರಹಸ್ಯಗಳೆಲ್ಲ ಸಂಶೋಧಿಸಿ ಬಲ್ಲ ಧಾಟಿಯಲ್ಲಿ ಒಬ್ಬ ಅಧಿಕಾರಿ ನುಡಿದ. ಭಲೆ ! ಎಂದು ಬಾರದ, ನೋಡದ ವ್ಯಕ್ತಿಯನ್ನು ಮೆಚ್ಚಿ ಕರತಾಡನ ಮಾಡಿದರು !

ಅರೆ ! ನನ್ನ ಪ್ರಶಂಸೆಯ ಬದಲು ರಾಯರದು ನಡೆದಿದೆಯಲ್ಲ ? ನನ್ನ ಅವಹೇಳನದ ಪರೋಕ್ಷ ಪದ್ಧತಿಯೇ ಇದು ? ಎಂದು ಬೆಪ್ಪಾದೆ. ಆದರೂ ಕಾದು ನೋಡೋಣವೆಂದು ಕುಳಿತೆ.

''ಸರ್ವರೀತಿಯಲ್ಲೂ ಸಮರ್ಥ ಆಡಳಿತ ನೀಡಿದ್ದಾರೆ. ಅಲ್ಲದೇ ಡಾಕ್ಟರೇಟು ಪದವಿ. ಇಂಗ್ಲೀಷ್, ಕನ್ನಡ ಭಾಷೆಗಳಲ್ಲಿ ಪುಸ್ತಕಗಳ ಪ್ರಕಟಣೆ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ರಾಜ್ಯೋತ್ಸವ ಪ್ರಶಸ್ತಿ; ಯಜಮಾನರಿಗೆ ಇವರು ಅನುರೂಪ ಪತ್ನಿ. ಅವರ ಯಜಮಾನರು ದೊಡ್ಡ ವಿಜ್ಞಾನಿ ಸಾಹಿತಿ, ಉತ್ತಮ ಛಾಯಾಚಿತ್ರಕಾರರು !'' ರಾಯರ ಒಂದೂ ಕೃತಿಯನ್ನು ಓದದ ಒಬ್ಬ ಸಹೋದ್ಯೋಗಿ, ದೀರ್ಘ ಪರಿಚಯ ನೀಡಿದರು.

ಕಚೇರಿಯ ಕಿಲಾಡಿಯೆಂದು ಹೆಸರು ಹೊತ್ತ ಕಿಟ್ಟಮ್ಮ , ತನಗೂ 2 ನಿಮಿಷ ಮಾತನಾಡಲು ಅವಕಾಶಬೇಕೆಂದು ಹಟಹಿಡಿದು, 'ನೀವೆಲ್ಲ ಕುಂಟು ನೆಪಮಾಡಿ ಒಮ್ಮಿಲ್ಲೊಮ್ಮೆ ಎಸ್.ಡಿ. ಅವರ ಫ್ಲ್ಯಾಟಿಗೆ ನುಗ್ಗಬೇಕು. ಅದು ಬರೇ ಪುಸ್ತಕಗಳಿಂದ ತುಂಬಿ ಹೋಗಿದೆ ! ಬಣ್ಣ–ಕುಂಚ, ಎನ್‌ಲಾರ್ಜರ್, ಮೂರು ಟ್ಯಾಪ್ ರೈಟರ್‌ಗಳು, ನೂರಾರು ಫೈಲುಗಳ ಕಮ್ಮಟವೇ ಇದೆ. ಅವನ್ನು ಉಪಯೋಗಿಸುವವರು ಮಾತ್ರ ಎಲ್ಲಿದ್ದಾರೆಂದು ಹುಡುಕಿ ನಿರಾಶರಾಗಬೇಡಿ ! ಅವರು ಅಡಿಗೆ ಮನೆಯಲ್ಲಿರುತ್ತಾರೆ ! ನಿಮ್ಮೊಂದಿಗೆ ಹೊರಗೆ ಮಾತನಾಡುತ್ತ ಕುಳಿತ ಮ್ಯಾಡಂ ಅವರು 'ಊಟ ಮಾಡಿ ಹೋಗಿ ಎಂದರೆ ಬೇಡ ಅನ್ನಬೇಡಿರಿ. ನಳಮಹಾರಾಜನ ಆತಿಥ್ಯ ನಿಮಗೆ ಕಾದಿರುತ್ತದೆ !' ಎಂದು ನನ್ನ ಮಾನ ಮುಕ್ಕು ಮಾಡಿಯೇ ಬಿಟ್ಟಳು, ಸಭಿಕರೆಲ್ಲ ಗೊಳ್ಳೆಂದು ನಕ್ಕರು.

ಒಂದೆರಡು ಮಾತು ಹೇಳಲೇಬೇಕೆಂದು ಸಂಘಟಕರು ಒತ್ತಾಯಿಸಿದ್ದರಿಂದ ಎದ್ದು ನಿಂತೆ. ''ಇದು ನನಗೆ ಬೀಳ್ಕೊಡುವ ಸಮಾರಂಭ ಎಂದು ತಿಳಿದಿದ್ದೆ. ಆದರೆ ರಾಯರ ಪ್ರಶಂಸಾಶಿಬಿರ ಎಂದು ಈಗ ತಿಳಿಯಿತು !'' ಎಂದಾಗ ಚಪ್ಪಾಳೆ ಬಿದ್ದವು. ಮುಂದೆ ಏನು ಮಾಡಬೇಕೆಂದಿದ್ದೀರಿ ? ಮೇಡಂ ? ಎಂದಾಗ ''ಮುಂದಿನ ಜನ್ಮವೆಂಬುದು ಇದ್ದರೆ ಸಂಗೀತಗಾತಿಯಾಗಬೇಕೆಂದಿರುವೆ.......

''ತಾರುಣ್ಯದಲ್ಲಿ ಸಂಗೀತದ ಹುಚ್ಚು ಇತ್ತು ಎಂದು ಒಂದು ಹಾರ್ಮೋನಿಯಂ ಕೊಂಡಿದ್ದೆ. ಆದರೆ ನನಗಿಂತ ಜಿರಳೆಗಳು ಅದನ್ನು ಹೆಚ್ಚಾಗಿ ಬಳಸಿದವು. ನಂತರ ಇಲಿಗಳು ಅವುಗಳೊಂದಿಗೆ ಪೈಪೋಟಿಗೆ ಇಳಿದವು. ಹೋಗಲಿ. ಎಂದು ಅದನ್ನು ಅಟ್ಟಕ್ಕೇರಿಸಿದರೆ ಹೆಗ್ಗಣಗಳು ಕಾಯಂ ಪ್ರಭುತ್ವ ಸ್ಥಾಪಿಸಿದವು. ನಂತರ ಕೈಕೆಲಸ

ಮಾಡಿದರೆ ಬುದ್ಧಿ ಬಲಿಯುತ್ತದೆಂದು ಹಿರಿಯರೊಬ್ಬರು ಹೇಳಿದ್ದರಿಂದ ಒಂದು ಹೊಲಿಗೆ ಕ್ರೈಮಿಶನ್‌ಕೊಂಡು ತಂದೆ. ಆದರೆ ಅದು ಕೆಲಸವಿಲ್ಲದೇ ಕುಳಿತದ್ದನ್ನು ನೋಡಲಾಗದೇ ನೆರೆಹೊರೆಯವರು ಅದನ್ನು ಸತತವಾಗಿ ಉಪಯೋಗಿಸಿ 'ಸುಸ್ಥಿತಿ' ಯಲ್ಲಿ ಇರುವಂತೆ ನೋಡಿಕೊಂಡರು...... ಮುಂಬರುವ ದಿನಗಳಲ್ಲಿ ಸಂಗೀತ ಮತ್ತು ಹೊಲಿಗೆಗಳಲ್ಲಿ ಮನಸ್ಸು ಹಾಕಬೇಕೆಂದಿದ್ದೇನೆ ! ಎಂದಾಗ ನಿಲಯದ ಕಲಾವಿದರಾದಿಯಾಗಿ ಎಲ್ಲರೂ ಹರ್ಷದಿಂದ ಕರತಾಡನ ಮಾಡಿದರು.

ನಿವೃತ್ತಳಾಗಿ ಮನೆಗೆ ಬಂದೆ. ನನ್ನೆರಡು ಕನಸುಗಳು ಆಕಾಶವಾಣಿ ಸಿಬ್ಬಂದಿಗೆ ಬಿತ್ತರಗೊಂಡ ವಾರ್ತೆ ಅದು ಹೇಗೋ ರಾಯರಿಗೆ ತಲುಪಿ ಗುಜರಿಗುತ್ತಿಗೆಗೆ ಬಿಜಯಂಗೈದು ಯಾವುದೋ ಹಳೆಯ ಡಬಲ್ ರೀಡ ಹಾರ್ಮೋನಿಯಂನ್ನು ಹೇಳಿದ ಬೆಲೆಗೆ ತಂದರು. ಅದರ ಎರಡರಷ್ಟು ಬೆಲೆ ತೆತ್ತು ರಿಪೇರಿ ಮಾಡಿಸಿದರು. ಐವತ್ತೆರಡು ಹೊಲಿಗೆ ಪ್ರಕಾರಗಳನ್ನು ಕೊಡಮಾಡುವಂಥ ಅತ್ಯಾಧುನಿಕ ಹೊಲಿಗೆ ಯಂತ್ರ ಖರೀದಿಸಿ ಗೃಹ ಪ್ರವೇಶ ಮಾಡಿಸಿಯೇ ಬಿಟ್ಟರು ''ನಿವೃತ್ತಿಯ ನಂತರ ಸಂಬಳ ನಿಲ್ಲುತ್ತದೆ. ಪೆನ್‌ಶನ್ ರೂಪತಾಳಿ ಕುಗ್ಗುತ್ತದೆ. ಹಣದ ಕೊರತೆ ಸ್ವಾಭಾವಿಕ, ಎಂದು ಎಲ್ಲರೂ ಬಲ್ಲರು. ನೀವು ಮಾತ್ರ ನನ್ನನ್ನು ಬೀಳ್ಕೊಟ್ಟ ವಿಚಾರಗಳನ್ನು ಗಂಭೀರವಾಗಿ ಪರಿಗಣಿಸಿ ಕಾರ್ಯಗತ ಮಾಡಿ ಉಳಿತಾಯಕ್ಕೆ ದೊಡ್ಡ ಏಟು ಹಾಕಿದೀರಾ ? ಎಂದು ಮೂದಲಿಸಲು ಯತ್ನಿಸಿದಾಗ, 'ನಮ್ಮ ಹವ್ಯಾಸ ಮತ್ತು ಸಾಧನೆಗಳು ನಮ್ಮ ಉತ್ಪನ್ನವನ್ನು ಅವಲಂಬಿಸಿಲ್ಲ, ಎನ್ನುವದನ್ನು ನೀನಿನ್ನೂ ಅರಿತಿಲ್ಲವೆಂದು ತೋರುತ್ತದೆ !' ಎಂದು ಉದ್ಗರಿಸಿ ದೂರ ದರ್ಶಕದಿಂದ ಕಾಗೆಗಳ ಪ್ರಣಯ ಚೇಷ್ಟೆಯನ್ನು ವೀಕ್ಷಿಸುವ ತಮ್ಮ ಹವ್ಯಾಸದಲ್ಲಿ ಮೈಮರೆತರು.

ನಾನು ನನ್ನ ಧ್ವನಿಯನ್ನು ಸುಧಾರಿಸಲು ಯತ್ನಿಸತೊಡಗಿದೆ ಈ ಮೂವತ್ತು ವರ್ಷ ಇತರರ ಧ್ವನಿ ಸುಧಾರಿಸಿ ಅವರಿಗೆ 'ಧ್ವನಿ ಸಂಸ್ಕಾರ' ಕಲಿಸಿ ನನ್ನ ಧ್ವನಿ ಅಲಕ್ಷಿಸಲ್ಪಟ್ಟಿತು. ನೌಕರಿಯಲ್ಲಿ ಸ್ಥಾನಮಾನ ಏರುತ್ತ ಹೋದಂತೆ ಮಾತಿನ 'ವೊಲ್ಯುಂ' ಏರುತ್ತ ಇತರರದನ್ನು ಅಡಗಿಸುವಂತೆ ಆಗಿತ್ತೆಂದು ತೋರುತ್ತದೆ. ನಿರ್ದೇಶಕಿಯ ಗದ್ದುಗೆ ಏರುವ ಹೊತ್ತಿಗೆ ಮೂರೂ ಹೊತ್ತು ಸಿಬ್ಬಂದಿಯನ್ನು ಗದರಿಕೊಳ್ಳುತ್ತ ಕೊನೆಗೆ ಗೊಗ್ಗರವಾಗಿ ಬಿಟ್ಟಿತ್ತು. ಸಾಲದ್ದಕ್ಕೆ ಮುತ್ತಾಳ ! ಎಂದು ಸೋಮಾರಿಗಳನ್ನು ಬೈಯಲು, ಪ್ರತಿಷ್ಠಿತ ರೊಂದಿಗೆ ಮೆಲುದನಿಯಲ್ಲಿ ಮಾತನಾಡಲು, ಒಳ್ಳೆ ಕೆಲಸಗಾರರಿಗೆ 'ಭಲೆ' ಎನ್ನಲು, ಬೇರೆ ಬೇರೆ ಧ್ವನಿ ಹೊರಡುತ್ತಿದ್ದವು. ಹಾರ್ಮೋನಿಯಂ ಸರಿಪಡಿಸಿ ಧ್ವನಿಯನ್ನು ಜೋಡಿಸಲೆತ್ನಿಸಿದಾಗ ಒಮ್ಮೆ ಮೊಮ್ಮಗುವಿನದು, ಇನ್ನೊಮ್ಮೆ ಮಧ್ಯವಯಸ್ಕಳದು, ಮಗದೊಮ್ಮೆ ಮುತ್ತಜ್ಜಿಯ ನಡುಗುವ ಧ್ವನಿಗಳು ಕೇಳಿಸಲಾರಂಭಿಸಿದವು ! ಈ ಜನ್ಮದಲ್ಲಿ ನನ್ನ ಧ್ವನಿ ಹಿಂದಿನ ಏಕಪ್ರಕಾರ ಮೆಲುದನಿ ಪಡೆಯಲಿಕ್ಕಿಲ್ಲವೆಂದು ಮನವರಿಕೆಯಾಗಿ, ಬೆಲೆಯುಳ್ಳ ಹಾರ್ಮೋನಿಯಂಗೆ ಬೀಗ ಜಡಿದು ರಾಯರ 'ಮೊಡಕಾ ಬಝಾರ'ಕ್ಕೆ ಸಾಗಿಸಿದೆ. ಎರಡು ದಿನದ ನಂತರ ಬಾಲ್ಯದ ಗೆಳತಿ ನಳನಿಯ ಪತ್ರ ಬಂದು ಎಂಥ

ಪ್ರಮಾದವಾಯಿತು. ಎಂದು ತಿಳಿಯಿತು. ಅವಳು ಲಂಡನದಿಂದ ಭಾರತಕ್ಕೆ ಬಂದವಳು ನನ್ನ ಭೇಟಿಗೆಂದೇ ಬೆಂಗಳೂರಿಗೆ ಬಂದಿದ್ದಳಂತೆ. ಆದರೆ ಬೇರೆ ಬೇರೆ ವಯಸ್ಕರಿಗೆ ನಾನು ಸಂಗೀತ ಪಾಠಶಾಲೆ (!) ನಡೆಸುತ್ತಿರುವದನ್ನು ಬಾಗಿಲಾಚೆಗೆ ನಿಂತು ಕೇಳಿ, ತೊಂದರೆ ಕೊಡುವ ಮನಸ್ಸಿಲ್ಲದೇ ಹಾಗೆ ಹೊರಟು ಹೋದಳಂತೆ. ನನ್ನ ಸಂಗೀತದ ಅಭ್ಯಾಸದಿಂದ ಎಂಥ ಪ್ರಮಾದವಾಯಿತು. ಎಂದು ಪರಿತಪಿಸಿದೆ. ಅತ್ಯಾಧುನಿಕ ಹೊಲಿಗೆ ಯಂತ್ರವನ್ನು ಬಳಸುವ ತಾಂತ್ರಿಕಜ್ಞಾನದ ಕೊರತೆ ನನ್ನಲ್ಲಿ ಇದ್ದುದರಿಂದ ಈಗ ರಾಯರು ಅದನ್ನು ತಮ್ಮ ಹರಿದ ಅಂಡರ್‌ವೇರ್ ರಿಪೇರಿಗೆ ಬಳಸಲಾರಂಭಿಸಿದ್ದಾರೆ !

'ನೋಡು, ಇಂದಿನಿಂದ ನಾವಿಬ್ಬರೂ ನಿವೃತ್ತರು, ಅಂತೆಯೇ ಸಮಪಾಲು, ಸಮಬಾಳು, ಎಲ್ಲ ಕೆಲಸಗಳಲ್ಲೂ ಪಾಲುಗೊಳ್ಳೋಣ. ನೀನು ತರಕಾರಿ ಖರೀದಿ, ಊಟ–ತಿಂಡಿಗಳ ಜವಾಬ್ದಾರಿ ವಹಿಸಿಕೊಂಡರೆ, ಉಳಿದವುಗಳನ್ನು ನಾನು ನಿರ್ವಹಿಸುತ್ತೇನೆ' ಎಂದು ಸಾರಿದಾಗ ದೊಡ್ಡ ಕೇಂದ್ರವೊಂದರ ನಿರ್ದೇಶಕತ್ವ ವಹಿಸಿದವಳಿಗೆ ಒಂದು ತೀರ ಪುಟ್ಟ ಸಂಸಾರದ ಜವಾಬ್ದಾರಿ ಏನು ಮಹಾ ? ಎಂದು ಕೂಡಲೇ ಒಪ್ಪಿಕೊಂಡು ಬಿಟ್ಟೆ.

ಮರುದಿನ ಮುಂಜಾನೆ ರಾಯರ ನಾಲ್ಕು ಗಂಟೆಯ ಘಮಘಮಿಸುವ ಫಿಲ್ಟರ್ ಕಾಫಿ ಬರಲೂ ಇಲ್ಲ, ಅವರು ತಿರುಗಾಡಲು ಹೋಗಲು ಎಬ್ಬಿಸಲೂ ಇಲ್ಲ. ಬದಲಾಗಿ ಮೊದಲ ದಿನದ ತರಕಾರಿ ಖರೀದಿಯನ್ನು ವಿಂಗಡಿಸಿ, ಸರಿಯಾಗಿ ಮುಚ್ಚಿಡಲು ನಾನು, ಮರೆತದ್ದರಿಂದ, ಜಿರಳೆಗಳೆಲ್ಲ ತಿಂದು ಹಾಕಿದ ಆಲೂಗಡ್ಡೆ, ಬದನೆಕಾಯಿ, ಬಾಳೇಹಣ್ಣು ಮಾವಿನಹಣ್ಣುಗಳನ್ನು ನನ್ನನ್ನು ಹಂಗಿಸುವಂತೆ ಓರಣವಾಗಿ ಟೇಬಲ್ ಮೇಲೆ ಜೋಡಿಸಿ ಇಟ್ಟಿದ್ದರು. 'ಇವನ್ನೆಲ್ಲ ಪ್ರದರ್ಶಿಸುವುದರಿಂದ ಆಗುವ ಲಾಭ ಏನ್ರಿ?' ಎಂದು ಸಿಡುಕಿದಾಗ, 'ಕ್ಷಾಪ ಮಾಡಿಕೊ ಬೇಡ್ರಿ ಮೇಡಂ, ನಿನ್ನೆ ತಾನೆ ನಿರ್ದೇಶಕಿಯಾಗಿ ನಿವೃತ್ತರಾಗಿರುವಿರಿ, ಶಿಸ್ತಿನ ಜೀವನವನ್ನು ಈಗಾದರೂ ಬುಧ್ಯಾಪೂರ್ವಕ ಕೈಗೂಡಿಸಿ ಕೊಳ್ಳಬೇಕಾಗುತ್ತದೆ ತಿಳಿಯಿತೇ ?' ಎಂದು ನಾಟಕೀಯವಾಗಿ ನುಡಿದರು. ಕಾಫಿಗೆ ಎಸರಿಡಲು ಹೋದಾಗ, ಹಿಂದಿನ ದಿನ, ನೀರನ್ನೆ ಸಂಗ್ರಹಿಸಿ ಇಡದೇ ಇದ್ದದ್ದು ನೆನಪಾಯಿತು. ತಿರುಗಾಡಿಕೊಂಡು ಬರೋಣವೇ ? ಎಂದಾಗ, ''ಹಾಲಿನವನು ನಮ್ಮ ಅನುಕೂಲ ನೋಡಿಕೊಂಡು ಬರುವುದಿಲ್ಲ, ಅವನು ಬರುವಾಗ ಮನೆಯಲ್ಲಿರ ಬೇಕಾಗುತ್ತದೆ'' ಎಂದು ಎಚ್ಚರಿಸಿದರು. ಹೋಗಲಿ, ನಾಶ್ತಾಕ್ಕೆ ಉಪ್ಪಿಟ್ಟನ್ನಾದರೂ ಮಾಡೋಣವೆಂದರೆ ತೆಂಗಿನಕಾಯಿ ಒಡೆದು ಕೊಳ್ಳುವುದು, ಮೆಣಸಿನಕಾಯಿ, ಈರುಳ್ಳಿ ಹೆಚ್ಚಿಕೊಳ್ಳುವುದು, ಮುಂತಾದವುಗಳಿಂದಲೇ ಕೆಲಸ ಪ್ರಾರಂಭಿಸಬೇಕಾಯಿತು. ಇದಕ್ಕೂ ಮೊದಲು ಆಫೀಸಿನ ಗಡಿಬಿಡಿಯ ದಿನಗಳಲ್ಲಿ ಅಡಿಗೆಯ ಹತ್ತಾರು ಚಿಕ್ಕಪುಟ್ಟ ಕೆಲಸಗಳನ್ನು ರಾಯರು ತಾವಾಗಿಯೇ ಮಾಡುತ್ತಿದ್ದರು.

ಹಾಲು ಕಾಯಿಸಿ, ನಾಶ್ತಾ ಮುಗಿಸಿ ಈಗಲಾದರೂ ಹೊರಗೆ ಹೋಗಿ ಬರೋಣವೇ ? ಎಂದು ರಾಗ ಎಳೆದಾಗ, ''ಎಲ್ಲಾದರೂ ಉಂಟೇ ? ಎಲ್ಲಿನೋಡಿದರೂ ಹೊಗೆ ಕಾರುವ ವಾಹನಗಳು, ಜನಜಂಗುಳಿ, ಸಾಲದ್ದಕ್ಕೆ ಬಿಸಿಲು ಬೇರೆ ಏರುತ್ತಲಿದೆ !''

ಎಂದು ನಾನು ಈ ಮೊದಲು ಮುಂದೆ ಮಾಡುತ್ತಿದ್ದ ಕುಂಟು ನೆವಗಳನ್ನೆಲ್ಲ ತಾವೇ ಒಂದೊಂದಾಗಿ ಹೇಳಿದರು. ನಾನು ಅಂದಿನ ದಿನಪತ್ರಿಕೆಯನ್ನು ವಿರಾಮವಾಗಿ ಓದಿ, ಸರ್ವಿಸಿನ ಯಾವತ್ತೂ ದೂಳು ಕೊಳಕುಗಳು ಕಳಚುವಂತೆ ಅಭ್ಯಂಗ ಸ್ನಾನ ಮುಗಿಸಿ ಅಡಿಗೆ ಮನೆಹೊಕ್ಕೆ, ಆದರೆ ಬೇಳೆ ನೆನೆಹಾಕಿಲ್ಲ, ಅಕ್ಕಿ ತೊಳೆದಿಟ್ಟಿಲ್ಲ, ಎಂದು ಲಕ್ಷ್ಯಕ್ಕೆ ಬಂದಿತು. ನನಗೆ ಅರಿವಾಗದಂತೆಯೇ ಈ ಮೊದಲು ಹಲವು ಸಲ ಕುಕ್ಕರ್ ತಯಾರಾಗಿರುತ್ತಿತ್ತು, ಇಲ್ಲವೇ ಅನ್ನ, ಬೇಳೆ, ತರಕಾರಿ ಬೆಂದು, ಕಾದಿರುತ್ತಿದ್ದವು. ನಾನು ಮಸಾಲೆ, ಒಗ್ಗರಣೆ, ಕಾಯಿತುರಿದು ಹಾಕಿ, ಅಡಿಗೆ ಮುಗಿದೇ ಹೋಯಿತು ! ಎಂದು ಸಾರುತ್ತಿದ್ದ ದಿನಗಳು ನೆನಪಾದವು. ಅಂತೂ ಅನ್ನ, ಮೊಸರು, ಉಪ್ಪಿನಕಾಯಿಯ ಊಟ ಮುಗಿಸಿ, ಏನನ್ನೂ ಆಕ್ಷೇಪಿಸದೆ ರಾಯರು ವಾಮಕುಕ್ಷಿಗೆ ತೆರಳಿದರು.

ಒಡಂಬಡಿಕೆಯಂತೆ ಖಾದ್ಯ ಪದಾರ್ಥಗಳನ್ನು ನಾನೇ ಖರೀದಿಸಬೇಕಾದ್ದರಿಂದ ಕೈಚೀಲಗಳನ್ನು ಹಿಡಿದು, ಆಟೋ ಹತ್ತಿ ಹೊರಟೇ ಬಿಟ್ಟೆ. ಮಾರ್ಕೆಟಿನಲ್ಲಿ ಒಂದೇ ದಿನದಲ್ಲಿ ತರಕಾರಿಯ ಬೆಲೆ ಗಗನಕ್ಕೇರಿದ್ದು ನೋಡಿ ಹೌಹಾರಿದೆ. ''ಏನಮ್ಮ , ನೆನ್ನೆ ರಾಯರು ಬದನೆಕಾಯಿ ನಾಲ್ಕು ರೂ ಕೆ.ಜಿ.ಗೆ ಅಂದಿದ್ದರು ಇವತ್ತು ಎಂಟು ರೂಪಾಯಿ ಹೇಳ್ತಿಯಾ ?'' ಎಂದಾಗ ಅದು ಈ ಗುಡ್ಡೆದು ನೋಡಿ, ಕಚಡಾಕಾಯಿ ! ಎಂದು ಚುರುಕಿನ ಉತ್ತರವನ್ನು ಕೇಳಿಸಿಕೊಳ್ಳಬೇಕಾಯಿತು. 'ಏನಯ್ಯಾ, ಟೊಮ್ಯಾಟೊ ನಿನ್ನೆ ಐದು ರೂಪಾಯಿ ಇದ್ದದ್ದು ಇವತ್ತು ಹತ್ತು ರೂಪಾಯಿ ಅಂತೀಯಾ ?'' ಅಂದಾಗ, 'ಬುದ್ಯೋರು ನೆನ್ನೆ ಒಯ್ದದ್ದು ಜೂಜು (ಜ್ಯೂಸ್) ಮಾಡುವ ದಾಗು ಹಣ್ಣಾಗಿರಬೇಕು'' ಎಂದು ಜಾರಿಕೊಂಡ. ''ಎಂಟಾಣೆ ಕರಿಬೇವು, ಎಂಟಾಣೆ ಕೊತ್ತಂಬರಿಸೊಪ್ಪು ಕೇಳಿದಾಗ, ''ಯಾವ ಊರಲ್ಲಿದ್ದೀರಮ್ಮ? ನೂರು ಗ್ರಾಮ ಮೆಣಸಿನಕಾಯಿ ಕರಿಬೇವು, ಕೋತಂಬರಿಗಳಿಗೆ ಎರಡು ರೂಪಾಯಿ ಆಗತ್ತೆ! ಪುಟಾಣಿಯೊಬ್ಬಳು ನಿರ್ಭಿಡೆಯಿಂದ ಸಾರಿದಳು. ಹೂಕೋಸು, ಬಾಳೆಕಾಯಿಗಳ ಬೆಲೆ ಕೇಳಿದರೆ ಮೂರ್ಛೆ ಬರುವಂತಾಯಿತು. ಬೆಲೆ ಕಡಿಮೆಯೆಂದು ಮನಸ್ಸಿಲ್ಲದೇ ಸೀಮೆ ಬದನೆಕಾಯಿ, ನವಿಲು ಕೋಸುಗಳ ಖರೀದಿಯಾಯಿತು.

ರಾಯರು ಹಣ್ಣು ಹಂಪಲು ಎಲ್ಲಿ ಖರೀದಿಸುತ್ತಿದ್ದರೆಂಬುದು ಅರಿಯದಿದ್ದರಿಂದ, ಆಕರ್ಷಕವಾಗಿ ಸಿಂಗರಿಸಿದ ಅಂಗಡಿಕಾರನಿಗೆ ವಿಚಾರಿಸಿದಾಗ, ''ಒಂದು ಹಣ್ಣಿಗೆ ಯಾಲಕ್ಕಿ ಎಂಬತ್ತು ಪೈಸೆ, ಪಚಬಾಳೆ ಒಂದು ರೂಪಾಯಿ. ರಸಬಾಳೆ ಒಂದೂಕಾಲು'' ಎಂದಾಗ ಡಝನ್‌ಗೆ ಎಷ್ಟು ಬೆಲೆ ? ಎಂದು ಪ್ರಶ್ನಿಸಿದೆ. ನಮ್ಮಲ್ಲಿ ಒಂದೇ ಬೆಲೆ ಕೊಡುಕೊಳ್ಳುವ ರೇಟ ಒಂದೇ. ಒಂದಾದರೂ ಅಷ್ಟೇ ನೂರಾದರೂ ಒಂದೇ !' ಎಂದು ಕಟ್ಟುನಿಟ್ಟಾಗಿ ಹೇಳಿದ.

ಹೊತ್ತು ತಂದ ತರಕಾರಿ, ಹಣ್ಣುಗಳ ಚೀಲಗಳನ್ನು ಮನೆಯಲ್ಲಿ ಇಟ್ಟು, ಗೋದಿಯನ್ನು ಬೀಸಿಸಿ ತರಲು ಗಿರಣಿಗೆ ಧಾವಿಸಿದೆ. ಹೋದಾಕ್ಷಣ ಗಿರಣಿಯವನು ಹಿಟ್ಟು ಮಾಡಿಕೊಟ್ಟಿದ್ದರಿಂದ, ಹಿಗ್ಗಿನಿಂದಲೇ ಹಿಂತಿರುಗಿದೆ. ಇಂದು ಗರಿಗರಿಯಾದ

ಚಪಾತಿ ಮಾಡಿ ರಾಯರಿಗೆ ಬಡಿಸೋಣವೆಂದು ಹಿಟ್ಟು ಕಲಿಸಲಾರಂಭಿಸಿದಾಗ ಅದರಲ್ಲಿ ರಾಗಿ ಹಿಟ್ಟಿನ ಮಿಶ್ರಣವಾದದ್ದು ಅರಿವಾಯ್ತು. ಸೀಮೆ ಬದನೆಕಾಯಿ, ನವಿಲು ಕೋಸುಗಳು ಈಳಿಗೆಯನ್ನು ಧಿಕ್ಕರಿಸುವಷ್ಟು ಬಲಿಷ್ಠವಾಗಿದ್ದವು. ಬಾಳೆಹಣ್ಣಿನ ಸೀಕರಣೆಯನ್ನಾದರೂ ಮಾಡೋಣವೆಂದರೆ ಹಣಿಗೆಯಲ್ಲಿದ್ದವುಗಳು ಬೆಣ್ಣೆಯಂತೆ ಮೃದು. ಸಿಹಿ ನಂಜನಗೂಡಿನ ರಸಬಾಳೆಯಾಗಿರದೇ ಹುಳಿ ಹುಳಿ ಸೇಲಂ ಬಾಳೆಹಣ್ಣುಗಳಾಗಿದ್ದವು ! ಅರ್ಧದಷ್ಟು ತಿನ್ನುವ ಸ್ಥಿತಿಯಲ್ಲೇ ಇರಲಿಲ್ಲ. ಎಲ್ಲ ವ್ಯಾಪಾರದಲ್ಲೂ ಮೋಸ ಹೋದದ್ದು ಅರಿವಾಯ್ತು. ಮನೆಗೆ ಬೇಕಾಗುವ ಯಾವತ್ತೂ ಸಾಮುಗ್ರಿಗಳ ಖರೀದಿಯನ್ನು ರಾಯರು ಮಾಡಿಕೊಂಡು ಬರುತ್ತಿದ್ದಾಗ 'ಇದು ಹುಳುಕು, ಅದು ಬಲಿತಿದೆ. ಬೆಲೆ ವಿಪರೀತ, ನಾಳೆ ಕಸದ ತೊಟ್ಟಿಗೆ ಸೇರಿಸುವುದನ್ನು ಇಂದು ಹಣತೆತ್ತು ತಂದಿರಾ ?'' ಇತ್ಯಾದಿ ನನ್ನ ಟೀಕೆ – ಟಿಪ್ಪಣಿಗಳು ನೆನಪಾದವು. ರಾಯರು ಯಾವ ಕೆಲಸಕ್ಕೂ ಹಿಂಜರಿದವರಲ್ಲ, ಅಡಿಗೆಯ ಯಾವತ್ತೂ ಜವಾಬ್ದಾರಿಯನ್ನು ನನ್ನ ಮೇಲೆ ಹೇರಿದ್ದರ ಉದ್ದೇಶವೇನು ? ತಾವು ನಿವೃತ್ತರಾಗುವದಕ್ಕಾಗಿ ಹೀಗೆ ಮಾಡಿರಬಹುದೇ ? ಛೇ, ಛೇ, ಅವರು ಹಾಗಿದ್ದರೆ ನಾನು ವರ್ಗಾವರ್ಗಿಯ ಖಾತೆಯಲ್ಲಿ ನೌಕರಿ ಮಾಡಿ ನಿವೃತ್ತಳಾಗುವದು ಸಾಧ್ಯವಿತ್ತೆ ?'' ಎಂದೆಲ್ಲ ಯೋಚಿಸಿದೆ.

ಯಾಕೋ ಈ ಯೋಚನೆ ಪೀಡಿಸಿದ್ದರಿಂದ ತಡವಾಗಿ ನಿದ್ರೆ ಹತ್ತಿ ಬೆಳಗಿನ ಜಾವ ಸಹಜವಾಗಿಯೇ ತಡವಾಗಿ ಎಚ್ಚರವಾಯ್ತು. ಇಂದೂ ತಿರುಗಾಟಕ್ಕೆ ಖೋತಾ ಅಂದು ಕೊಂಡಿದ್ದೆ. ಆದರೆ ರಾಯರು ಹಾಲಿನವನು ಬಂದೊಡನೆ ತಿರುಗಾಟಕ್ಕೆ ಹೋಗಲು ಸಿದ್ಧರಾದರು. ಹಿಂದಿರುಗಿ ಬರುವಾಗ ಜನತಾ ಹೊಟೇಲಿನಲ್ಲಿ ಬಿಸಿಬಿಸಿ ವಡಾ – ಸಾಂಬಾರ್, ಗರಿಗರಿಯಾದ ಮಸಾಲೆ ದೋಸೆ, ಮೊದಲನೇ ಫಿಲ್ಟರಿನ ಸುವಾಸನೆಯ ಕಾಫಿ ಕೊಡಿಸಿದರು. ಹೋಗುತ್ತ ಏನಾದರೂ ತರಕಾರಿ ಕೊಳ್ಳೋಣವೆಂದರೆ 'ಬೇಡ ಇವತ್ತು, ವಿರಾಮ ನಿನಗೆ. ಶಕ್ತಿ ಮೆಸ್ಸಿನವರು ನಮ್ಮನ್ನು ಆಮಂತ್ರಿಸಿದ್ದಾರೆ ! ಎಂದರು. ಅಲ್ಲಿ ಪರಾಠಾ, ಆಲೂಮಟರ್, ರಾಯ್ತ, ಚನಾಮಸಾಲಗಳ ಭರ್ಜರಿ ಊಟ ವಾಯಿತು. ಬಹಳ ವರ್ಷಗಳ ನಂತರ ಮೀಠಾಪಾನ್ ಕೊಡಿಸಿದರು. ''ಇಂದು ನಿಜವಾದ ನಿವೃತ್ತಿಯ ಆನಂದ ನನ್ನದಾಯಿತು ಎಂದೆ – ಬೀಡಾ ಮೆಲ್ಲುತ್ತ, ''ನಿನಗೊಬ್ಬಳಿಗೆ ಅಲ್ಲ, ನನಗೂ ಇದರಲ್ಲಿ ಪಾಲಿದೆ. ಯೌವನದಲ್ಲಿ ಲಭಿಸದ ಅದೆಷ್ಟೋ ಇಂಥ ಬಿಡುವಿನ ಸುಖ ನಿಮಿಷಗಳನ್ನು ಈಗ ಸವಿಯಬಹುದು. ಜ್ಞಾನ ಸಂಪಾದನೆ, ಹುದ್ದೆ, ಬಡ್ತಿ ಸಂಪಾದನೆ ಗಿಂತ ನಿವೃತ್ತಿಯ ನೆಮ್ಮದಿ ಜೀವನವನ್ನು ನಮ್ಮದಸ್ನಾಗಿಸುವದು ಅದೆಷ್ಟು ಕಷ್ಟಕರವೆಂದು ಈಗಲಾದರೂ ಮನವರಿಕೆಯಾಗಿರಬೇಕಲ್ಲವೇ ?'' ಎಂದರು ನಗುತ್ತ

■ ■

## ೧೦. ಕದನ ದಿನಚರಿ

ಇತ್ತೀಚೆಗೆ ನಮ್ಮಿಬ್ಬರಿಗೂ ಪ್ರತಿದಿನವೂ ಜಗಳ ನಡೆಯುತ್ತದೆ. 'ಇದೇನು ದೊಡ್ಡ ವಿಚಾರ ಅಂತ ನೀವು ಹೇಳ್ತಿರೋದು, ಬರಹಗಾರ್ತಿ ಅಮ್ಮಾವ್ರೆ! ನಾವಿಬ್ಬರೂ ಗಂಡ ಹೆಂಡತಿ. ದಿನಕ್ಕೆ ನಾಲ್ಕು ಸಲ ಜಗಳಾಡ್ತಿವಿ!' ಎಂದು ಹಳೇ ಮೈಸೂರಿನವರೂ 'ಇದೇನ ದೊಡ್ಡ ಸುದ್ದಿ ಅಂದಕ್ಯಾಸ್ ಬರೀಲಿಕ್ಕೆ ಕುಂತಾಳ ಈಕಿ ? ನಾವು, ದಿವ್ಸಾ ನಾಕೆಂಟ ಸಲ ವಾಸ್ಯಾಡೋದಿಲ್ಲ?' ಎಂದು ಹೊಸ ಕರ್ನಾಟಕದವರೂ ಒಟ್ಟಿಗೇ ಮೂಗು ಮುರಿಯ ಬಹುದು. ಆದರೆ ಸೋದರ–ಸೋದರಿಯರೇ, ಕೊಂಚತಾಳಿ ! ನಾನು ಈ ಮುಂದೆ ಹೇಳಲಿರುವ ಹಲವಾರು ಕಾರಣಗಳಲ್ಲಿ ಅಂಥ ಒಂದಾದರೂ ಕಾರಣಕ್ಕೆ ನಿಮ್ಮಿಬ್ಬರಲ್ಲಿ ಕದನ ಅಥವಾ ಜಗಳ ನಡೆದಿಲ್ಲ ಎಂಬ 'ಖಾತ್ರಿ' ಭರವಸೆ ನನ್ನದು !

ನಿಮ್ಮ ಪರಿಚಯದ ನನ್ನ ರಾಯರು, ಬರವಣಿಗೆ ಚಿತ್ರಕಲೆ, ಛಾಯಾಗ್ರಹಣ ಗಳಂತಹ ಕಲೆಗಳನ್ನು ರೂಢಿಸಿಕೊಂಡು ಹೆಸರಾಗಿರುವರಷ್ಟೆ ? ಆದ್ದರಿಂದ ಅವರ ಬಿಡುವಿನ ವೇಳೆಯನ್ನೆಲ್ಲ ಅವುಗಳ ಸಾಧನೆಗಾಗಿ ಮೀಸಲಿಡಬೇಕು ಎಂಬುದು ನನ್ನ ಕನಸು. ಆದರೆ ರಾಯರ ಯೋಚನೆ ಇನ್ನೊಂದು ದಿಕ್ಕಿನಲ್ಲಿ ಓಡುತ್ತದೆ. ಅವರಿಗೆ ಪತ್ನಿ ದ್ವಿತೀಯ ದರ್ಜೆಯ ನಾಗರಿಕಳಲ್ಲವಂತೆ ! ತನಗಿದ್ದ ಸವಲತ್ತುಗಳೆಲ್ಲ ಅವಳಿಗೂ ದೊರೆಯ ಬೇಕು. ಅವಳ ಗೃಹಚರ್ಯೆಯ ಯಾವತ್ತೂ ಚಟುವಟಿಕೆಗಳಲ್ಲಿ ತನ್ನ ಪಾಲು ಇರಬೇಕು ಎಂಬುದು ಅವರ ಕನಸು. ಈ ವಿರುದ್ಧ ದಿಕ್ಕಿನಲ್ಲಿ ಓಡುವ ತತ್ವ ಪ್ರಣಾಲಿಗಳಿಂದಾಗಿ ಪರಸ್ಪರ ಹಿತವೆಂಬ ಸದುದ್ದೇಶವು ಅಡಗಿ ಹೋಗಿದೆ ! ಕೋರ್ಟು ಕಚೇರಿ ಮೆಟ್ಟಿಲು ಹತ್ತುವ ಪ್ರಸಂಗ ಬಂದಿಲ್ಲವೆಂಬುದೇ ನೆಮ್ಮದಿ.

ಬೆಳಗಿನ ಕತ್ತಲೆ ಇನ್ನೂ ಇದ್ದಾಗಲಿನ ತಿರುಗಾಟವನ್ನು ಅನೇಕ ವರ್ಷಗಳಿಂದ ಕರಗತ ಮಾಡಿಕೊಂಡಿದ್ದೆವು. ಆರೋಗ್ಯವಂತರಾಗಿ ಮುಂದು ವರಿಯಲು, ವಾಕ್ ದಂತಹ ಶ್ರಮ ಬೇಕೇ ಬೇಕು ಎಂದು ನಂಬಿದ್ದೆವು. ಆದರೆ ಈಗ ಕಾಲ ಬದಲಾಗಿದೆ ! ಎರಡು ಬಾರಿ ಸರಗಳ್ಳರ ಮುಖಾಮುಖಿಯಾಗಿ ಸ್ವಲ್ಪದರಲ್ಲಿ ತಪ್ಪಿಸಿ ಕೊಂಡೆವು. ಬಳಿಕ ಗಸ್ತಿಯ ಕಾನೂನು ರಕ್ಷಕರೇ ಇಷ್ಟು ಬೇಗ ತಿರುಗಾಟಕ್ಕೆ ಹೊರಡ ಬೇಡಿ ! ಎಂದು ವಿನಂತಿಯ ಗದರಿಕೆ ಮಾಡಿದ್ದರಿಂದ ನಮ್ಮ ಈ ಪ್ರಾತಃ ಸಂಚಾರದಲ್ಲಿ ಏರುಪೇರಾ ಯಿತು. ದೂರದ ಊರುಗಳಿಂದ ಫೋನ್ ಕರೆಯುವರು, ಹಾಲಿನವನು, ವೃತ್ತಪತ್ರಿಕೆ ಯವರು ಅದೇ ಸಮಯವು ಸೂಕ್ತವಾದದ್ದೆಂದು ಪರಿಗಣಿಸಿದ್ದರಿಂದ, ಇಬ್ಬರಲ್ಲಿ ಒಬ್ಬರು ಆ ವೇಳೆಗೆ ಮನೆಯಲ್ಲಿ ಇರಲೇಬೇಕಾಗಿ ಬಂದಿತು. ನಾನು ರಾಯರಿಗೆ, ರಾಯರು ನನಗೆ ಒಂಟಿಯಾಗಿ ಹೋಗಿ ತಿರುಗಾಟ ಮುಗಿಸಿ ಬರಲು ಅನುಮತಿಯನ್ನು ಕೊಟ್ಟು

ಕೊಂಡದ್ದಾಯಿತು ! ಆದರೂ ಇಬ್ಬರೂ ಮನೆಯಲ್ಲೇ ಇದ್ದು ನಾಶ್ತಾ ತಯಾರು ಮಾಡುವ ಸಂದರ್ಭಗಳು ಹೆಚ್ಚಾದವು ! ಕೇವಲ ಇಬ್ಬರಿಗಾಗಿ ಚಹಾ, ಟೋಸ್ಟ್ ತಯಾರಿಸಲು ಈರ್ವರು ಪಳಗಿದ ಅಡಿಗೆಯವರು ! ಇಂದಿನ ದಿನಗಳಲ್ಲಿ ಬಹುಶಃ ಆಗರ್ಭ ಶ್ರೀಮಂತರಿಗೂ ಇಂಥ ಐಷಾರಾಮ ಲಭಿಸಲಾರದು !

ವಿಶ್ವವಿದ್ಯಾಲಯಗಳ ವಿದ್ಯಾರ್ಥಿ–ವಿದ್ಯಾರ್ಥಿನಿಯರ ನೆರವಿಗೆಂದು ವೈಜ್ಞಾನಿಕ ಛಾಯಾಗ್ರಹಣಕ್ಕಾಗಿ ಬೆನ್ನುಮೂಳೆ ಮುರಿಯುವಂತೆ ಹಗಲುರಾತ್ರಿ ದುಡಿದು ರಾಯರು ಬೆನ್ನು ನೋವನ್ನು ಆಮಂತ್ರಿಸಿದ್ದರು. ಅದಕ್ಕಾಗಿ ಭೇಳಂಬರದ (ಅಂಕೋಲೆ) ತೈಲ ತರಿಸಿದರೆ ತಿಕ್ಕಿಸಿಕೊಳ್ಳಲು ಸುತರಾಂ ಒಪ್ಪುವುದೇ ಇಲ್ಲ. 'ನನಗೇನಾಗಿದೆ ಧಾಡಿ ? ಕಲ್ಲಿನಂತೆ ಗಟ್ಟಿಮುಟ್ಟಾಗಿದ್ದೇನೆ. ಅದೇ ನೀನು, ಕುರ್ಚಿಯಲ್ಲಿ ಎಂಟು ಗಂಟೆ ಕೂತೇ ಇದ್ದು ಹೆಚ್ಚೆಂದರೆ ಸರ್ವಿಸಿನಲ್ಲಿದ್ದಾಗ, ಆಕಾಶವಾಣಿ ಗಾಡಿಯಲ್ಲಿ ಓಡಾಡಿ ಕೈಕಾಲಿನ ಬಲ ಕಳೆದುಕೊಂಡು, ಸಂಧಿವಾತಕ್ಕೆ ಆಮಂತ್ರಿಸಿರುವಿ !' ಎಂದು ವಾದಿಸುವರು. ವಾದ – ಪ್ರತಿವಾದಗಳ ಬಳಿಕ, ರಾಯರು ಭೇಳಂಬರದ ಎಣ್ಣೆಯನ್ನು ನೋವಿನ ಕೈಬೆರಳುಗಳಿಗೆ ತಿಕ್ಕಿದರೆ, ನಾನು ಬಿಡದೇ ಅವರ ಬೆನ್ನಿಗೆ ಅಯೋಡೆಕ್ಸ್ ಸವರದೇ ಇರುವದಿಲ್ಲ. ವಾಗ್ ಯುದ್ಧದಲ್ಲಿ ಸೋತರೇನು ? ಕೆಲಸದ ಸೆಣಸಾಟಕ್ಕೆ ಕೈ, ಬೆನ್ನುಗಳು ಪುನಃ ತಯ್ಯಾರ್ !

ಮಧ್ಯಾಹ್ನದ ಊಟ ಹನ್ನೆರಡು ಗಂಟೆಗೆ ಮೊದಲು ಮಾಡಲೇ ಕೂಡದು. ಎಂದು ರಾಯರ ಅಂಬೋಣ. 'ತುಂಬ ಬೇಗ ಏಳುತ್ತೀರಿ ! ಆರು ಗಂಟೆಗೇ ಬ್ರೇಕ್‌ಫಾಸ್ಟ್ ಮುಗಿಸುತ್ತೀರಿ ! ಅದೂ ತೀರ ಲಘುವಾದದ್ದು. ಹನ್ನೊಂದು ಗಂಟೆಗಾದರೂ ಊಟ ಮಾಡಿ, ಒಂದಿಷ್ಟು ವಿಶ್ರಾಂತಿ ಮಾಡಿ' ಎಂದು ಒತ್ತಾಯಿಸುತ್ತೇನೆ. ಅವರು, 'ವಿಶ್ರಾಂತಿ ಬೇಕಾಗಿರುವದು ನಿನಗೆ ! ರಾತ್ರೆ ನಾನು ಯಾವಾಗ ಎದ್ದರೂ ಎಚ್ಚರವಾಗಿಯೇ ಇರುತ್ತೀ. ಅರೆನಿದ್ರೆಯಲ್ಲೆ ಕಳೆಯುತ್ತಿ, ನಿದ್ರೆಯೊಂದೇ ಮನುಷ್ಯನ ಯಾವತ್ತು ದೈಹಿಕ, ಮಾನಸಿಕ ಶ್ರಮವನ್ನು ಹೋಗಲಾಡಿಸುವ ಸಾಮರ್ಥ್ಯ ಪಡೆದಿದೆ. ನೀನು ಎರಡು ತುತ್ತು ತಿಂದು ವಿರಮಿಸಬಾರದೇ ?' ಎಂದು ಬೋಧಿಸುತ್ತಾರೆ. ಸರಿ ಇಬ್ಬರಿಗೂ ಇಷ್ಟವಿಲ್ಲದಿದ್ದರೂ ಹನ್ನೊಂದು ಗಂಟೆಗೆ ಭೋಜನ ಸಮಾರಂಭ ಮುಗಿಸಿ, ನಂನಮ್ಮ ರೂಮು ಸೇರಿ, ನೆರೆಹೊರೆಯವರಿಗೆ ಸ್ಫುಟವಾಗಿಯೇ ಕೇಳಿಸುವಂತೆ ಗೊರಕೆ ಹೊಡೆಯುವದು ನಮ್ಮ ನಿತ್ಯ ಕ್ರಮ !

'ಮಧ್ಯಾಹ್ನದ ಚಹಾ ಜೊತೆಗೆ ಚೂಡಾ, ಚಕ್ಕಲಿ ನಡೆದೀತೇ ? ಏನಾದರೂ ಲೈಟಾಗಿ, ಅವಲಕ್ಕಿ, ಸೇವಿಗೆ ಉಪ್ಪಿಟ್ಟು ಮಾಡಲೇ ?' ಎಂದು ತಪ್ಪದೇ ವಿಚಾರಿಸುತ್ತೇನೆ. 'ಏನೂ ಬೇಡ!' ಖಚಿತವಾದ ಉತ್ತರ ಸಿದ್ಧ. 'ಹಾಗಿದ್ದರೆ ಯಾಕ್ರಿ ? ಕುರುಕಲು ತಿಂಡಿ ಗಳನ್ನು ಕಿಲೋಗಟ್ಟಲೆ ತರ್ತೀರಿ ? ಆಡಿನಂತೆ ಇದ್ದಾಕೆ, ಅವನ್ನು ಮೆದ್ದು ಆನೆಯಂತಾಗಲಿ ಎಂದೇ ?' ಜೋರಾಗಿ ಮೂದಲಿಸುತ್ತೇನೆ. 'ಹಾಗೇನಿಲ್ಲ, ಆಗೀಗ ನಿನ್ನ ಪರಿಚಯ ದವರು, ಸ್ನೇಹಿತೆಯರು ಬರುತ್ತಾರಲ್ಲ? ಕುರುಕಲು ತಿಂಡಿ ಕಾಯಂ ಮನೆಯಲ್ಲಿ ಇರಲಿ ! ಎಂದು ತಂದಿಡುತ್ತೇನೆ. ಬಂದವರಾದರೋ ಈ ಅಮ್ಮ ನಮಗಾಗಿ ಸಿಹಿ, ಕಾರದ ತಿಂಡಿ

ತಯಾರಿಸಿ ಇಡುತ್ತಾರೆ, ಎಂಬ ಭ್ರಮೆಯಲ್ಲಿರುತ್ತಾರೆ !' ಎಂದು ಬಾಯಿ ಮುಚ್ಚಿಸಲೆತ್ನಿಸುತ್ತಾರೆ. 'ಅಪರೂಪಕ್ಕೆ' ಹಿಂದಿನ ಸಹೋದ್ಯೋಗಿಗಳು ಬಂದು ಹೋಗುವದು ಇದೆ. ಏನೋ, ಚೂರು ಗೌರವ. ವಿಶ್ವಾಸದಿಂದ ಬಂದರೆ, ಹೊಟ್ಟೆಕಿಚ್ಚೇ ?' ನನ್ನ ಖಾರದ ಪ್ರಶ್ನೆ. 'ಬಂದವರಿಗೆ, ಒಮ್ಮೆ ಬಾಯ್ತುಂಬ ಕಾಫಿ ಮಾಡ್ಲಾ ? ಎಂದು ವಿಚಾರಿಸಿ ಹಾಗೇ ಕಳಿಸು, ಆಮೇಲೆ ಅವರು ಅಪ್ಪಿತಪ್ಪಿಯಾದರೂ ಬರುತ್ತಾರೋ ನೋಡೋಣ ! ಎಂದು ಸಲ್ಲದ ಪಂಥಾಹ್ವಾನ ಎಸೆದು ಬಾಯಿ ಮುಚ್ಚಿಸುವರು. ಮಾತಿನ ಭರದಲ್ಲಿ ಚಕ್ಕುಲಿ ತಟ್ಟೆ ಖಾಲಿ !

'ಇಡೀ ದಿನ ಓದುವದು, ಏನಾದರೂ ಗೀಚುವದು, ಬಲೆ ಬೇಜಾರು ಕಣ್ರೀ !' ಎಂದು ಎಂದಾದರೊಮ್ಮೆ ರಾಗ ಎಳೆದೆನೇ, ಬಂದಿತು ಮರುಪ್ರಶ್ನೆ 'ನಿನ್ನ ಸ್ತ್ರೀ–ಸಾಹಿತ್ಯ ಸಂಘದ ಮಾಸಿಕ ಸಭೆ ಇಲ್ಲವೇ ? ಅಥವಾ ಅದರ ಸದಸ್ಯೆಯರು ಯಾರಾದರೂ ಭೇಟಿಗೆ ಬರುವದಿಲ್ಲವೇ ?' 'ಅವರಲ್ಲಿ ಹೆಚ್ಚಿನವರು ನಿಮ್ಮ ಸಾಹಿತ್ಯದ ಅಭಿಮಾನಿಗಳು ಕಣ್ರೀ ! ಎಂದೇ ಪ್ರತಿಸಲ ಬಂದಾಗ, ಇನ್ನೇನನ್ನು ಹೊಸದಾಗಿ ಬರೆದಿದ್ದಾರೆ ? ಎಂದು ತಪ್ಪದೇ ವಿಚಾರಿಸಿಕೊಳ್ಳುತ್ತಾರೆ !' ಅವರ ಬೆನ್ನು ತಟ್ಟಲು ಯತ್ನಿಸುತ್ತೇನೆ.

'ಅವರ ಸಾಹಿತ್ಯ ಪರಿಚಯವೆಲ್ಲ ಪತ್ರಿಕೆಗಳಲ್ಲಿ ಪ್ರಕಟವಾಗುವ ಹೊಸ ಪುಸ್ತಕಗಳ ಯಾದಿಯಿಂದ ! ನೀನೋ, ಯಾರು ಯಾರಿಗೋ ನನ್ನ ಕೃತಿಗಳ ಪ್ರತಿಗಳನ್ನು ಕೊಟ್ಟು, ಬಾಯ್ತುಂಬ ಹೊಗಳಿ, ಓದಿ ಅಭಿಪ್ರಾಯ ಹೇಳಿ ಎನ್ನುತ್ತಿ ! ಅವರ ಪ್ರಶಂಸೆಯಾಗಲಿ, ನನ್ನ ಪ್ರತಿಗಳನ್ನು ಶಾಶ್ವತವಾಗಿ ಕಳೆದುಕೊಳ್ಳುವದಾಗಲಿ ನನಗೆ ಬೇಕಿಲ್ಲ !' ಈಗ ಬ್ಯಾಡಗಿ ಮೆಣಸಿನಕಾಯಿ ಖಾರದಿಂದ ನುಡಿಯುತ್ತಾರೆ.

''ಖಂಡಿತ, ನೀವು ಅವರನ್ನು ಯಾರನ್ನೂ ಸರಿಯಾಗಿ ಗುರುತಿಸಿಲ್ಲ. ಒಬ್ಬಳು ಪ್ರಾಥಮಿಕ ಶಾಲೆಯಲ್ಲಿ ಇದ್ದಾಗಲೇ ನಿಮ್ಮ ಕೃತಿಗಳನ್ನು ಓದಲಾರಂಭಿಸಿದಳಂತೆ. ಇನ್ನೊಬ್ಬಳು, ನಿಮ್ಮ ಪ್ರವಾಸ ಕಥನವನ್ನು ಏಳೆಂಟು ಬಾರಿ ಓದಿರುವಳಂತೆ. ಕಾಲೇಜಿನಲ್ಲಿ ಅವಳದೇ ದಾಖಲೆಯಂತೆ. ಮತ್ತೊಬ್ಬಾಕೆಗೆ ವಿಜ್ಞಾನ–ಸಾಹಿತ್ಯದಲ್ಲಿ ಅಭಿರುಚಿ ಹುಟ್ಟಿದ್ದೇ 'ಸಸ್ಯ ಪರಿಸರ' ಓದಿದ ಬಳಿಕವಂತೆ !........... ಇನ್ನೂ ಹೇಳಲಿದ್ದಾಗಲೇ 'ಸರಿ, ಮಗದೊಬ್ಬಳಿಗೆ ಗರ್ಭದಲ್ಲಿರುವಾಗಲೇ ಅವಳ ತಾಯ್ತಂದೆಗಳು ನನ್ನ ಕೃತಿಗಳನ್ನು ಚರ್ಚಿಸಿದ್ದನ್ನು ಆಲಿಸಿ ಲೇಖಕಿಯಾಗುವ ಪ್ರಚೋದನೆಯಾಗಲಿಲ್ಲವೇ ?' ಎಂದು ಬ್ರೇಕ್ ಹಾಕುತ್ತಾರೆ.

ಒಮ್ಮೆ ಸ್ತ್ರೀ ಪುರುಷ ಸಮಾನತೆಗಾಗಿ ಹೋರಾಡುವ ಗುಂಪಿನವರು ಬಂದಿದ್ದರು. ಹೆಚ್ಚಿನವರು ರಾಯರ ಬರವಣಿಗೆಗೆ ಪರಿಚಿತರೇ ! ಸಾಕಷ್ಟು ಸಮಯವಿದ್ದು, ಅವರು ಹೊರಟು ಹೋದ ಬಳಿಕ 'ಇಂದು ಸಾಕಷ್ಟು ಪ್ರಫುಲ್ಲತೆಯಿಂದ ಸಮಯ ಕಳೆಯುವಂತಾಯಿತೇ ?' ಎಂಬ ವಾಗ್ಬಾಣ ಬಂದೇಬಿಟ್ಟಿತು. ಅದನ್ನು ಗಮನಿಸದೇ 'ಅಲ್ರೀ ! ಅವರೆಲ್ಲ ನಿಮ್ಮಿಂದ ಹಾಗೂ ನಮ್ಮ ಸಂಸಾರದ ಪರಿಯಿಂದ ಪ್ರಭಾವಿತರು ಅಂತ ಹೇಳಿದರೆ ನೀವು ನಂಬೋದಿಲ್ಲ ! ನಿಮ್ಮನ್ನು ಅನುಕರಿಸ ಹೋದವರ ಸ್ಥಿತಿಗತಿಗಳನ್ನು

ಕೊಂಚ ಅವಲೋಕಿಸಬಾರದೇ ? ಸುನಂದಾಳ ಯಜಮಾನರಿಗೆ ಬಾಲ್ಯದಲ್ಲಿ ಛಾಯಾ ಗ್ರಹಣ ಮಾಡುವದರಲ್ಲಿ ಆಸಕ್ತಿ ಇತ್ತಂತೆ. ನಮ್ಮಲ್ಲಿಯ ಆಲ್ಬಂಗಳನ್ನು ನೋಡಿ, ಬ್ಯಾಂಕಿನ ಸಾಲ ಪಡೆದು ಭಾರಿ ಮೊತ್ತದ ಕ್ಯಾಮರಾ ಫ್ಲ್ಯಾಶ್‌ಗಳನ್ನು ಖರೀದಿಸಿ, ಪ್ರೇರಣೆ ಕೊಟ್ಟಳಂತೆ. ಆದರೆ ಈಗ ಸಾಲ ತುಂಬುವದರಲ್ಲಿ ಫಿಲ್ಮಂ ಕೊಳ್ಳಲು ಆಗುವದಿಲ್ಲವಂತೆ ! ಸಾವಿತ್ರಿಗೆ ತನ್ನ ಪತಿಯನ್ನು ಸಾಯಿತಿಯಾಗಿಸುವ ಹುಮ್ಮಸ್ಸು, ಕನ್ನಡ ಟೈಪರೈಟರ್ ಕೊಂಡು ತಂದಳಂತೆ. ಒಂದು ಈ ಅಕ್ಷರ ಮುದ್ರಿಸಲು ಮೂರು ಬಟನ್ ಒತ್ತಬೇಕಾಗಿ ಬಂದ ಕಿರಿಕಿರಿಯಿಂದಾಗಿ ಅದರ ಗೊಡವೆಯನ್ನೆ ಬಿಟ್ಟಳಂತೆ. ಈಗ ಕಾನ್ವೆಂಟಿಗೆ ಹೋಗುವ ಮೊಮ್ಮಗಳಿಗೆ ಕನ್ನಡ ಕಡ್ಡಾಯ ಮಾಡಿದ್ದರಿಂದ, ಆಕೆ ಅದರಲ್ಲಿ ಅಕ್ಷರಗಳನ್ನು ಕುಟ್ಟುತ್ತ ಅ, ಆ, ಇ, ಈ ಕಲಿಯಲು ಬಳಸುತ್ತಾಳಂತೆ ! ಕಾಂತಾದೇವಿ, ತನ್ನ ರೇಶ್ಮೆ ಸೀರೆಗಳ ಮೇಲೆ ಹೂಬಳ್ಳಿಗಳನ್ನು ಚಿತ್ರಿಸಿ ಕೊಡಲು ಕಲಾವಿದನಲ್ಲನ ಪತಿಯ ಮನಸ್ಸು ಒಲಿಸಿ, ಬಣ್ಣ–ಬ್ರಶ್‌ಗಳನ್ನು ತಂದಿತ್ತರೆ, ಅವುಗಳತ್ತ ತಪ್ಪಿಯೂ ಕಣ್ಣು ಹಾಯಿಸಲಿಲ್ಲವಂತೆ. ನೀವು ನನಗೆ ಅಡಿಗೆಯಲ್ಲಿ ಸಹಾಯ ಮಾಡುವದನ್ನು ಅರಿತ ನಾಗರತ್ನ, ಪತಿಗೆ ಈರುಳ್ಳಿ ಹೆಚ್ಚಿಕೊಡಲು ಮನ ಒಲಿಸಿದಾಗ ಬೆರಳಿಗೆ ಗಾಯ ಮಾಡಿಕೊಂಡು ಅವಾಂತರವನ್ನೇ ಸೃಷ್ಟಿಸಿದರಂತೆ !' ಎಂದೆಲ್ಲ ರಾಯರ ಪರೋಕ್ಷ ಪ್ರಭಾವದಿಂದ ನನ್ನ ಸ್ನೇಹಿತೆಯರಿಗಾದ ಅಪಾರ ಹಾನಿಯ ಹೊರಳು ನೋಟುಗಳನ್ನು ದಾಟಿಸಿದೆ. 'ಅಯ್ಯೊ ಕರ್ಮವೇ ! ಸದ್ಯ ಅವರೆಲ್ಲ ನನ್ನಂತೆ ಪತ್ನೀಪೀಡಿತರು ಸಂಘದ ಸದಸ್ಯರಾಗುವಲ್ಲಿ ಬಚಾವಾದರು !' ಎಂದು ತಿರುಗುಬಾಣ ಬಿಟ್ಟರು. ಈ 'ಪಿ.ಪಿ.ಎಸ್'. ಸಂಘದ ಸದಸ್ಯತ್ವ ಅತ್ಯಂತ ಕಠಿಣವಾಗಿದ್ದು ತಾನೊಬ್ಬನೇ ಅದರ ಸದಸ್ಯನೆಂಬ ಜಂಬ ರಾಯರದು.

ಇನ್ನೊಮ್ಮೆ ಬೇಜಾರಾಗುತ್ತದೆ ! ಎಂದಾಗ, ನಿನ್ನ ಹೆಗ್ಗಳಿಕೆಯ 'ಸಾಹಿತಿಕಲಾ–ಆದಾನ್–ಪ್ರದಾನ್' ಸ್ನೇಹಿತೆಯರಿಗೆ ಫೋನಿಸುತ್ತ ಕಾಲಹರಣ ಮಾಡು ! ಎಂದು ಸೂಚನೆಯಿತ್ತರು. 'ಅವರ ಬತ್ತಳಿಕೆಯಲ್ಲಿಯ ಅಸ್ತ್ರಗಳು ಎಂದೊ ಮುಗಿದು ಹೋಗಿವೆ ! ನೀವು ಆಕಾಶವಾಣಿ ನಿರ್ದೇಶಕಿ ಇದ್ದಾಗ ಎಂಥ ಸುವರ್ಣ ಯುಗ. ಪ್ರತಿಭಾವಂತರನ್ನು ಗುರುತಿಸುತ್ತಿದ್ದಿರಿ ! ಯಾರನ್ನೂ ಹತ್ತಿಸಿ ಇಳಿಸದೇ ಕಾನೂನ ಪ್ರಕಾರ ನಡೆಯುತ್ತಿದ್ದಿರಿ....... ಈಗ ನೋಡಿ' ಎಂದೆಲ್ಲ ಕೆಲವರ ಮಾತು ನೆನಪಿಸಿಕೊಳ್ಳುತ್ತಿದ್ದಂತೆ ಹೋಗಲಿ 'ಈಗ ನೀನು ಅವರ ಸಾಧನೆಗಳನ್ನು ಹೊಗಳು, ತಮಾಷೆ ನೋಡು !' ಎಂದರು. 'ಅಯ್ಯೋ ಅವರ ಪ್ರತಿಭೆಯೇ ! ಧ್ವನಿ ಕೆಟ್ಟು ಹೋದವರು ರಾಷ್ಟ್ರೀಯ ಕಾರ್ಯಕ್ರಮಕ್ಕೆ ಹವಣಿಸಿ ನಿರಾಶ ರಾದವರು, ಯೋಗ್ಯತೆಯಿಲ್ಲದೇ ಬಡತಿಗಾಗಿ ಬಾಯ್ಬಿಟ್ಟು ಪೀಡಿಸಿದವರು, ನನ್ನ ವಿರುದ್ಧ ಅಜ್ಞಾತ ಪತ್ರಗಳ ಸತ್ರ ಪ್ರಾರಂಭಿಸಿದವರು, ವರ್ಗಾವರ್ಗಿ ತಪ್ಪಿಸಲು ಇಲ್ಲದ ಕುಹಕಗಳನ್ನು ಕೈಕೊಂಡು ಕಾಡಿದವರು, ಇವರನ್ನೆಲ್ಲ ಏನೆಂದು ಹೊಗಳಲಿ ?' ಎಂದು ಕಹಿಯಾಗಿಯೇ ಉತ್ತರಿಸಿದೆ. 'ಓ ! ನನ್ನಿಂದ ಕೆಲಸಗಳನ್ನೆಲ್ಲ ಮಾಡಿಸುವಾಗ ಎಂಥ ಅದ್ವಿತೀಯ ಪತಿ ಎಂದು ಸಾರುತ್ತ ಇದ್ದಿ' ಎಂದು ಚುಡಾಯಿಸಿದರು.

'ಹೊರಗೆ ಹೋಗಿ ತಿರುಗಾಡಿ ಬರೋಣವೇ ?' ಬೇಸರದ ಸಂದರ್ಭವೊಂದರಲ್ಲಿ

ರಾಯರು ರಿಯಾಯತಿ ತೋರಲು ಹವಣಿಸುವದುಂಟು. 'ನಿಮ್ಮ ತರಕಾರಿ ಮಾರ್ಕೆಟ್ ತಿರುಗಾಟದಲ್ಲಿ ನನಗೆ ಏನೇನೂ ಆಸಕ್ತಿ ಇಲ್ಲ, ಸೌತೆಕಾಯಿ ಕೌಸಲ್ಯಾ, ಲಿಂಬೇಹಣ್ಣಿನ ಪ್ರೇಮ, ಬದ್ನೇಕಾಯಿ ಭಾಗ್ಯ, ದಂಟಿನ ಸೊಪ್ಪು ಮಾರುವ ಸಾವಿ, ಅವರ ಮಾತಿಗೆ ಮರುಳಾಗಿ, ಹೊರೆ ತರಕಾರಿ ಹೊತ್ತು ತರುವದು ನನಗಿಷ್ಟವಿಲ್ಲ ! 'ಎಂದು ಖಂಡ ತುಂಡವಾಗಿ ಉತ್ತರಿಸುತ್ತೇನೆ, ಹಣಕೊಟ್ಟರೂ ಕಾಯಿಪಲ್ಲೆ ಸಿಗದ ದಿನಗಳು ಬಂದಾವು ! ಈಗಲೇ ತಲೆ ಕೆಡಿಸಿಕೊಳ್ಳಬೇಡ....... ಯಾವ ದಿಕ್ಕಿನಲ್ಲಿ ತಿರುಗಾಡಲು ಹೋಗುವ ದೆಂದು ನೀನೇ ನಿರ್ಧರಿಸು...... ಉತ್ತರಕ್ಕಾಗಿ ಕಾಯುತ್ತಾರೆ.

'ಯಶವಂತಪುರ ರಸ್ತೆಯಲ್ಲಿ ಟ್ರಾಫಿಕ್ ಜಾಸ್ತಿ ! ಕಿರ್ಲೋಸ್ಕರ ರಸ್ತೆಯಲ್ಲಿ ಪೋಲಿಗಳು ಜಾಸ್ತಿ! ಆರನೇ ಮೇನ್‌ದಲ್ಲಿ ಅಗಿದು ಹಾಕಿದ ಅವಾಂತರ !'..... ಎಂದೆಲ್ಲ ನೆವಹೇಳಿ 'ವಾಟರ್ ಬೋರ್ಡ್ ರಸ್ತೆ ಪರ್ವಾ ಇಲ್ಲ' ಎಂದು ನನ್ನ ಆಯ್ಕೆ ತಿಳಿಸುತ್ತೇನೆ.

'ಹೋ ! ನಿನ್ನ ಆಯ್ಕೆ ತಿಳಿದೇ ಇತ್ತು, ಒಳಚರಂಡಿ ಯೋಜನಾ ಖಾತೆಯವರು ಅಪೂರ್ಣವಾಗಿಯೇ ಇರಿಸಿದ ಕಾಮಗಾರಿಕೆಯಿಂದಾಗಿ, ಹೊರಚರಂಡಿ ಬಲವಾದ ರಸ್ತೆಯೇ ನಿನ್ನ ವಾಯುವಿಹಾರಕ್ಕೆ ಲಾಯಕ್ಕಾದ ಸ್ಥಳವೆಂದು ಗೊತ್ತು!' ಎಂದು ಕೊಂಕು ನುಡಿದು, ನನ್ನನ್ನು ವಾಕ್‌ಗೆ ಕರೆದೊಯ್ಯುವರು, ದಾರಿಯುದ್ದಕ್ಕೂ, ಇಪ್ಪತ್ನಾಲ್ಕು ಗಂಟೆ ಕೊಳಾಯಿ ನೀರು ನಿಂತು ಉಂಟಾದ ಸೊಳ್ಳೆಗಳ ಸಮೂಹ ಗಾನದ ಅಂಚಿನ ರಸ್ತೆಯ ಬದಿಗೆ ಮಲ–ಮೂತ್ರ ವಿಸರ್ಜನೆಯಲ್ಲಿ ತೊಡಗಿದ ಮಕ್ಕಳ ನೈಸರ್ಗಿಕ ನೋಟದ ಸಿರಿಯ, ಸಾಕಿದ ದನಕರುಗಳಿಂದಾಗಿ ಪ್ರತಿ ಮನೆಯ ಮುಂದಿರುವ ತಿಪ್ಪೆಗುಂಡಿಯ ಮೆಹಂದಿ ಬಳೆದುಕೊಂಡಂತೆ, ಅದೇ ಬಣ್ಣದ ಸೆಗಣಿಯಿಂದ ಅಲಂಕೃತವಾದ ಕೈಗಳಿಂದ ಏಕಾಗ್ರತೆಯಿಂದ ಬೆರಣಿ ತಟ್ಟುತ್ತಿರುವ ಮಹಿಳಾ ವೃಂದದ ಇಣಕು ನೋಟಗಳನ್ನು ಕಂಡರೂ, 'ನೋಡಿದಿರಾ ! ಇಲ್ಲಿ ಟ್ರಾಫಿಕ್ ಇಲ್ಲ, ದೂಳು ಇಲ್ಲ, ಪ್ರಶಾಂತವಾಗಿದೆ !' ಎಂದು ನನ್ನ ಆಯ್ಕೆಯ ಮಾರ್ಗದ ಮಹಿಮೆ ತಿಳಿಸಲು ಯತ್ನಿಸುತ್ತೇನೆ.

'ಹೌದು !, ಒಂದಕ್ಕಿಂತ ಅಪೂರ್ವನೋಟಗಳು, ಸೆಗಣಿಯ ಸುವಾಸನೆಯ ಆಹ್ಲಾದಕಾರಿ ವಾತಾವರಣ ! ಇನ್ನು ಸೊಳ್ಳೆ ಸಂಗೀತ, ಸರಿಯಾಗಿ ರೂಪಗೊಳ್ಳಲು ಅರ್ಧ ಗಂಟೆ ಕಾಯಬೇಕಷ್ಟೇ !' ಕೀಟಪ್ರಿಯರ ಕಾಮೆಂಟ್ ಬಂದೇ ಬರುತ್ತದೆ. 'ನಿಮ್ಮ ಇಷ್ಟದ ತುಮಕೂರು ರಸ್ತೆಯ ಚರ್ಚಿನ ಹೊರಗಡೆ ಸಾಲಾಗಿ ಕುಳಿತಿರುವ ಕುಷ್ಟರೋಗ ಭಿಕ್ಷುಕರಿಗೆ ಭಿಕ್ಷೆ ನೀಡದೇ, ಅವರ ಎಂಜಲನ್ನು ಜಾಗ್ರತೆಯಾಗಿ ದಾಟುತ್ತ ಓಡಾಡು ವದೇ ನಿಮಗೆ ಇಷ್ಟವೆಂದು ಗೊತ್ತಿಲ್ಲವೇ ?' ನನ್ನ ಮಾರುತ್ತರ ಇದ್ದದ್ದೇ.

ಬೆವರು ಸುರಿಸುತ್ತ ಉಸ್, ! ಉಸ್, ! ಎಂದು ಹಿಂದಿರುಗಿದಾಗ 'ಲಿಂಬೆಹಣ್ಣಿನ ಶರಬತ್ ಮಾಡಲೇ ?' ಎಂದು ವಿಚಾರಿಸುವದು ನನ್ನ ಪತಿವ್ರತಾ ಧರ್ಮ. 'ಬೇಡ ಬಿಡು' ಎನ್ನುವದು ಅವರ ಪತ್ನೀವ್ರತ ಸೌಜನ್ಯ. ಪಾನಕ ತಯಾರಾಗುತ್ತದೆ. ಗ್ಲಾಸುಗಳನ್ನು ಹಿಡಿದು ಹನಿ ಹನಿಯಾಗಿ ಸವಿದು ಆನಂದಿಸುತ್ತೇವೆ. 'ಸೋಡಾ, ಜಿಂಜರ್, ಕೂಲ್ ಡ್ರಿಂಕ್ಸ್‌ಗಳಿಗೆ ಈ ರುಚಿ ಬಂದಿತೇ ?' ಎಂದು ರಾಯರು ಮೆಚ್ಚಿಗೆ ಸೂಸುತ್ತಾರೆ. 'ಪತ್ನಿಗೆ

ಕೋಕ್, ಪೆಪ್ಸಿ ಆದಿ ಪಾನೀಯಗಳನ್ನು ಕೊಡಿಸಬೇಕಾದೀತು ! ಅಂದುಕೊಂಡೇ ಈ ಮಾತು ಹೇಳುತ್ತಾ ಇದ್ದೀರಿ' ನನ್ನ ಚುಚ್ಚು ಮಾತಿನ ಆಪಾದನೆ. 'ಮಹಾರಾಯತಿ, ಇನ್ನು ಮೇಲೆ ತಿರುಗಾಟ ಮುಗಿಸಿ ಬಂದಾಗ ನಾನು ನಿನಗೆ ಕೋಕ್ ಕೊಡಿಸುವೆ. ನೀನು ನನಗಷ್ಟೆ ಲಿಂಬೂ ಶರಬತ್ ಮಾಡಿಕೊಡು ಆದೀತೇ ?' ಅಸಾಧ್ಯ ಸೂಚನೆ ಮುಂದಿಡುವರು. 'ಒಂದು ಕಣ್ಣಿಗೆ ಬೆಣ್ಣೆ, ಇನ್ನೊಂದು ಸುಣ್ಣ ಎಂಬ ಮಾತಿನಲ್ಲಿ ವಿಶ್ವಾಸ ಇಟ್ಟವಳಲ್ಲ ! ಬೆಲ್ಜಿಯಂ ಅಂದ ಚಂದದ ಗ್ಲಾಸುಗಳಲ್ಲಿ ಪುಡಿ ಮಾಡಿದ ಬರ್ಫಕ್ಕೆ ಕೋಕೋಕೋಲ ಸೇರಿಸಿ, ಹುಲ್ಲು ಕಡ್ಡಿಯಿಂದ ಕಣ್ಣು ಮುಚ್ಚಿ ದ್ರವ ಹೀರಿದರೇ ನೆಮ್ಮದಿ !' ಎನ್ನುವೆ. 'ನಿನ್ನ ಈ ಆಶೆ ನೆರವೇರಿಸುವದ, ಅಸಾಧ್ಯ !' ಹಿಂದೊಮ್ಮೆ ಕೋಲಾವನ್ನು ಭಾರತದಿಂದ ಓಡಿಸಿದ ಜಾರ್ಜ್ ಫರ್ನಾಂಡಿಸರಿಗೆ ಹೃದಯ ಪೂರ್ವಕ ಬೆಂಬಲವಿತ್ತು, ಈಗಲೂ ಹಿಂದಕ್ಕೆ ಪಡೆಯದ ರಾಯರು ಮಾರ್ನುಡಿಯುವರು.

'ರಾತ್ರಿಯೂಟಕ್ಕೆ ಎಂತದು ಮಾಡ್ಲಿ?' ನನ್ನ ಪ್ರಶ್ನೆಗೆ 'ಏನೂ ಬೇಡ, ಮಧ್ಯಾಹ್ನ ಉಳಿದದ್ದರಲ್ಲಿಯೇ ಸುಖವಾಗಿ ಊಟ ಮುಗಿಸಬಹುದು' ನನಗೆ ಪ್ರಿಯವಾದ ಸೂಚನೆಯೇ ಬರುತ್ತದೆ. ವಾಚನಾಲಯದಿಂದ ತಂದ ಸಾಪ್ತಾಹಿಕ, ಮಾಸಿಕ, ವಿಶೇಷಾಂಕಗಳನ್ನು ತಿರುವಿ ಹಾಕುತ್ತ ಮೈಮರೆಯುತ್ತಿದ್ದರೆ, ರಾಯರು ತಾವು ತಾರುಣ್ಯ ದಲ್ಲಿ ಕ್ಲಿಕ್ಕಿಸಿದ ಫೋಟೋಗಳನ್ನು ನೋಡುವದರಲ್ಲಿ ತಲ್ಲೀನರು, ಗಡಿಯಾರ, ಭರದಿಂದ ಮುಂದೋಡುತ್ತಿದ್ದುದನ್ನು ತಟ್ಟನೆ ಗಮನಿಸಿ, ಕಿಚನ್ ಹೊಕ್ಕು ಅಡಿಗೆಯನ್ನು ಬಿಸಿ ಮಾಡುತ್ತೇನೆ. ಹಿಂಬಾಲಿಸಿ ಬಂದ ರಾಯರು, ಟೊಮ್ಯಾಟೊ ಸೌತೆಕಾಯಿ ಮೂಲಂಗಿ, ಕ್ಯಾರಟ್ ಯಾವುದಾದರೂ ಸಣ್ಣಗೆ ಹೆಚ್ಚಿ ಸ್ಯಾಲಡ್ ತಯಾರಿಸುತ್ತಾರೆ. ಅಥವಾ ದೊಡ್ಡ ದೊಂದು ಆಲೂಗಡ್ಡೆಯನ್ನೊ, ಬಲಿತ ಬಾಳೆಕಾಯಿಯನ್ನೊ ಪೀಲ್, ಮಾಡಿ ಸಮಾನ ವಾದ ದೊಡ್ಡ ಸ್ಲೈಸ್ ಮಾಡಿ ಮಸಾಲೆ ಸೇರಿಸಿ ಹುರಿದು 'ಫೋಡಿ' ತಯಾರಿಸುತ್ತಾರೆ ಸಾದಾ ಊಟಕ್ಕೆ ಫೋಡಿ, ಭರ್ಜರಿ ಔತಣದ ರೂಪ ಕೊಡುತ್ತದೆ. ಗೃಹಸ್ಥರಿಗೆ ಅನ್ನ ಕಡಿಮೆ ಬೀಳಬಾರದು ಎಂದು ಗೃಹಿಣಿಯೂ, ಮೊದಲೇ ಕಡಿಮೆ ತಿನ್ನುವ ಗೃಹಿಣಿಗೆ ಕೊರತೆಯಾಗಬಾರದು ಎಂದು ಗೃಹಸ್ಥನೂ ಎಚ್ಚರಿಕೆಯಿಂದ ಊಟ ಮಾಡುವದರಿಂದ, ಕೊನೆಗೂ ಉಳಿದ ಅನ್ನ – ಹುಳಿಗಳು ಪಾತ್ರೆಗಳ ತಳದಿಂದ ಅಣಕಿಸುತ್ತ ಇರುತ್ತವೆ !

ಚಿಕ್ಕ ಮಕ್ಕಳಂತೆ ರಾಯರಿಗೆ ಒಂಬತ್ತು ಗಂಟೆಗೇ ನಿದ್ರಾದೇವಿ ಪ್ರಸನ್ನಳಾಗುತ್ತಾಳೆ. ನಾನು ಸಮಜಾಯಿಸಿ ಹೇಳುತ್ತೇನೆ. 'ನೀವು ಬರಹಗಾರರು ! ರಾಜ್ಯದ, ದೇಶದ, ವಿದೇಶದ ಆಗು-ಹೋಗುಗಳ ಪೂರ್ಣತಃ ಪರಿಚಯ ಇಟ್ಟುಕೊಳ್ಳಬೇಕು. ವಾರ್ತೆಗಳ ನ್ನಾದರೂ ಕೇಳಿದ ಬಳಿಕ ಮಲಗಿಕೊಳ್ಳಿ' ನಿನ್ನ ಆಕಾಶವಾಣಿ ಸಮಾಚಾರದಲ್ಲಿ ಹೊಸದು ಏನು ತಾನೇ ಇರುತ್ತದೆ ? ಬೆಳಗಿನಿಂದ ರಾತ್ರಿಯ ತನಕ, ಒಂದೇ ಸಮಾಚಾರ, ಬೊಗಳಿದ್ದು...... 'ಹೋಗಲಿ, ದಿನಪತ್ರಿಕೆಯನ್ನಾದರೂ ಸರಿಯಾಗಿ ಓದಿ ಮುಗಿಸಿ' ಅಂದ್ರೆ ! ಮರದಲ್ಲಿ ಕುಳಿತ ಕಾಕಸಂಸಾರ, ಹಾಡುವ ಕೋಗಿಲೆ, ಮರಕುಟಿಗ, ಇಣಚಿ ಗಳನ್ನು ನೋಡುವದರಲ್ಲೆ ಸಮಯ ಕಳೀತಿರಿ !' ಪರಿತಪಿಸಿದರೆ 'ಕೂಚಭಟ್ಟನಂತೆ ಓದಿ

ಮರುಳಾದ ನೀನು ಬೆಳಿಗ್ಗೆ, ಮಧ್ಯಾಹ್ನ, ರಾತ್ರೆ, ಓದುತ್ತ ಎಲ್ಲವನ್ನು ಮರೆಯುತ್ತಿ !' ಎಂದು ಗೇಲಿ ಮಾಡುವರು. ಹತ್ತು ಗಂಟೆಯ ತನಕವಾದರೂ ಎಚ್ಚರವಿದ್ದು ಜೊತೆ ಕೊಡಿ ! ಎಂದರೆ 'ನಾನು ಯಾರೊಬ್ಬನಿಂದಲೂ ಒಂದು ಪೈಸಾ ಸಾಲ ಕೊಂಡಿಲ್ಲ! ನನಗೆ ಬೇಕಾದಾಗ ಮಲಗುವ ನಿದ್ರಿಸುವ ಸ್ವಾತಂತ್ರ್ಯವನ್ನು ಸಂಪಾದಿಸಿದ್ದೇನೆ !' ಎನ್ನುತ್ತ ಬೆಡ್‌ರೂಂ ಸೇರಿ ಬಿಡುವರು. ಒಂದೇ ನಿಮಿಷದಲ್ಲಿ ಗೊರಕೆಯ ಬಹುವಿಧಾನದ ನಿನಾದ ಹೊರಹೊಮ್ಮಲಾರಂಭಿಸುವದು.

ನಮ್ಮ ಏಕಮಾತ್ರ ಪುತ್ರನು ಕೋರಿಯನ್ ಕನ್ಯೆಯನ್ನು ವರಿಸಿದ್ದಕ್ಕಾಗಿ ಯಾರು ಹೊಣೆಗಾರರು ? ಎಂಬ ಬಗ್ಗೆ ಭಿನ್ನಾಭಿಪ್ರಾಯ ನಮ್ಮಿಬ್ಬರಲ್ಲಿ ಇದ್ದೇ ಇದೆ.'ನೀವು, ಇದು ಆಗಕೂಡದು ! ಎಂದು ಖಡಾ ಖಂಡಿತವಾಗಿ ಹೇಳಿದ್ದಿದ್ದರೆ, ಅವನು ಈ ಸಾಹಸಕ್ಕಿಳಿ ಯುವ ಎದೆಗಾರಿಕೆ ತೋರಿಸುತ್ತಲೇ ಇರಲಿಲ್ಲ !' ಎಂದು ಆಪಾದಿಸಲು ಯತ್ನಿಸಿದಾಗ 'ಮಕ್ಕಳೆಲ್ಲ ಹೇಳಿದಂತೆ ಕೇಳುವವರು ಇದ್ದರೆ, ನಮ್ಮ ಜಗತ್ತೇ ಭಿನ್ನವಾಗಿರುತ್ತಿತ್ತು, 'ಬೇಡ !' ವೆಂದಿದ್ದರೆ ಹಿಂದೆ ಆತ ಸ್ಕೂಟರ್ ಕೊಳ್ಳುತ್ತಿರಲಿಲ್ಲ, ಅಮೇರಿಕೆಗೆ ಹೋಗುತ್ತಿರಲಿಲ್ಲ, ಕೋರಿಯನ್ ಕನ್ಯೆಯ ಕೈ ಹಿಡಿಯುತ್ತಿರಲಿಲ್ಲ'...... ನಿರ್ವಿಕಾರವಾಗಿ ಹಿಂದಿನದೆಲ್ಲ ನೆನಪಿಸುವರಲ್ಲದೇ 'ನನ್ನಿಂದಾಗದ ಕೆಲಸವನ್ನು ನೀನು ನಿರ್ವಹಿಸ ಬೇಕಿತ್ತು !' ಅನ್ನುವರು. 'ನಿಮ್ಮಿಂದಾಗದ್ದು ನನ್ನಿಂದ ಸಾಧ್ಯವೆಂದು ನಂಬಿರುವಿರಲ್ಲ ಥ್ಯಾಂಕ್ಸ್ !' ನನ್ನ ಅಸಹಾಯಕ ವ್ಯಂಗ್ಯನುಡಿ ಇದ್ದದ್ದೇ ! ಹೋಗಲಿ ಬಿಡು. ಅವನು ಅಮೇರಿಕೆಯಲ್ಲಿ ನೆಮ್ಮದಿಯಾಗಿಯೇ ಇದ್ದಾನಲ್ಲ ? ನಾವಿಲ್ಲಿ ದಿನವೂ ಜಗಳಕ್ಕಿಳಿದರೂ ನೆಮ್ಮದಿಯಿಂದ ಇರಲಿಕ್ಕೆ ಕೊರತೆಯೇನೂ ಇಲ್ಲವಲ್ಲ ?' 'ಹೌದಲ್ಲ !' ನನಗರಿಯದೇ ಉದ್ಗಾರ ಬಾಯಿಂದ ಹೊರಬಿತ್ತು. ಇಬ್ಬರೂ ಮುಖ ಮುಖ ನೋಡಿ ನಕ್ಕೆವು. ಒಮ್ಮತದ ನಗುವಾಗಿತ್ತು,ಕೊನೆಗೊಮ್ಮೆ, ಹೀಗಿತ್ತು ಇತ್ತೀಚಿನ ಕದನ ದಿನಚರಿ.



# ೧೧. ನೋಟುಗಳ ನವೀಕರಣ

‘ಏನ್ಸಾಮಿ ! ಬದ್ನೆಕಾಯ್ ಒಂದ್ ಗುಡ್ಡೆ ಖರೀದಿ ಮಾಡಿ, ಒಂದು ರೂಪಾಯಿ ಬದ್ಲಿ ಹತ್ರುಪಾಯಿ ಕೊಟ್ಟಿದೀರಿ ! ಚಿಲ್ರೆ ಎಲ್ಲಿಂದ್ ಬರ್ಬೇಕ್ ? ಇನ್ನೇನಾದ್ರೂ ಕೊಂಡು ಕೊಳಿ ! ಆಮ್ಯಾಕೆ ಕಾಸು ಕೊಡಿ !’ ಗುಡ್ಡೆ ತರಕಾರಿ ಭಾಗ್ಯಳ ಸಲಿಗೆಯ ಗರ್ಜನೆ.

‘ಯಾವದೇ ತರಕಾರಿ ಇದ್ರೂ ನನ್ನ ಯಾಪಾರ ಒಂದ್ರೂಪಾಯ್ದೇ ! ನೀನೇ ಚಿಲ್ರೆ ಕೊಡ್ದಿದ್ರೆ ಬೇರೇವರು ಕೊಡ್ತಾರ್ಯೆ ? ಉದ್ರಿಯಾಪಾರ ಮಾಡಕೂಡದು ಅಂತ ನಮ್ಮಜ್ಜ ಹೇಳವ್ರೆ !’ ಗೊಣಗುತ್ತ ರಾಯರು ಕೈಚೀಲದಿಂದ ಬಾದರಾಯಣ ಕಾಲದ, ಹರಿದು ಚಿಂದಿಯಾದ ಒಂದು ರೂಪಾಯಿ ನೋಟನ್ನು ಕೈಗಿತ್ತರು. ‘ನೋಡಮ್ಮ, ಈ ನೋಟು ಹೋಗದಿದ್ರೆ, ನಾಳೆ ನಂಗೇ ವಾಪಸ್ ಮಾಡು’ ಎಂದರು. ‘ಹೋಗುತ್ತೆ ಸ್ವಾಮಿ !’ ಎಂದು ಹೆಚ್ಚಿನ ವಿಶ್ವಾಸದಿಂದ ಹೇಳಿದ ಭಾಗ್ಯಳ ಬಳಿ ಆ ರೂಪಾಯಿ ಒಂದು ದಿನವೂ ಇರುವ ಸಾಧ್ಯತೆ ಇಲ್ಲವೆಂದು ರಾಯರಿಗೆ ಗೊತ್ತು.

ಹರಿದ ನೋಟುಗಳ ಹೆಚ್ಚೆಚ್ಚು ಬೇಡಿಕೆಯ ಈ ದಿನಗಳಿಗೆ ತುಂಬ ಮೊದಲು, ರಾಯರ ಮನೆಯ ಖಜಾನೆಯಲ್ಲಿ, ಎಲ್ಲ ಕಡಿಮೆ ಡಿನಾಮಿನೇಶನ್‌ಗಳ ಹೊಸ ನೋಟುಗಳ ಸಂಗ್ರಹ, ಯಾವುದೇ ರಾಷ್ಟ್ರೀಕೃತ ಬ್ಯಾಂಕಿನ ಶಾಖೆಯಲ್ಲಿ ಇರವುದಕ್ಕಿಂತ ಹೆಚ್ಚಾಗಿತ್ತು ! ಒಂದು, ಎರಡು, ಐದು, ಹತ್ತರ ನೋಟುಗಳನ್ನು ಸದಾಕಾಲ ಕೈಗೆ ಎಟಕುವಂತೆ ಇಟ್ಟಿರುತ್ತಿದ್ದರು. ‘ಹೊಸ ಗರಿಗರಿ ನೋಟುಗಳನ್ನು ಸಂಗ್ರಹಿಸಿ, ಬಡ್ಡಿ ಸಿಗದ ಠೇವಣಿ ಮಾಡಿದ್ದಿರಿ !’ ಎಂಬ ಲೇವಡಿಗೆ ಗುರಿಯಾಗಿದ್ದರು. ಅದರ ಲಾಭ ಕ್ರಮೇಣ ನನಗೇ ಸಿಕ್ಕಿತ್ತು; ಬಸ್ ಸಾರಿಗೆಗೆ, ವಾಚನಾಲಯದ ದೈನಂದಿನ ಓದಿಗೆ ‘ಆಟೋಗೆ’ ತರಕಾರಿ ಹಣ್ಣು ಖರೀದಿಗೆ. ಅರ್ಥಾತ್ ‘ಚಿಲ್ರೆ ಇಲ್ಲ !’ ಅನ್ನಿಸಿಕೊಂಡು ಅವರುಗಳೆಲ್ಲ ಗಟ್ಟಿನೋಟು ಒಳಹಾಕುವ ಸಂದರ್ಭಗಳು ನನಗೆ ಬರಲೇ ಇಲ್ಲ ! ಯಜಮಾನರಂತೂ ಯಾವಾಗಲೂ ಚಿಲ್ರೆ ಕೊಡವುದರಲ್ಲಿ ಖ್ಯಾತಿ ಗಳಿಸಿದವರು.

ಸವತೆ ಕಾಯಿಯವಳು, ‘ಚಿಲ್ರೆ ಇಲ್ದಿದ್ರೆ ಮಂಕರೀಲಿ ಇಟ್ಹೋಗಿ !’ ಎಂದು ಇತರರಿಗೆ ಆಜ್ಞಾಪಿಸಿದರೆ ರಾಯರು ಕೊಟ್ಟ, ಹೊಸ ನೋಟನ್ನು ಕಂಡು ಪ್ರಸನ್ನಳಾಗಿ ಕಣ್ಣು, ಹಣೆಗೆ ಒತ್ತಿ ‘ದಿನಾಗ್ಲೂ ಇಂಥಾ ಹೊಸಾನೋಟು ತನ್ನಿ’ ಕಡಿಮೆ ಬೆಲೆಗೆ ಹಾಕಿ ಕೊಡ್ತೀನಿ !’ ಎಂದು ವಾಗ್ದಾನ ಮಾಡಿದಳು. ತೆಂಗಿನಕಾಯಿಯವನು ಕಣ್ಣು ಅರಳಿಸಿ, ‘ಇಂಥಾ ಐದು ರೂಪಾಯಿ ನೋಡ್ದೆ ಯಾವ ಕಾಲ ಆಯ್ತೋ !’ ಎಂದು ಒಳ ಜೇಬಿಗೇ ಸೇರಿಸಿದ. ಹಣ್ಣಿನವನು ಇನ್ನಷ್ಟು ಹಣ್ಣು ಕೊಂಡುಕೊಳ್ಳಿ ! ಹೊಸ ನೋಟು ಕೊಡಿ !

ನಮ್ಮೆಂಗಸ್ರು ಖುಷಿ ಪಡ್ತಾರೆ! ಎಂದು ಉದ್ಗರಿಸುವನು. 'ಎರಡರ ನೋಟು ಕಂಡೇ ಇಲ್ವೆ ? ಹಸಿ ಮೆಣಸಿನಕಾಯಿ ಪೂರಾ ನಿಮ್ಗೇ ಹಾಕ್ತೀನಿ ! ಆ ಕಂತೆ ನಂಗೇ ಕೊಟ್ಬಿಡಿ ! ತಿಂಗಳಾಪೂರ್ತಿ ದುಡ್ಡು ಕೊಡ್ಬೇಡಿ!' ಗಂಗಮ್ಮ ಗೋಗರೆಯುತ್ತಾಳೆ. ಅರವತ್ತು ದಾಟಿದ ಪತಿ–ಪತ್ನಿಯರು ಎಷ್ಟು ತಾನೆ ತರಕಾರಿ ಹಣ್ಣು ಖರೀದಿಸಿ ತಿಂದು ಜೀರ್ಣಿಸಿಕೊಂಡಾರು ? ಕಡಿಮೆ ತೂಕದ ತರಕಾರಿ ಒಯ್ಯುವವರಿಗೆ ಸೊಪ್ಪು ಹಾಕದ ತರಕಾರಿಯವರು, ರಾಯರಿಗೆ ವಿಶೇಷ ರಿಯಾಯತಿ ತೋರುವರು, ಎಂಟಾಣೆ ಕೊತ್ತುಂಬರಿ ಸೊಪ್ಪು, ರೂಪಾಯಿಗೆ ಲಿಂಬೆ ಹಣ್ಣು, ನೂರು ಗ್ರಾಂ ಮೆಣಸಿನಕಾಯಿ ಇನ್ನೂರು ಗ್ರಾಂ ಗೋರಿಕಾಯಿಗೆ ತೊಂದರೆಯಿರಲಿಲ್ಲ. ಹೊಸನೋಟಿನ ಪ್ರಭಾವ !

ಹೊಸ ನೋಟುಗಳ ಸಂಗ್ರಹ ಭರದಿಂದ ಕುಗ್ಗಿತು. ಹಳೇ ಮುದುರಿದ ನೋಟುಗಳನ್ನು ಸರಿಪಡಿಸುವಲ್ಲಿ ಹೊಸತಂತ್ರ ಕೈಕೊಂಡರು. ನಮ್ಮ ಜನ, ಹಣಕ್ಕೆ ತೋರುವ ಮರ್ಯಾದೆ ಗೊತ್ತಲ್ಲ? ಸೀರೆ ಸೆರಗಿನಲ್ಲಿ ಮುದುಡಿ ಮಾಡಿ ಗಂಟಿಕ್ಕುವರು. ರವಿಕೆಯೊಳಗೆ ಭದ್ರವಾಗಿಸಿ, ಬೆವರಿನ ಸ್ನಾನ ಮಾಡಿಸುವರು. ಬಸ್ ಸಾರಿಗೆಯ ಕಂಡಕ್ಟರ್, ಬೆರಳುಗಳ ಸಂದಿಯಲ್ಲಿಟ್ಟು ಸಾಧ್ಯವಿದ್ದಷ್ಟು ಮಡಿಕೆ ಮಾಡುವರು. ಕಚ್ಚೆಯೊಳಗೆ ನೋಟುಗಳನ್ನು ಇಡುತ್ತಾರೆಂದು ಕೇಳಿದೀನಿ ! ತೆಳುಕಾಗದದ ನೋಟುಗಳು ಅದೆಷ್ಟು ಕಾಲ ಈ ಎಡ ಬಿಡದ ಹಿಂಸೆಯನ್ನು ಸಹಿಸಿಯಾವು ? ಏಟು ತಿಂದ ಬೀದಿ ನಾಯಿಯಂತೆ ಕೈಕಾಲು ಮುರಿದುಕೊಂಡು ಮುದುಡಿ, ಮುದ್ದೆಯಾದ ಹಳೇ ನೋಟುಗಳ ಬಗ್ಗೆ ಇನ್ನಿಲ್ಲದ ಕನಿಕರ ರಾಯರಿಗೆ, ಅವಕ್ಕೆ ಹೊಸ ಜೀವಕಳೆ ತುಂಬಲು ನಿರ್ಧರಿಸಿದರು.

ಈಗ ರಾಯರ ಸಂಗ್ರಹದಲ್ಲಿ ಲೆಕ್ಕವಿಲ್ಲದಷ್ಟು ಗುರುತು ಹಿಡಿಯಲಾರದಷ್ಟು ಹಳೇ ಹರಿದ ಚಿಂದಿಯಾದ ನೋಟುಗಳು ಕಂಡುಬರಲಾರಂಭಿಸಿದವು. ಗರಾಜಿನಲ್ಲಿ ವಾಹನಗಳ ಸ್ವಚ್ಛತೆಗೆ ಬಳಸುವ ಬಟ್ಟೆಯೊಂದಿಗೆ ಸ್ಪರ್ಧಿಸುವಂಥವೇ ಬಹು ಸಂಖ್ಯೆಯಲ್ಲಿದ್ದವು. ಕಾಗದ ತಯಾರಿಕೆಯ ಹಂತಗಳನ್ನು ರಾಯರು ಅಭ್ಯಸಿಸಿದರು. ಹೆಚ್ಚಿಗೆ ತಾಳಿಕೆಯನ್ನು ಕಾಗದಕ್ಕೆ ನೀಡುವ ರಸಾಯನಗಳನ್ನು ಅರಿತುಕೊಂಡರು. ಸೋಪಿನ ವಿವಿಧ ಪ್ರಕಾರಗಳಿಂದ ನೋಟುಗಳ ಶುಚೀಕರಣ ಕೈಕೊಂಡರು. ನಾಜೂಕಿನಿಂದ ಅವನ್ನು ಹಿಡಿಯಲು ತರಬೇತಿ ಬೇಕೆಂದು ಹತ್ತಿರದ 'ಡಯಾನಾ ಬ್ಯೂಟಿ ಪಾರ್ಲರ್'ದಲ್ಲಿ ಕೈಬೆರಳು ಉಗುರುಗಳನ್ನು ನಯಪಡಿಸಿ ಅಂದ ಚೆಂದ ಹೆಚ್ಚಿಸುವ ಬಗ್ಗೆ ತಿಳಿದುಕೊಂಡರು.

ಮನೆಯ ಹೆಚ್ಚುವರಿ ಬಾತ್‌ರೂಂ, ಲ್ಯಾಬ್ ಆಗಿ ಪರಿಣಮಿಸಿತು. ಸೋಪ್ ನೀರಿನಲ್ಲಿ ಕೆಲನೋಟು ಹಾಕಿದಾಗ ಕರಗಿಯೇ ಹೋದವು ! ಆದರೂ ಎದೆಗೆಡದೇ ಅಷ್ಟು ಛಿನ್ನವಾಗದವನ್ನು ಸೇರಿಸಿದಾಗ, ಕೊಳೆ ಕಳೆದುಕೊಂಡ ಕೆಲವೊಂದು ನೋಟುಗಳು ನಿಜಸ್ವರೂಪ ಪಡೆದಾಗ ಹಿಗ್ಗಿ ಹೀರೇಕಾಯಾದರು. ಕೂಗಿ ನನ್ನನ್ನು ಕರೆದು ತನ್ನ ಪ್ರಯೋಗದ ಫಲಶ್ರುತಿ ಸಾರಿದರು.

ನೀರು ಹೀರಿಕೊಂಡವುಗಳು ಬಿಸಿಲಿಗೆ ಒಣಗಿಸಿದರೆ ತಿರುಗಿ ಮುದುಡಿಯಾಗುವವು. ಹೀಗಾಗಿ ನೆರಳಿನಲ್ಲಿ ಫ್ಯಾನಿನ ಅಡಿಯಲ್ಲಿ ಆರ್ದ್ರತೆ ಹಿಂಗಿಸಿದರು. ಬ್ಲಾಟಿಂಗ್ ಪೇಪರ್‌ಗಳ ನಡುವಿಟ್ಟು ನೋಡಿದರು. ಇದರಿಂದ ತೃಪ್ತರಾಗದೇ ಜರ್ಮನ್ ತಯಾರಿಕೆಯ ಛಾಯಾಚಿತ್ರಗಳನ್ನು ಒಣಗಿಸುವ ಯಂತ್ರವನ್ನು ಹೆಚ್ಚಿನ ಹಣ ಸುರಿದು ತಂದರು. ಈ ಗ್ಲೇಝರ್ ಯಂತ್ರದಲ್ಲಿ ಹಳೇ ನೋಟುಗಳೆಲ್ಲ ಹೊಸ ರೂಪದ ಗರಿಗರಿ ಮಾರ್ಪಾಡು ಪಡೆದಾಗ ಪ್ರೇಯಸಿಯ ಛಾಯಾ ಚಿತ್ರಗಳನ್ನು ಪಡೆದ ತರುಣನಷ್ಟು ಖುಷಿಪಟ್ಟರು!

ಆದರೆ ಹಲವಾರು ಕಲೆ, ದಾಗುಗಳು ತಮ್ಮ ಅಸ್ತಿತ್ವ ಬಿಟ್ಟುಕೊಡಲು ತಯಾರ್ ಇರಲಿಲ್ಲ! ಮುದ್ರಿತ ಅಕ್ಷರಗಳು, ನಂಬರುಗಳನ್ನು ಕಳೆದುಕೊಳ್ಳದಂತೆ ಕಲೆಗಳನ್ನು ಹೋಗಲಾಡಿಸುವುದು ದೊಡ್ಡ ತಲೆ ನೋವಾಯಿತು. ರಸಾಯನ ಶಾಸ್ತ್ರದ ಅಧ್ಯಯನ ಪ್ರಾರಂಭಿಸಿದರು. ಹತ್ತಿರದಲ್ಲಿದ್ದ ಟಾಟಾ ಇನ್‌ಸ್ಟಿಟ್ಯೂಟಿಗೆ ಧಾವಿಸಿ ಸ್ನಾತಕೋತ್ತರ ವಿಭಾಗದಲ್ಲಿ ನಡೆಯುತ್ತಿದ್ದ ಪ್ರಯೋಗಗಳನ್ನು ಪರಿಚಯಿಸಿಕೊಂಡರು. ಹಲವು ಕೈಪಿಡಿಗಳೊಂದಿಗೆ ಗುದ್ದಾಡಿದರು. ಬ್ಯುರೆಟ್ ಪಿಪೆಟ್, ಕೊನಿಕಲ್ ಫ್ಲಾಸ್ಕ್ ಪೆಟ್ರಿಡಿಶ್ ಮುಂತಾದ ಉಪಕರಣಗಳಿಗೆ ಆರ್ಡರ್ ಕೊಟ್ಟರು. ಸೂಕ್ಷ್ಮದರ್ಶಕ ಹಾಗೂ ಛಾಯಾ ಚಿತ್ರ ತೆಗೆಯುವ ಅತ್ಯಾಧುನಿಕ ಕ್ಯಾಮರಾ ಖರೀದಿಯ ವ್ಯವಸ್ಥೆಯೂ ಆಯಿತು.

ಈಗ ರಾಯರಿಗೆ ಬಿಡುವೇ ಇಲ್ಲದಾಯಿತು. ಹರಕು ಚಿಂದಿಯಾದ ನೋಟುಗಳ ನವೀಕರಣಕ್ಕೆ ಯಾವತ್ತೂ ವೇಳೆ ಮೀಸಲು! ಸಾಲದ್ದಕ್ಕೆ ಎಲ್ಲೆಲ್ಲೂ ಇಂಥವುಗಳ ತೀವ್ರ ಅಭಾವವೆನಿಸಲಾರಂಭಿಸಿತ್ತು!! ಈಗ ಕಮಿಷನ್ ಕೊಟ್ಟು ಹಳೇನೋಟುಗಳನ್ನು ಪಡೆಯಲಾರಂಭಿಸಿದರು. ಹಳೆಗಿರಾಕಿಯೆಂದು ಗೌರವಕ್ಕೆ ಪಾತ್ರರಾದ ರಾಯರನ್ನು ಎಲ್ಲರೂ ಸಂಶಯದಿಂದ ನೋಡಲಾರಂಭಿಸಿದರು. ಖೋಟಾ ನೋಟುಗಳ ಚಲಾವಣೆಗೆ ಈ 'ಕುತಂತ್ರ' ಎಂದರು! ಹೊಸ ನಾಣ್ಯ ಅಥವಾ ಹೊಸನೋಟು ಕೊಟ್ಟು ಮೇಲೆ ಕಮೀಷನ್ನೂ ಕೊಟ್ಟು ಹಳೇ ಚಿಂದಿ ನೋಟುಗಳನ್ನು ಪಡೆಯುವ ಮನುಷ್ಯನು, ವಿಶ್ವಾಸಾರ್ಹನು ಹೇಗಾದಾನು ? ರಾಯರೊಂದಿಗೆ ವ್ಯವಹಾರವನ್ನೇ ನಿಲ್ಲಿಟ್ಟರು. ಕೆಲವರು ಪೊಲೀಸರಿಗೆ ದೂರು ಕೊಟ್ಟರು. ಆದರೆ ನಮ್ಮ ಮಂದಗಾಮಿ ಆರಕ್ಷಕ ದಳದವರು ಅದನ್ನು ಗಮನಕ್ಕೆ ತಂದುಕೊಳ್ಳಲೇ ಇಲ್ಲ! ನೋಟುಗಳೆಲ್ಲ ರಾಯರಿಂದ ನವೀಕೃತವಾದವುಗಳೆಲ್ಲ 'ಖೋಟಾ' ಎಂದು ಸಾಬೀತು ಪಡಿಸುವ ತನಕ ಏನು ಮಾಡುವ ಹಾಗೆ ಇರಲಿಲ್ಲ!

ಈ ಮೊದಲು ಜಿರಳೆ, ಕಪ್ಪೆ, ಹಾವು, ಚೇಳುಗಳನ್ನು ಫಾರ್ಮಲಿನ್‌ದಲ್ಲಿ ಕಾಯ್ದು ಇರಿಸುತ್ತಿದ್ದ ರಾಯರು ಆಮ್ಲ, ಹೊಗೆಗಳ ದುರ್ವಾಸನೆ ಮನೆ ತುಂಬ ಹರಡುವಂತೆ ಮಾಡಿದ್ದರಿಂದ ಅವರ ಹೊಸ ಹಾಬಿಯ ಕುರಿತು ಜಿಗುಪ್ಸೆಯುಂಟಾಯಿತು. ಆದರೂ ಅವರ ಪ್ರಯೋಗಶೀಲತೆಯಲ್ಲಿ ಕುತೂಹಲವೆನಿಸಿ, ಒಂದು ದಿನ ಅವರ ಪ್ರಯೋಗಾಲಯ (ಉಪಯೋಗಿಸದ ಬಾತ್ ರೂಂ) ದಲ್ಲಿ ಸ್ಟೂಲೊಂದನ್ನು ಎಳೆದು ಆಸೀನ

ಳಾದೆ. ರಾಯರು ಗೆಲುವಾಗಿ, 'ನೀನಾಗಿ ಆಸಕ್ತಿವಹಿಸಿದ್ದು ಒಳ್ಳೆಯದಾಯಿತು. ಅಲ್ಪಾವಧಿಯಲ್ಲಿ ನೋಟುಗಳ ನವೀಕರಣ ನಿರೀಕ್ಷೆ ಮೀರಿ ಯಶಸ್ಸು ಕೊಟ್ಟಿದೆ ! ಈ ನೋಟು ನೋಡು ! ಮುದ್ರಣಾಲಯದಿಂದ ಹೊರಬಿದ್ದು ಕಡಿಮೆಯೆಂದರೆ ಸಹಸ್ರಾರು ಕೈಗಳನ್ನು ದಾಟಿ ನನ್ನ ಬಳಿ ಬಂದಿದೆ ! ಎಷ್ಟು ಜನರ ಕೈಗಳ ಕಲೆ ಇದಕ್ಕಿರಬಹುದು ? ಎಣ್ಣೆ, ಬೆಣ್ಣೆ, ನಸ್ಯ, ತುಪ್ಪ, ಸಿಂಬಳ, ವೀಳ್ಯದ ಪೀಕು, ಸುಣ್ಣ, ಚಹಾ, ಕಾಫಿ ಮೊಸರು ಮೊಟ್ಟೆ, ಮನೆ, ಬೂದಿ, ಬಣ್ಣ ವಾರ್ನಿಶ್, ಪೇಂಟ್, ಅತಿಮುಖ್ಯವಾಗಿ ಎಂಜಲು, ಎಲ್ಲರ ಕೊಡುಗೆ ಇದರ ಮೇಲೆ ಮೂಡಿದೆ ! ಹೀಗಾಗಿ ನೋಟಿಗೆ ಬಳಿದುಕೊಂಡ ಪದಾರ್ಥ ಮೂಲತಃ ಯಾವುದು ? ಎಂಬುದನ್ನು ಮೊದಲಿಗೆ ನಿರ್ಧರಿಸಬೇಕಾಗುತ್ತದೆ ! ಚಾಕುವಿನಿಂದ ಕೆರೆದು ಸೂಕ್ಷ್ಮದರ್ಶನದಲ್ಲಿ ಪರೀಕ್ಷಿಸಿ, ಘ್ರಾಣಿಸಿ, ಒಂದು ತೀರ್ಮಾನಕ್ಕೆ ಬಂದಾಗಲೇ ಯಾವ ರಾಸಾಯನಿಕ ಬಳಸುವುದೆಂದು ನಿರ್ಧರಿಸಲು ಸಾಧ್ಯ !' ನನ್ನಲ್ಲಿ ಅರಿವು ಮೂಡಿಸಲು ಯತ್ನಿಸಿದರು.

'ವ್ಯಾಕ್ ! ಬಟ್ಟೆಗಳ ಮೇಲಿನ ಕಲೆಗಳನ್ನು ತೆಗೆದು ಹಾಕುವುದೇ ಪ್ರಯಾಸ ! ಕಾಗದ ಅದೂ ಕೆಟ್ಟ ನೋಟುಗಳ ಎಂಜಲು, ಪೀಕದ ಕಲೆ ತೆಗೆಯುವುದು, ನಿರರ್ಥಕ ಕೆಲಸವಲ್ಲವೆ ?' ತಡೆಯಲಾರದೇ ಕೇಳಿದೆ.

'ನಿರರ್ಥಕವಲ್ಲ ! ಕಷ್ಟವೂ ಅಲ್ಲ ! ಬೆಚ್ಚಗಿನ ನೀರಲ್ಲಿ ಶೇಕಡಾ 5 ಬೋರಾಕ್ಸ ಸೇರಿಸಿ, ನೋಟನ್ನು ಹರವಿ ಅದರಲ್ಲಿ ಹಾಕಿ ಹರಿಯುವ ನೀರಿನಲ್ಲಿ ತೊಳೆದರೆ, ದಾಗುಗಳೆಲ್ಲ ಹೇಳ ಹೆಸರಿಲ್ಲದೇ ಮಾಯವಾಗಿ ಬಿಡುತ್ತವೆ !' ಗಂಭೀರವಾಗಿ ರಾಯರೆಂದರು. 'ಚಿಕ್ಕಮಕ್ಕಳು, ಅವರಂತೆ ಹಾಲು ಕುಡಿಯುವ ನಿಮ್ಮಂಥವರು ಚೆಲ್ಲಿದ ಹಾಲಿನ ಕಲೆಗಳು ಅಂಟಿಕೊಂಡರೆ ?' ನಾನು ವ್ಯಂಗ್ಯವಾಗಿ ಕೇಳಿದರೂ, ಶ್ರೀಮದ್ ಗಾಂಭೀರ್ಯದಿಂದ, 'ಚಹ, ಕಾಫಿ, ಹಾಲು ಸುಲಭ ಪೇಯಗಳೆನಿಸಿದರೂ, ಅವುಗಳ ದಾಗು ತೆಗೆಯುವುದು ಸುಲಭವಲ್ಲ ! ಬೆಚ್ಚಗಿನ ಸೋಪ್ ನೀರಿನಲ್ಲಿ ತೊಳೆಯಬೇಕು. ಬಳಿಕ ಮಿತವಾದ ಕಾರ್ಬನ್ ಟೆಟ್ರಾಕ್ಲೋರಾಯಿಡ್ ಆನಂತರ ತಿಳಿಯಾದ ಅಮೋನಿಯ ದ್ರಾವಣದಿಂದ ಪುನಃ ಪುನಃ ತೊಳೆಯಬೇಕಾಗುತ್ತದೆ !' ಎಂದು ಹೇಳಿದರು.

'ಲಿಪ್‌ಸ್ಟಿಕ್, ನೇಲ್‌ಪಾಲಿಶ್ ಬೂಟಿಪಾಲಿಶ್ ಕಲೆಗಳಿದ್ದರೆ ?' ನನ್ನ ತುಂಟ ಪ್ರಶ್ನೆ.

'ಟೆಟ್ರಾಕ್ಲೋರಾಯಿಡ್‌ದಲ್ಲಿ ನೆನೆಹಾಕಿ, ಎಮಾಯಿಲ್ ಎಸೆಟೇಟ್ ಟರ್ಪೆಂಟಾಯಿನ್.....'

ನನ್ನ ಸಹನೆ ಮೀರಿತು. 'ಅಲ್ರೀ ! ಒಂದು ಬಿಡಿಕಾಸಿನ ಲಾಭವಿಲ್ಲದ, ಸರಕಾರ ಗಮನವನ್ನೇ ಕೊಡದ ಗಲೀಜು ನೋಟುಗಳ ಚಲಾವಣೆಗಾಗಿ ನಿಮ್ಮ ಅಮೂಲ್ಯ ವೇಳೆ ಮತ್ತು ವೈಜ್ಞಾನಿಕ ಮಾಹಿತಿ ಹಾಳು ಮಾ....' ಮುಂದೆ ಮಾತು ಹೊರಡಲಿಲ್ಲ. ರಾಯರು ಭಾವಾವಿಷ್ಟರಾಗಿದ್ದರು. ಕಣ್ಣೊರಸಿಕೊಂಡರು. ನಾನು ಸುಮ್ಮನಿದ್ದುದರಿಂದ ಮಾತು

ಮುಂದರಿಸಿದರು. 'ಈ ನೋಟುಗಳಲ್ಲಿ ಅನೇಕಾನೇಕ ರೋಗಾಣುಗಳು ಹರಡುವಲ್ಲಿ ಸಕ್ರಿಯವಾಗಿ ಭಾಗವಹಿಸುತ್ತವೆ. ನಮ್ಮವರು ವೈಯಕ್ತಿಕ, ಸಾರ್ವಜನಿಕ ಸ್ವಚ್ಛತೆಯತ್ತ ಗಮನಹರಿಸುವುದಿಲ್ಲ ! ಟಾಯ್‌ಫಾಯ್ಡ್, ಕಾಲರಾ, ಕ್ಷಯ, ಕುಷ್ಟರೋಗ, ಪ್ಲೈಲಿ ಮುಂತಾದ ರೋಗಗಳ ಬ್ಯಾಕ್ಟೀರಿಯ, ಫಂಗಸ್ ಕ್ರಿಮಿಗಳು ನೋಟುಗಳ ಅದಲು ಬದಲಾವಣೆಯಿಂದ ಪ್ರಸರಣವಾಗುವ ಸಾಧ್ಯತೆ ಇದ್ದೇ ಇದೆ. ಈ ಕಳಪೆ ನೋಟುಗಳಿಂದ ರೋಗಾಣುಗಳು ವಿಂಗಡಿಸಿ ಬೆಳೆಯಿಸಿ, ಆಳವಾಗಿ ಅಭ್ಯಸಿಸಿದರೆ ನಾಲ್ಕೈದು ವಿದ್ಯಾರ್ಥಿಗಳಾದರೂ ಆಯಾ ರೋಗ ಪ್ರಕರಣದ ಕುರಿತು ಡಾಕ್ಟರೇಟ್ ಪಡೆಯಬಹುದಾಗಿತ್ತು!' ಮರುಕ ತುಂಬಿ ಸುಮ್ಮನಾದರು.

'ವಿಜ್ಞಾನ ವಿಚಾರ ಹಾಗಿರಲಿ ! ನಿಮ್ಮ ಈ ಆಳವಾದ ಅಧ್ಯಯನದಿಂದ ಸಾಹಿತ್ಯವನ್ನು ಸಿರಿವಂತಗೊಳಿಸಲು ಸಾಧ್ಯವಿಲ್ಲವೇ ?' ವಿಷಯಾಂತರ ಮಾಡಲು ಯತ್ನಿಸಿದೆ.

'ಓಹೋ ! ಆಗದೇ ಏನು ? ಬ್ಯಾಂಕಿನವರು, ಅಂಚೆ ಖಾತೆಯವರು, ಕೆ. ಇ. ಬಿ. ಯವರು, ಅವುಗಳ ಮೇಲೆ ಮೊಹರು ಒತ್ತುವುದು, ಅಂಕಿ, ಸಂಖ್ಯೆಗಳನ್ನು ಬರೆಯುವುದು ಸಾಮಾನ್ಯವಲ್ಲವೇ..... ಆದರೆ ಕಲ್ಪಿಸಿಕೋ ! ರಸಿಕನ ಕೈಗೆ ಸಿಕ್ಕ ನೋಟು.....

....ಸಾಹಿತ್ಯ ಸಾಧನೆಗೆ ಪ್ರಚೋದನೆ ನೀಡದೆ ಇದ್ದೀತೇ ? ತನ್ನ ಕೈಗೆ ಎಟುಕದ ಕನ್ಯೆಗೆ ಬಾಣಚುಚ್ಚಿದ ಹೃದಯವನ್ನು ನೋಟಿನ ಮೇಲೆ ಬರೆದು ಅವಳ ಕೈಗೆ ಸಿಗುವಂತೆ ಎಸೆಯ ಬಹುದು. ಕೆಲವು ವಿಕೃತ ಕಾಮಿಗಳು, ಸ್ತ್ರೀ ಪುರುಷ ಮರ್ಮಾಂಗಗಳನ್ನು ಬರೆಯು ತ್ತಾರೆ. ಸಾಯಿ ಭಕ್ತರು, ತಿರುಪತಿ ತಿಮ್ಮಪ್ಪನ ಭಕ್ತರು, ಜಯಜಯಕಾರ ಬರೆಯುತ್ತಾರೆ. ಖರ್ಚಿಲ್ಲದೇ ಕೆಲವರು ತಮ್ಮ ಕುಲದೇವತೆಗೆ ನಮಸ್ಕಾರಗಳನ್ನು ನೋಟಿನ ಬಿಳಿ ಭಾಗದ ಮೇಲೆ ಬರೆದು ಭಕ್ತಿಪ್ರದರ್ಶನ ಮಾಡುತ್ತಾರೆ. ಪ್ರಿಯತಮೆಯ ಹೆಸರುಗಳನ್ನು ಬರೆಯುತ್ತಾರೆ. ಹಿಂದಿ, ಬಂಗಾಲಿ, ಇಂಗ್ಲೀಷ್, ಭಾಷೆಗಳ ಬರಹ ಕಣ್ಣಿಗೆ ಕಾಣುತ್ತದೆ. ಅಧಿಕ ಪ್ರಮಾಣದಲ್ಲಿ ಬೆಂಗಳೂರಿನಲ್ಲಿ ಬೇರು ಬಿಡುತ್ತಲಿರುವ ಮಲಯಾಳಿಗಳು, ತಮಿಳರ ಕೈಬರೆಹ ಹೆಚ್ಚು ಕಾಣಸಿಗುತ್ತದೆ ! ಗೊತ್ತಾಗದ ಲಿಪಿಗಳು ಇರುವ ನೋಟು ಗಳನ್ನು ಅರ್ಥೈಸಲು ಪ್ರತ್ಯೇಕವಾಗಿ ತೆಗೆದು ಇಟ್ಟಿದ್ದೇನೆ. ನೂರು ರೂಪಾಯಿಯ ನೋಟೊಂದರ ಮೇಲೆ ಕೆಂದುಟಿಗಳ ಕಲೆ ಇದೆ ! ಶ್ರೀಮಂತ ಕನ್ಯೆಯೋರ್ವಳು ಬಡವನನ್ನು ಬಲೆಗೆ ಹಾಕಿಕೊಳ್ಳಲು ಇದನ್ನು ಬಳಸಿರಬಹುದೇ ? ಎಂಬ ಗುಮಾನಿ ನನ್ನದು !' ನೋಟುಗಳಿಂದ ಎತ್ತಿ ಹಿಡಿದ ಟಿಪ್ಪಣಿಗಳ ಕೈಪಿಡಿಯನ್ನೇ ನನ್ನ ಕೈಗಿತ್ತರು, 'ಕೊಳೆ ಕಳೆದುಕೊಂಡು ನಿಂತ ನೋಟುಗಳು, ಭಾರತೀಯ ಸಮಾಜದ ಅಶಾಂತ, ವಿಕೃತ ಮನಸ್ಸಿನ ಒಳ ನೋಟಗಳಿಗೆ ಕನ್ನಡಿಯಂತಿವೆ !' ತಮ್ಮ ಹೊಸ ಸಂಶೋಧನೆಯನ್ನು ಪರಿಚಯಿಸಿದರು.

'ನಿಮ್ಮ ಈ ಅಪೂರ್ವ ಶೋಧಗಳು ಪಾಶ್ಚಾತ್ಯ ದೇಶದಲ್ಲಿ ನಡೆದಿದ್ದರೆ, ಅದೆಷ್ಟು ಲಾಭ ತಂದು ಕೊಡುತ್ತಿದ್ದವೋ ! ನಮ್ಮವರಿಗೆ ಮಾತ್ರ ಯಾತರದ್ದೂ ಬೆಲೆ ಇಲ್ಲ...' ಎನ್ನುತ್ತಿದ್ದಂತೆ ಬಾಗಿಲಿನ ಕರೆಗಂಟೆ ಜೋರಾಗಿ ಕಿರುಚಿಕೊಂಡಿತು. ಹೊರಗೆ ಹೋಗಿ,

ಆಗಂತುಕರಿಗೆ ಸೌಜನ್ಯದ ಕೊರತೆಯ ಕುರಿತು ಭಾಷಣ ಬಿಗಿಯಬೇಕೆಂದರೆ ಎದುರಿಗೆ ಪೊಲೀಸ್ ಸಮವಸ್ತ್ರಧಾರಿಗಳ ಪಡೆಯೇ ನಿಂತಿತ್ತು! ಮುಖಂಡನು ತನ್ನ ಪರಿಚಯ ಪತ್ರ ತೋರಿಸಿ 'ನಾವು ಭಾರತ ಸರ್ಕಾರದ ಗುಪ್ತಪಡೆಯವರು ! ಇಂದಿನ ದಿನಗಳಲ್ಲಿ ದಕ್ಷಿಣ ರಾಜ್ಯಗಳಲ್ಲಿ ಖೋಟಾನೋಟುಗಳ ಸಂಖ್ಯೆಯನ್ನು ದೊಡ್ಡ ಪ್ರಮಾಣದಲ್ಲಿ ಕಂಡು ಹಿಡಿಯಲಾಗಿದೆ. ಚೆನ್ನೈ, ತ್ರಿವೇಂದ್ರಮ್ ಮತ್ತು ಬೆಂಗಳೂರುಗಳಲ್ಲಿ ಈ ನೋಟುಗಳ ಮುದ್ರಣ ಹಾಗೂ ವಿತರಣೆಯ ಜಾಲವೇ ಇದೆ !' ಎಂದು ದಿಲ್ಲಿ ಆಫೀಸಿನವರು ತಿಳಿಸಿ ವಿವರವಾದ ತನಿಖೆ ನಡೆಸಲು ಆಜ್ಞೆ ಹೊರಡಿಸಿದ್ದಾರೆ. ನಮ್ಮ ಫೈಲ್‌ಗಳನ್ನು ಪರಿಶೀಲಿಸಿದಾಗ ಮಲ್ಲೇಶ್ವರಂ ತರಕಾರಿ ಸಹಕಾರಿ ಸಂಘದವರು ಕಾಮತ್ ಎಂಬವರ ಕುರಿತು ಹಿಂದೆ ದೂರು ಕೊಟ್ಟದ್ದು ಕಂಡಿತು. ಅಂತೆಯೇ ಝಡ್ತಿ ವಾರಂಟು ಇಕೋ ಸರಕಾರವು ಬಿಡುಗಡೆ ಮಾಡಿದೆ !' ಕಾಗದ ಪತ್ರಗಳನ್ನು ಕೈಗಿತ್ತು, ಪಡೆಯೊಂದಿಗೆ ಮನೆ ಯೊಳಗೆ ನುಗ್ಗಿಯೇ ಬಿಟ್ಟರು !

ಬಂದವರಿಗೆ ನಿಜವಾದ ಸಂಗತಿಯನ್ನು ವಿವರಿಸುವ ಯತ್ನದಲ್ಲಿದ್ದಾಗ ರಾಯರು ಸುಮ್ಮನಿರುವಂತೆ ಸನ್ನೆ ಮಾಡಿದರು. ತನ್ನಲ್ಲಿದ್ದ ಸಕಲ ಹರಿದ, ಚಿಂದಿಯಾದ ಧನಸಂಗ್ರಹ ವನ್ನು, ಟೀಕೆ, ಟಿಪ್ಪಣಿಗಳ ನೋಟ್‌ಬುಕ್‌ಗಳನ್ನೆಲ್ಲ ಅರ್ಥಾತ್ ತಮ್ಮ ಯಾವತ್ತೂ ಸಂಶೋಧಿತ ಸಾಮಗ್ರಿಗಳನ್ನು ಅವರ ಕೈಗಿತ್ತರು. ಇನ್ನೇನಾದರೂ ಬೇಕೆ ?' ಎಂದು ವಿಚಾರಿಸಿದರು. ನಿಮ್ಮ ಖೋಟಾ ನೋಟು ರಾಸಾಯನಿಕಗಳ ಜೊತೆ ಫೋಟೋ ಬೇಕು ! ಎಂದು ಜೊತೆಗೆ ತಂದ ಕ್ಯಾಮರಾದೊಂದಿಗೆ ಬನಿಯನ್, ಚಡ್ಡಿ, ಬೆಳೆದ ಗಡ್ಡದ ಮುಖದ ರಾಯರ ಚಿತ್ರಗಳನ್ನು ಒಂದೇ ಸವನೆ ಕ್ಲಿಕ್ಕಿಸಿದರು. ಕಳ್ಳಕಾಕರನ್ನು ಹಿಡಿದಾಗ ಸ್ಲೇಟಿನ ಮೇಲೆ ಅವರವರ ಹೆಸರು ಬರೆದು ಪತ್ರಿಕೆಗಳಲ್ಲಿ ಚಿತ್ರಗಳು ಬರುತ್ತಿರುವಂತೆ ಪೊಲೀಸರು ಪ್ರಕಟನೆಯ ವಿಧಾನ ನೋಡಿಕೊಳ್ಳುತ್ತಿದ್ದ ವಿಚಾರ ನೆನಪಾಗಿ ನನಗೆ ನಗಬೇಕೇ, ಅಳಬೇಕೇ ಗೊತ್ತಾಗಲಿಲ್ಲ! ಕಣ್ಣೀರು ಉಕ್ಕಿದ್ದು ಖರೇ !

ಬಂದವರು ಸಾಮಾನುಗಳನ್ನೆಲ್ಲ ಗೂರಾಡಿ ಚೆಲ್ಲಿ ಹೋಗಿದ್ದರು. ಅವರೊಂದಿಗೆ ರಾಯರು ತೋರಿದ ಸೌಜನ್ಯ, ಸಹಕಾರಗಳು ಅರ್ಥವಾಗದೇ ಮೂಕಿಯಾಗಿ ನಿಂತಿದ್ದೆ. ಒರಟು ಅಧಿಕಾರಿ ಕೂಡ ರಾಯರಿಗೆ ವಂದಿಸಿ ಹೋಗಲು ಮರೆಯಲಿಲ್ಲ. ಈಗ ರಾಯರು, ತಯಾರಿಸಿದ ರಾಸಾಯನಿಕಗಳನ್ನೆಲ್ಲ ಸಿಂಕಿನಲ್ಲಿ ಸುರುವಿದರು. ಪೊಟ್ಟಣ ಗಳನ್ನು ಕಸದ ಬುಟ್ಟಿಗೆ ಸೇರಿಸಿದರು. ನಂತರ ಮುದದಿಂದ; ಮುಕುಂದ ಬಂದ ! ಎಂದು ಕುಣಿಯುತ್ತ ಅಡಿಗೆ ಮನೆ ಹೊಕ್ಕರು. ಅಂದು ಸಿಹಿಯಡಿಗೆ ತಾವೇ ತಯಾರಿಸಿದರು. ಆಗಮಾತ್ರ ನೋಟಿನ ನವೀಕರಣದ ಹುಚ್ಚು ಬಿಡಿಸಿದ ಗುಪ್ತ ಪೊಲೀಸ್ ದಳವನ್ನು ಮನಸ್ಸಿನಲ್ಲೇ ವಂದಿಸಿದೆ.

ಒಂದು ತಿಂಗಳ ಬಳಿಕ ಭಾರತ ಸರಕಾರದ ಮೊಹರು, ರಾಷ್ಟ್ರಪತಿಗಳ ಆಫೀಸಿನ ಮೊಹರು ಹೊತ್ತ ದಪ್ಪ ಕವರು ಕೈಸೇರಿತು. 'ನಿಮ್ಮ ಅಭೂತಪೂರ್ವ ಸಂಶೋಧನೆ, ಸಹಭಾರತೀಯರ ಕುರಿತಾದ ಕಳಕಳಿಗಾಗಿ ವಿಶೇಷ ಸಲಹಾಕಾರನಾಗಿ, ರಾಷ್ಟ್ರಪತಿಗಳು

ನಿಮ್ಮನ್ನು ಭಾರತದ ರಿಝರ್ವ್ ಬ್ಯಾಂಕಿಗೆ ನೇಮಿಸಿದ್ದಾರೆ ! ತಿಂಗಳಿಗೆ ಐವತ್ತು ಸಾವಿರ ಸಂಬಳ. ಓಡಾಡಲು ಕಾರು, ವಾಸಕ್ಕೆ ಸರಕಾರಿ ಬಂಗಲೆ ! ಯಾವತ್ತು ಸೇವೆಗೆ ಸೇರಲು ಸಾಧ್ಯ ? ಎಂದು ದಯವಿಟ್ಟು ತಿಳಿಸಿ' ಎಂಬರ್ಥದ ಒಕ್ಕಣೆಯಿತ್ತು.

ರಾಯರು ಓದಿದರು, ಗಟ್ಟಿಯಾಗಿ ನನಗೆ ಓದಿ ಹೇಳಿದರು. ಗಹಗಹಿಸಿ ನಕ್ಕರು, ಪತ್ರವನ್ನು ಹರಿದು ಚಿಂದಿಮಾಡಿ, ಅಲಲಲಲ ಕೀಹಾ ! ಎಂದು ಗರ್ಜಿಸಿ ರಾಕ್ಷಸ ನೃತ್ಯ ಮಾಡಿ ಅಡಿಗೆ ಮನೆ ಹೊಕ್ಕರು.



## ೧೨. ಪ್ರಶಸ್ತಿ ತಂದ ಪೇಚು

ರಾಯರದು ಛಾಯಾಗ್ರಹಣ, ವಿಶೇಷ ಆಸಕ್ತಿಯ ಕ್ಷೇತ್ರ. ತಮ್ಮ ಎಲ್ಲ ಬಿಡುವಿನ ವೇಳೆಯನ್ನು ಅದಕ್ಕಾಗಿಯೇ ಮೀಸಲಿಡುತ್ತಾರೆ. ಹೀಗಾಗಿ ಆಪ್ತೇಷ್ಟರು ಬಂಧು–ಬಳಗದವರು, ಪರಿಚಿತರಿಂದ ಸದಾಕಾಲವೂ ದೂರ ಇರಲು ಬಯಸುತ್ತಾರೆ. ಬಾಲ್ಯದಿಂದಲೂ ಸರ್ವಪ್ರಯತ್ನದಿಂದ ಮೈಗೂಡಿಸಿಕೊಂಡ ಸಾಧನೆ ಎಂದರೆ ಒಂಟಿತನ ಎಂದು ಅಭಿಮಾನ ಪಡುತ್ತಾರೆ. ಈ ಸಾಧನೆಯನ್ನು ನಂಬಬಹುದು ಎಂದು ತೋರುತ್ತದೆ. ಮದುವೆಯ ನಂತರ ಇವರ ಬಾಯಿ ಬಿಡಿಸುವದೇ ನನಗೆ ಮಹಾಸಾಧನೆಯಾಗಿ ಬಿಟ್ಟಿತು. ಏಕೆಂದರೆ ಮಾತನಾಡಿದರೇ ಮುತ್ತು ಸುರಿದೀತು ಎಂಬಂತೆ, ಹಾಂ, ಹೂಂಗಳಲ್ಲೇ ಸಂಭಾಷಣೆ ಮುಗಿಸುತ್ತಿದ್ದ ಮಹಾರಾಯರು, ಈಗ ಮನೆಯ ಪ್ರಮುಖ ಮಾತುಗಾರನಾಗಿ ಪರಿಣಮಿಸಿ, ಇನ್ನೋರ್ವಳೇ ಸದಸ್ಯೆಯಾದ ನನ್ನನ್ನು ಕಾಯಂ ಕೇಳುಗಳನ್ನಾಗಿ ಪರಿವರ್ತಿಸಿ, ಹೊರಬೀಳುವಾಗೊಮ್ಮೆ ಜಾಸ್ತಿ ಮಾತನಾಡಬೇಡ, ಜಾಗ್ರತೆ ! ಎಂದು ಎಚ್ಚರಿಸಿಯೇ ಬೀಳ್ಕೊಡುತ್ತಾರೆ.

ಹರೆಯದಲ್ಲೂ, ಹುಡುಗಿಯರ ಕುರಿತಾದ ಹರಟೆಯಲ್ಲಿ ಭಾಗವಹಿಸದವರಲ್ಲರಂತೆ ! ಸಮ ವಯಸ್ಕರೊಂದಿಗೆ ಬೆರೆಯದೇ ಒಂಟಿ ಸಲಗನಂತೆ ಕಾಡು–ಮೇಡು, ಗುಡ್ಡ–ಬೆಟ್ಟಗಳಲ್ಲಿ ಅಲೆಯುವದನ್ನು ರೂಢಿಸಿಕೊಂಡಿದ್ದರು. ರಥ–ಬೀದಿಯಲ್ಲಿದ್ದ ಮನೆಯಲ್ಲಿ ಆಪ್ತೇಷ್ಟರು, ಊರ ಜಾತ್ರೆಗೆಂದು ಬಂದು ಇಳಿದಾಗ, ಇವರು ಊರ ಹೊರಗೆ ವನ ವಿಹಾರಿಯಾಗಿ ಹೊರಡುತ್ತಿದ್ದರು. ಶಾಲಾ–ಕಾಲೇಜ ದಿನಗಳಲ್ಲೂ, ಪಂತಿ–ಪ್ರವಾಸಗಳಲ್ಲಿ ಭಾಗವಹಿಸುತ್ತಿರಲಿಲ್ಲ. ಈ ಧೋರಣೆಯನ್ನೇ ಮುಂದುವರಿಸಿ, ಸ್ನಾತಕೋತ್ತರ ಪದವಿ, ಡಾಕ್ಟರೇಟ ಸರ್ಟಿಫಿಕೇಟುಗಳನ್ನೂ ಅಂಚೆಯಿಂದಲೇ ತರಿಸಿಕೊಂಡು, ಪದವೀ ದಾನ ಸಮಾರಂಭವನ್ನು ದೂರವಿರಿಸಿದರು. ಆದರೆ ಯಾವುದೇ ಧರ್ಮದ ವಿವಾಹದಲ್ಲಿ ವರನ ಉಪಸ್ಥಿತಿಯಿಲ್ಲದೇ ಚತುರ್ಭುಜನಾಗಲು ಸಾಧ್ಯವಿಲ್ಲವಲ್ಲ ! ವಧುವಿನ ಜೊತೆಗೆ ಯಾವತ್ತೂ ವೈವಾಹಿಕ ಸಂಸ್ಕಾರಗಳಲ್ಲಿ ಪಾಲುಗೊಳ್ಳಲೇಬೇಕಾಯ್ತು, ಸಂಸಾರವನ್ನೂ ಹೂಡಬೇಕಾಯಿತು. ಇನ್ನಿತರರ ಮದುವೆ, ಮುಂಜಿ, ಗೃಹಪ್ರವೇಶಗಳಿಗೆಲ್ಲ ರಾಯರು ಚಕ್ಕರ್ ಕೊಡುತ್ತಾರೆಂದು ಖಚಿತವಾಗಿ ತಿಳಿದರೂ ಜನರು ಆಮಂತ್ರಿಸದೇ ಇರುವದಿಲ್ಲ.

ಈ ಒಂಟಿತನದ ಪ್ರವೃತ್ತಿಯೇ ರಾಯರನ್ನು ಬರವಣಿಗೆಯತ್ತ ಸೆಳೆದಿರಬೇಕು. ಅತಿಥಿ–ಆಪ್ತರು ಆಗಮಿಸಿದರೆ, ಒಳಕೋಣೆ ಸೇರಿಬಿಡುತ್ತಾರೆ. ಎದುರಿಗೆ ಬಂದವರನ್ನು

ಮಾತನಾಡಿಸದವರು, ಪರಿಚಿತ–ಅಪರಿಚಿತರಿಗೂ ಪುಟಗಟ್ಲೆ ಪತ್ರ ಬರೆಯುತ್ತಿರುತ್ತಾರೆ. ಪ್ರವಾಸ, ಪತ್ರ ಸಾಹಿತ್ಯ, ವಿಜ್ಞಾನ, ಕಲೆಗಳ ಕುರಿತು ಸಾಕಷ್ಟು ಸಾಹಿತ್ಯ ಸೃಷ್ಟಿಸಿದರೂ, ಅದನ್ನು ಪ್ರಕಟಿಸಬೇಕು, ಪ್ರಸಿದ್ಧಿ ಗಿಟ್ಟಿಸಬೇಕು. ಎಂಬ ಹಂಬಲದಿಂದ ದೂರವೇ ಉಳಿದಿದ್ದಾರೆ. ಇಷ್ಟಾದರೂ ಕೆಲವು ಪ್ರಕಾಶಕರು ಮುಂದಾಗಿ, ಮನೆಗೇ ಬಂದು ಇವರ ಕೃತಿಗಳ ಪ್ರಕಟನೆಗೆ ಮುಂದಾಗಿದ್ದು ಆಶ್ಚರ್ಯ ! ಗೌರವಧನವನ್ನು ನಿರೀಕ್ಷಿಸಿದವರಲ್ಲ. ಹೀಗಾಗಿ ಹಣಕ್ಕಾಗಿ ಪ್ರಕಾಶಕರನ್ನು ಭೇಟಿ ಮಾಡುವ ಪ್ರಮೇಯವೇ ಒದಗಲಿಲ್ಲ. ಆದರೂ ಕರ್ನಾಟಕ ರಾಜ್ಯ ಸಾಹಿತ್ಯ ಆಕಾಡೆಮಿಯು ರಾಯರ ಕೃತಿಗಳಿಗೆ ಪ್ರಶಸ್ತಿ ಕೊಡಲಾರಂಭಿಸಿದಾಗ, ಪೇಚಿಗೆ ಸಿಕ್ಕಿಕೊಂಡರು. ಅಮೇರಿಕೆಯ ಪ್ರವಾಸದ ಕೃತಿಗೆ, ಪ್ರಾಣಿ–ಪರಿಸರದ ಕೃತಿಗೆ, ಉತ್ತಮ ಪ್ರವಾಸ ಸಾಹಿತ್ಯ ಮತ್ತು ವೈಜ್ಞಾನಿಕ ಸಾಹಿತ್ಯ ಕೃತಿಗಳೆಂದು ಘೋಷಿಸಿ ಬಹುಮಾನ ಸಮಾರಂಭದ ಕರೆಯೋಲೆ ಬಂದರೂ, ಅವಕ್ಕೆ ಹೋಗದೇ ಅಂಚೆಯಿಂದಲೇ ಕೈಸೇರುವಂತೆ ನೋಡಿಕೊಂಡಿದ್ದರು. ಮೂರನೆಯ ಬಾರಿಯೂ ಮಧ್ಯಪ್ರದೇಶದ ಆದಿವಾಸಿಗಳ ಕುರಿತಾದ ಅಧ್ಯಯನಕ್ಕೆ ಬಹುಮಾನ ಬಂದಾಗ ಹೋಗದೇ ತಪ್ಪಿಸಿಕೊಂಡರು. ಆಕಾಡೆಮಿಯ ಅಧ್ಯಕ್ಷರು ಮನೆಗೇ ಬಂದು ರಾಯರಿಗೆ ಹಾರ ಹಾಕಿ, ಹಣ್ಣು ಹಂಪಲು, ಪ್ರಶಸ್ತಿ ಪತ್ರ–ಹಮ್ಮಿಣೆಗಳನ್ನು ಸಲ್ಲಿಸಿ ಗೌರವ ತೋರಿದ್ದರು.

ನನ್ನನ್ನು ತನ್ನವಳಾಗಿ ಮಾಡಿಕೊಂಡರೂ ಮಾವನ ಬಂಧು, ಬಳಗದೊಂದಿಗೆ ಗುರುತಿಸಿಕೊಳ್ಳಲೇ ಇಲ್ಲ. ಸಮೀಪದ ಆಪ್ತೇಷ್ಟರೇ, ನಿನ್ನ ಪತಿಯನ್ನು ಪರಿಚಯಿಸಿಲ್ಲವಲ್ಲ ಎಂದು ದೂರುತ್ತಾರೆ. ಸಂಗಿತ ವಿಮರ್ಶಕನಾಗಿ, ದೊಡ್ಡ ಹೆಸರು ಮಾಡಿದ ನನ್ನ ಸೋದರ ಮಾವನನ್ನು ಈವರೆಗೂ ಭೇಟಿ ಮಾಡಿಲ್ಲವೆಂದರೆ ರಾಮರ ''ಘೋಷಾ ಜೀವನ'' ದ ಕಲ್ಪನೆ ಬರುವಂತಿದೆ ! ಆಕಾಶವಾಣಿಯ ವೃತ್ತಿಯಲ್ಲಿದ್ದ ನನ್ನ ಹೆಚ್ಚಿನ ಸಹೋದ್ಯೋಗಿ ಗಳಿಗೆಲ್ಲ ಅವರು ವಿಜ್ಞಾನಿ, ಸಾಹಿತಿ, ಕಲಾಕಾರರೆನಿಸಿಕೊಂಡ ಅಜ್ಞಾತ ವ್ಯಕ್ತಿ ಮಾತ್ರ. ಕನ್ನಡ ಪತ್ರಿಕೆಗಳು, ವಿಶೇಷಾಂಕಗಳು, ಪುಸ್ತಕಗಳನ್ನು ಓದುವವರಿಗೆ ಅವರೊಬ್ಬ ಬರೆಯುವ ಕೈ ಮಾತ್ರ. ಇಷ್ಟಾದರೂ ಅವರನ್ನು ನೋಡಿಯೇ ಇರದ ಜನರಿದ್ದಾರೆಂದು ಭಾವಿಸಬೇಡಿ. ಹಳೆಯ ಕಾಲದ ಕೈ ಚೀಲಗಳನ್ನು ಹೊತ್ತು, ಹೂ, ತರಕಾರಿ, ಹಣ್ಣು ಕಾಯಿಗಳನ್ನು ಮಾರುವವರಿಗೆ,ಕೈಗಾಡಿಯವರಿಗೆ ಇವರು ಚಿರಪರಿಚಿತರು. ಅವರನ್ನು ಮಾತನಾಡಿಸುತ್ತ, ನಗಿಸುತ್ತ ಅವರಿಂದ 'ನಮ್‌ಸ್ವಾಮಿ, ಬಡವರ ಸ್ವಾಮಿ, ಒಳ್ಳೆ ಸ್ವಾಮಿ ಮಾಮೂಲ್‌ಸ್ವಾಮಿ' ಎಂಬ ಆತ್ಮೀಯ ಬಿರುದುಗಳನ್ನೆಲ್ಲ ತಳೆದಿದ್ದಾರೆ. ಬ್ರೆಡ್ ಅಂಗಡಿಯವ, ನಾಪಿತ, ಜಿನಸಿನ ವ್ಯಾಪಾರಿ, ಔಷಧಿ ಮಾರುವವರೆಲ್ಲ ನಮಸ್ಕರಿಸದೇ ಇರಲಾರರು.

ಉತ್ತರ ಕನ್ನಡ ಜಿಲ್ಲೆಯ ಶ್ರೀ ಗೌರೀಶ ಕಾಯಕಿಣಿ ಪ್ರತಿಷ್ಠಾನದವರು ರಾಯರಿಗೆ ಪತ್ರ ಬರೆದು, ''ಕನ್ನಡ ಸಾಹಿತ್ಯದಲ್ಲಿ ವಿಜ್ಞಾನ, ಕಲೆ, ಮತ್ತು ಪ್ರವಾಸ ಕ್ಷೇತ್ರಗಳಲ್ಲಿ ಸಲ್ಲಿಸಿರುವ ಅನುಪಮ ಸೇವೆಯನ್ನು ಗಮನಿಸಿ, ಗುರುತಿಸಿ, ಅಭಿನಂದಿಸಿ, ಗೌರವ

ಪೂರ್ವಕವಾಗಿ ೧೯೯೪ ರ ಪ್ರತಿಷ್ಠಾನದ ಪ್ರಶಸ್ತಿಯನ್ನು ತುಂಬ ಅಭಿಮಾನದಿಂದ ನೀಡಲು ನಿರ್ಧರಿಸಿದೆ. ಆದ್ದರಿಂದ ತಮ್ಮ ಒಪ್ಪಿಗೆಯ ಪತ್ರವನ್ನು ಮರು ಅಂಚೆಗೇ ಕಳಿಸುವ ಕೃಪೆ ಮಾಡಿ'' ಎಂದು ತಿಳಿಸಿದರು. ಎಂದಿನಂತೆ ಈ ಗೌರವಕ್ಕಾಗಿ ಯಾವ ರೀತಿಯಿಂದಲೂ ಪ್ರತಿಕ್ರಿಯಿಸದೇ ತಮ್ಮ ಎಂದಿನ ಚಟುವಟಿಕೆಗಳಲ್ಲಿ ರಾಯರು ತೊಡಗಿದ್ದರು. ಆದರೆ ಪ್ರತಿಷ್ಠಾನದವರಿಗೆ ಈ ಮೌನ ಅರ್ಥವಾಗದೇ, ಈರ್ವರು ಪದಾಧಿಕಾರಿಗಳು ಬೆಂಗಳೂರಿಗೆ ಆಗಮಿಸಿ, ಮನೆಗೇ ಬಂದು ರಾಯರನ್ನು ಭೇಟಿ ಮಾಡುವದರಲ್ಲಿ ಯಶಸ್ವಿ ಯಾದರು ! ''ಹಲವಾರು ಚಟುವಟಿಕೆಗಳಲ್ಲಿ ತೊಡಗಿದ್ದೇನೆ. ವ್ಯಕ್ತಿಗತವಾಗಿ ಬರಲಾಗುವದಿಲ್ಲ. ಅಂಚೆಯಿಂದ ಕಳಿಸಿ ಕೊಡಿ'' ಎಂಬ ತಮ್ಮ ಮಾಮೂಲಿ ಚುಟುಕಿನ ಉತ್ತರ ಕೊಟ್ಟಾಗ, ಪದಾಧಿಕಾರಿಗಳು ನಕ್ಕರು. ''ಇದು ಇತರ ಸಾಹಿತಿಗಳೊಂದಿಗೆ ಕೂಡ ಮಾಡುವ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ವಿತರಣಾ ಸಮಾರಂಭ ಅಲ್ಲವಲ್ಲ ! ನಿಮ್ಮೊಬ್ಬರನ್ನೆ ಸನ್ಮಾನಿಸುವ, ಅಭಿನಂದಿಸುವ, ವಿಶೇಷ ಕಾರ್ಯಕ್ರಮ. ನೀವೇ ಬರದಿದ್ದರೆ ಸಮಾರಂಭ ಹೇಗೆ ನಡೆಯಬೇಕು ?'' ಎಂದು ಅಸಹಾಯಕತೆ ತೋರಿದರು. ತನ್ನ ಬೆಪ್ಪುತನಕ್ಕೆ ತಾನೇ ನಗುವ ಪಾಳಿ ಈಗ ರಾಯರದು. ಸ್ವ ಸನ್ಮಾನಕ್ಕೆ ಬರುವ ಆಶ್ವಾಸನೆಯನ್ನು ನೀಡಲೇಬೇಕಾಯಿತು.

ಎಂದೂ, ಯಾವುದೇ ಸಾರ್ವಜನಿಕ ಕಾರ್ಯಕ್ರಮದಲ್ಲಿ ಪಾಲುಗೊಂಡ ಅನುಭವ ರಾಯರಿಗಿಲ್ಲ, ಹೀಗಾಗಿ ಒಳ್ಳೆಯ ಬಟ್ಟೆ–ಬರೆ ಧರಿಸುವ ಅಭ್ಯಾಸವೂ ಇಲ್ಲ. ಇಸ್ತ್ರಿ ಇಲ್ಲದ, ಹೊಲಿಗೆ ಬಿಚ್ಚಿಕೊಂಡ, ಕಾಲರ್ ಹರಿದ, ಗುಂಡಿಯಿಲ್ಲದ ಶರ್ಟು, ಜೇಬು ತೂತಾದ, ಅಂಚುಗಳು ಹರಿದ ಪ್ಯಾಂಟು, ವಿಜೋಡಿ ಸಾಕ್ಸ, ಪಾಲಿಶ್ ಇಲ್ಲದ ಶೂ ಇವುಗಳ ಬಗ್ಗೆ ತಲೆ ಕೆಡಿಸಿಕೊಂಡವರೇ ಅಲ್ಲ. ಹೀಗಿದ್ದರೇ ಜನಸಾಮಾನ್ಯರು ತಮ್ಮನ್ನು ಗುರುತಿಸುತ್ತಾರೆ, ಹಣ್ಣು–ತರಕಾರಿಗಳು ಸೋವಿ ಸಿಗುತ್ತವೆ, ಎಂಬ ವಾದ ಬೇರೆ ! ಹೆಚ್ಚು ಬಲವಂತ ಮಾಡಿದರೆ ತಾನು, ಆಕಾಶವಾಣಿ ನಿರ್ದೇಶಕಿಯ ಪತಿ ಎಂದು ಯಾರಿಗೂ ಗೊತ್ತಾಗದಂತೆ ಜಾಗ್ರತೆ ವಹಿಸುತ್ತೇನೆ, ಎಂಬ ಕುಚೋದ್ಯದ ಮಾತು ಬೇರೆ. ಈಗಲಾದರೂ ಹೊಸ ಬಟ್ಟೆ ಹೊಲಿಸಿಕೊಳ್ಳಿ ಎಂದರೆ, ''ನಾನು ಕಾರ್ಯಕ್ರಮಕ್ಕೆ ಹೋಗುವದೇ ಇಲ್ಲ, ನನ್ನ ಪರವಾಗಿ ನೀನೇ ಪ್ರಶಸ್ತಿ ಸ್ವೀಕರಿಸು'' ಎಂಬ ದಿವ್ಯ ಸೂಚನೆ ಬಂದಿತು. ನಿರುಪಾಯಳಾಗಿ ಇದ್ದು ಬಿದ್ದ ಹಳೆಯ ಬಟ್ಟೆಗಳಲ್ಲೆ ಒಂದು ಜೋಡಿಯನ್ನು ಹುಡುಕಲು ಗೂರಾಡಿ ವಿಫಲಳಾದೆ. ಮೂವತ್ತು ವರ್ಷಗಳ ಹಿಂದೆ ಅಮೇರಿಕೆಯಲ್ಲಿ ಕಡಿಮೆ ಬೆಲೆಗೆ ಕೊಂಡವು, ಮೈಯನ್ನೇರಲು ನಿರಾಕರಿಸಿಬಿಟ್ಟವು. ರಾಜಸ್ಥಾನದವು ಬಣ್ಣ ಕಳೆದುಕೊಂಡಿದ್ದವು. ಬಂಗಾಲಿ ನೂಲಿನ ಬಟ್ಟೆಗಳು ಶುಭ್ರವಾಗಿದ್ದರೂ ಹರಿದಿದ್ದವು. ಇನ್ನೇನೂ ಮಾಡಲಾಗದೇ ಕೈಹಿಸುಕಿಕೊಂಡು ಬೀಳ್ಕೊಟ್ಟೆ. ಪುಣ್ಯಕ್ಕೆ ತಮ್ಮೂರಿಗೆ ಹೋದಾಗ ಅವರ ಬಟ್ಟೆ, ಬರೆಗಳ ಸ್ಥಿತಿ ಗಮನಿಸಿದ ಜವಳಿ ವ್ಯಾಪಾರಿ, ಸೋದರನು ಅವರನ್ನು ಕೇಳದೇ ಹೇಳದೇ, ದರ್ಜಿಯಿಂದ ಎರಡು ಜೋಡಿ ಬಟ್ಟೆಗಳಿಗೆ ಅತಿ ಕಡಿಮೆ ಸಮಯದಲ್ಲಿ ಬುಶ್‌ಶರ್ಟ–ಪ್ಯಾಂಟ್‌ಗಳ ರೂಪಕೊಡಿಸಿ ಅಣ್ಣನ ಮೈಗೆ ಅವು ಏರುವಂತೆಯೂ ನೋಡಿಕೊಂಡ.

ಪ್ರಶಸ್ತಿ ಕೊಡಮಾಡಲಿದ್ದ ಕುಮಟೆಗೆ ಸಮೀಪದ ಹೊನ್ನಾವರ, ರಾಯರು ಹುಟ್ಟಿದೂರು ತುಂಬ ವರ್ಷಗಳ ನಂತರ ಹೋಗಿದ್ದರಿಂದ ಒಂದು ವಾರವನ್ನಾದರೂ ಅಜ್ಞಾತವಾಗಿ ವಿರಾಮವಾಗಿ ಕಳೆಯಬಹುದು, ಎಂಬ ವಿಚಾರ, ಅಲ್ಲಿಗೆ ಹೋದಾಗ ಕಷ್ಟಕೊಟ್ಟು ಕೊಂಡಿತು ಎಂದು ಅರಿವಾಯಿತು. ಕಾಫಿ, ಕತ್ತಲೆಯ ತಿರುಗಾಟ, ಪಕ್ಷಿ ಕ್ರಿಮಿ–ಕೀಟಗಳ ಜೊತೆ, ಎಲ್ಲಕ್ಕಿಂತ ಹೆಚ್ಚಾಗಿ ಏಕಾಂತ ಮಾಯವಾಗಿ ಹೋದವು ! ಸರಿ, ಒಬ್ಬನೇ ಎಲ್ಲರಿಗಿಂತ ಮೊದಲಿಗೆ ಎದ್ದು ತಿರುಗಾಟ ಪ್ರಾರಂಭ ಮಾಡುವ ಮೊದಲು ಪರಿಚಯದ ಪಂಡ್ ಭಟ್ಟರ ಅಂಗಡಿಯ ಒಂದು ಕಪ್ ಚಹಾ ಹೊಟ್ಟೆ ಸೇರಿದರೆ, ಕೈಕಾಲುಗಳನ್ನು ಸಲೀಸಾಗಿ ಬೀಸುತ್ತ ನಡೆಯಬಹುದು, ಎಂದು ಅದನ್ನು ರೂಢಿಸಿಕೊಂಡರು. ಅಂದು ಮುಂಜಾನೆ ಭಟ್ಟರು ಎಂದಿನ ನಗುಮುಖದ ಆತ್ಮೀಯತೆಯಿಂದ ಬರಮಾಡಿಕೊಂಡು ಅಭಿನಂದನೆ ಗಳನ್ನು ಹೇಳಿದರು. ರಾಯರು ಗಾಬರಿಯಾದರು. ಭಟ್ಟರು ಜಿಲ್ಲೆಯ ಪ್ರಮುಖ ದಿನಪತ್ರಿಕೆಯ ಪ್ರತಿಯನ್ನು ಕೈಗಿತ್ತರು. ''ಡಾ || ಕೃಷ್ಣಾನಂದ ಕಾಮತರಿಗೆ ಜಿಲ್ಲೆಯ ಪ್ರಶಸ್ತಿ'' ಎಂದು ದೊಡ್ಡ ಅಕ್ಷರಗಳಲ್ಲಿ ಮೊದಲ ಪುಟದಲ್ಲೇ ಮುದ್ರಿತವಾದದ್ದನ್ನು ಕಂಡು ರಾಯರಿಗೆ ದಿಗಿಲಾಯಿತು. ನಂತರ ಮಣಿಪಾಲ, ಉಡುಪಿ, ಮಂಗಳೂರು, ಹುಬ್ಬಳ್ಳಿ, ಬೆಂಗಳೂರುಗಳಿಂದ ಹೊರಡುತ್ತಿದ್ದ ಪತ್ರಿಕೆಗಳೂ ಇದನ್ನೇ ಸಾರಿ ಸಾರಿ ಹೇಳಿದವು. ಆವರೆಗೆ ತಮ್ಮ ಊರಿನಲ್ಲಿ ಅಜ್ಞಾತರಾಗಿಯೇ ಹಾಯಾಗಿ ಓಡಾಡಿಕೊಂಡಿದ್ದವರಿಗೆ, ಈಗ ಹೊರ ಬೀಳಲು ಮುಜುಗರವೆನಿಸತೊಡಗಿತು.

ಊರಲ್ಲಿ ಈ ಪ್ರಶಸ್ತಿ ವಿಜೇತರು ಯಾವ ಕಾಮತ್ ಕುಟುಂಬಕ್ಕೆ ಸೇರಿದವರು, ಎಂಬ ಜಿಜ್ಞಾಸೆ ಪ್ರಾರಂಭವಾಯಿತು. ಊರಲ್ಲಿರುವ ಪ್ರಮುಖ ಹತ್ತು ಕಾಮತ ಕುಟುಂಬದಲ್ಲಿ ಬರಹಗಾರರು ಯಾರೂ ಇಲ್ಲವಲ್ಲ ! ಎಂದು ಅಚ್ಚರಿಪಡುತ್ತಿದ್ದಾಗ, ಲಕ್ಷ್ಮಣ ಕಾಮತರ ಕುಟುಂಬದಲ್ಲಿ ಯಾರೋ ಬರೆಯಬಲ್ಲವನೊಬ್ಬನಿದ್ದಾನೆಂದು ಹರೆಯದ ಹುಡುಗನೊಬ್ಬ ಪತ್ತೆ ಹಚ್ಚಿದ. ಹಿರಿಯನೋರ್ವನು ಕಳೆದ ನಾಲವತ್ತು ವರ್ಷಗಳಿಂದ ನಾನು ಅವರ ಜವಳಿ ಅಂಗಡಿಯಿಂದಲೇ ಬಟ್ಟೆ ಖರೀದಿಸುತ್ತಾ ಬಂದಿದ್ದೇನೆ ! ಅವರು ಮೂವರೇ ಅಣ್ಣ ತಮ್ಮಂದಿರು ಎಂದು ಖಚಿತವಾಗಿ ಹೇಳಬಲ್ಲೆ ಎಂದಾಗ, ಕಾಲೇಜು ಓದಿದ ಕಿರಿಯ ನೊಬ್ಬ ''ಅವರೆಲ್ಲರ ಅಣ್ಣನೊಬ್ಬ ಅಮೇರಿಕೆಗೆ ಹೋಗಿ ಬಂದಿದ್ದಾನೆ ! ಅವನು ಬರೆದ ಪುಸ್ತಕ ನಮಗೆ ಪಥ್ಯವಾಗಿದ್ದರೂ, ಲೇಖಕನು ಖಾಸಾ ಇದೇ ಊರಿನವರೆಂದೂ, ಉಮೇಶ ಕಾಮತ ಮತ್ತು ಸೋದರರ ಖಾಸ ಖಾಸ ಅಣ್ಣನೆಂದು ಈಗ ತಾನೇ ಪತ್ತೆ ಹಚ್ಚಿದ್ದೇನೆ' ಎಂದು ತೇಕುತ್ತ ಬಂದು ತನ್ನ ಪತ್ತೇದಾರಿ ಪ್ರಯತ್ನ ಯಶಸ್ವಿಯಾದ ವಿಚಾರವನ್ನು ಘೋಷಿಸಿದ. ಆದರೂ ನಂಬದ ಹಿರಿಯರು ಮತ್ತೆ ಜವಳಿ ಅಂಗಡಿಗೆ ಹೋಗಿ ಕಿರಿಯನ ಮಾತು ನಿಜವೆಂದು ಖಚಿತಪಡಿಸಿಕೊಂಡರು. ಲಕ್ಷ್ಮಣ ಕಾಮತರ ಹಿರೇಮಗ, ವ್ಯಾಪಾರಕ್ಕೆ ಉಪಯೋಗವಿಲ್ಲವೆಂದು ಉಚ್ಚ ಶಿಕ್ಷಣ ಕಲಿಯಲು ಕಳಿಸಲ್ಪಟ್ಟಿದ್ದು ದೃಢಪಟ್ಟಿತು!

ತೀರ ಅಪರಿಚಿತರು ಆತ್ಮೀಯರಾಗಿ ಚಹಾಪಾನಕ್ಕೆ ಮನೆಗೆ ಆಮಂತ್ರಿಸಿದರು.

ಶಾಲಾ ಸಹಪಾಠಿ ಫೋನಿಸಿ, ಶಾಲಾದಿನಗಳನ್ನು ನೆನಪಿಸಿಕೊಂಡ. ನೆರೆಮನೆಯಾತ, ತನ್ನ ಹಳ್ಳಿಯ ತೋಟದ ಮನೆಗೆ ಆಮಂತ್ರಣ ಕೊಟ್ಟ. ಊರಿನವರು ಎಚ್ಚತ್ತು ಪ್ರತಿಷ್ಠಾನದ ಸತ್ಕಾರಕ್ಕೂ ಮೊದಲು ತಮ್ಮ ಅಭಿನಂದನೆ ಮೊದಲು ಆಗಬೇಕು ಎಂದು ಆಗ್ರಹ ಪಡಿಸಿದರು. ಇವರನ್ನು ಪರಿಚಯಿಸುತ್ತ ಊರ ಗಣ್ಯರು, 'ನಮ್ಮ ಊರಿನವರೇ ಆದ ಡಾ|| ಕಾಮತರ ದರ್ಶನ ಪಡೆಯುವ ಅವಕಾಶ ಒದಗಲಿಲ್ಲ ಎಂದು ಸಂಕೋಚ ಪಡ ಬೇಕಾಗಿಲ್ಲ! ಬೆಂಗಳೂರಿನಲ್ಲಿ ೨೫ ವರ್ಷಗಳಿಂದ ವಾಸಿಸುತ್ತಿದ್ದರೂ, ಯಾವ ಸಾಹಿತಿ, ಪತ್ರಿಕೋದ್ಯಮಿ, ಮಾಧ್ಯಮಗಳ ಪ್ರತಿನಿಧಿಗಳೂ ಅವರನ್ನು ಕಂಡಿಲ್ಲವಂತೆ. ಅಷ್ಟೇ ಏಕೆ, ಸ್ನೇಹಿತರೊಬ್ಬರು ಅವರನ್ನು ಹುಡುಕಿಕೊಂಡು, ಅವರು 12 ವರ್ಷಗಳಿಂದ ವಾಸಿಸು ತ್ತಿರುವ ಶಶಿಕಿರಣ್ ಕಟ್ಟಡಕ್ಕೆ ಹೋಗಿ, ಹೆಸರನ್ನು ಹೇಳಿದಾಗ, ಅಂಥವರು ಯಾರೂ ಇಲ್ಲಿ ಇಲ್ಲ! ಎಂದು ಮೇಲ್ವಿಚಾರಕರಿಂದ ಅನಿಸಿಕೊಂಡು ನಿರಾಶೆಯಿಂದ ತಿರುಗಿ ಬಂದರು' ಎಂದಾಗ ನೆಮ್ಮದಿಯಿಂದ ಸಭೆಯವರೆಲ್ಲ ನಕ್ಕು ಹಗುರಾಗುವಂತೆ ಆಯಿತು. ರಾಯರು ಸನ್ಮಾನದುದ್ದಕ್ಕೂ ಇರಸು ಮುರಸಾಗಿದ್ದವರು. ಕೃತಜ್ಞತೆ ಸೂಚಿಸುವ ಸಂದರ್ಭ ಬಂದಾಗ, ''ಇಂಥ ಸಮಾರಂಭದಲ್ಲಿ ನಾನು ಪಾಲುಗೊಳ್ಳುವದು ಇದೇ ಮೊದಲು. ನಿಮ್ಮ ಆದರ, ಪ್ರೀತಿ–ವಿಶ್ವಾಸಗಳಿಗೆ ಮಾರು ಹೋಗಿದ್ದೇನೆ. ಆದರೆ ಹೀಗೆ ಮಾಡುವಾಗ ಒಂದು ಅನ್ಯಾಯವನ್ನು ಮಾಡಿದ್ದೀರಾ! (ಕುಳಿತವರ ಹುಬ್ಬೇರಿದವು!). ನನ್ನ ಸಹಪಾಠಿಯೊಬ್ಬ ಮೊನ್ನೆ ತಾನೆ ವಿವಾಹವಾಗಿದ್ದರಿಂದ, ನಾನಿನ್ನೂ ಹರೆಯದವ ನೆಂದು ಭಾವಿಸಿದ್ದರಿಂದ, ಊರಿಗೆ ಬಂದಾಗಿನಿಂದ ಹೊಸ ಹುರುಪಿನಲ್ಲಿದ್ದೆ. ಆದರೆ ನೀವು ಕಳುಹಿಸಿದ ಆಮಂತ್ರಣ ಪತ್ರಿಕೆಯಲ್ಲಿ 'ಹಿರಿಯ' ಸಾಹಿತಿ ಎಂದು ಸ್ಪಷ್ಟವಾಗಿ ಸಾರಿದ್ದರಿಂದ, ನನ್ನ ವಯಸ್ಸನ್ನು ಸಾರ್ವಜನಿಕವಾಗಿ ಘೋಷಿಸಿದಂತಾಗಿದೆ! ಈಗ ಊರಿಗೆ ಹೊಸಬನಾದರೂ ಯಾವ ವಧುವೂ ನನ್ನನ್ನು ವರಿಸಲು ಒಪ್ಪಲಾರಳು ಎಂದು ತಮ್ಮಂದಿರೆಲ್ಲ ಸೇರಿ ಕೊನೆಯ ತೀರ್ಪು ಕೊಟ್ಟಿದ್ದಾರೆ..... ಇದರಿಂದಾಗಿ ತುಂಬ ನಿರಾಶೆಯಾಗಿದೆ! ಎಂದಾಗ ಸಭೆಯಲ್ಲಿ ಹೊ! ನಗೆಯ ಕೇಕೆಯ ಸದ್ದು. ತಮ್ಮ ಪ್ರಾಮಾ ಣಿಕ ಅನಿಸಿಕೆಗೆ, ಜನರು ಇಷ್ಟೊಂದು ನಕ್ಕದ್ದಕ್ಕೆ ರಾಯರಿಗೆ ಮಾತೇ ಮರೆತು, ಕುಳಿತು ಬಿಟ್ಟರು. ಕಡಿಮೆ ಮಾತಿನ ತೂಕದ ಶಬ್ದಗಳ ಹಾಸ್ಯ ಸಾಹಿತಿಯಾಗಿ ರಾಯರು ಮಾರ್ಪಟ್ಟರು. ಸುದ್ದಿ ಎಲ್ಲೆಡೆ ಹರಡಿತು.

ಈಗ ಊರಿನ ಕಾನೂನು ಮಹಾವಿದ್ಯಾಲಯದವರು ರಾಯರ ಬೆಂಬತ್ತಿದರು. ವಾರ್ಷಿಕ ಸ್ನೇಹ ಸಮ್ಮೇಲನದ ಮುಖ್ಯ ಅತಿಥಿ ಆಗಬೇಕೆಂದು ಆಗ್ರಹಿಸಿದರು. ವೇಳೆಯ ಅಭಾವವೆಂದು ಕುಂಟು ನೆವ ಹೇಳಿದಾಗ, ಮರುದಿನವೇ ಏರ್ಪಡಿಸುವದಾಗಿ ಆಶ್ವಾಸನೆ ಯಿತ್ತರು. ಅಧ್ಯಾಪಕರು, ವಿದ್ಯಾರ್ಥಿಗಳು, ರಾತ್ರೆಯೆಲ್ಲ ದುಡಿದು ಸಕಾಲಕ್ಕೆ ಆಮಂತ್ರಣ ಪತ್ರಿಕೆ ಮುದ್ರಿಸಿ, ಕೈಯಾರೆ ಹಂಚಿ, ವೇದಿಕೆಯನ್ನು ಸುಂದರವಾಗಿ ಅಲಂಕರಿಸಿ, ಸಭಾಂಗಣವನ್ನು ಅಣಿಗೊಳಿಸಿ, ಹೊಸ ತಲೆಮಾರಿನವರಲ್ಲಿ ಎಷ್ಟೊಂದು ಹುರುಪು ಇದೆ ಎಂಬುದನ್ನು ರಾಯರಿಗೆ ಮನದಟ್ಟು ಮಾಡಿದರು. ಆಮಂತ್ರಣ ಪತ್ರಿಕೆಯಲ್ಲಿ ಮುಖ್ಯ ಅತಿಥಿ.... ಡಾ|| ಕೃಷ್ಣಾನಂದ ಕಾಮತ್ ಎಂ.ಎಸ್.ಸಿ., ಪಿ.ಎಚ್.ಡಿ., (ನ್ಯೂಯಾರ್ಕ್

ವಿಶ್ವವಿದ್ಯಾಲಯ) ಎಂಬ ವಾಕ್ಯ ರಾಯರಿಗೇ ಅಚ್ಚರಿ ಮಾಡುವಂತೆ ಇತ್ತು. ಏಕೆಂದರೆ ಇದೆಲ್ಲ ಅವರಿಗೆ ಎಂದೋ ಮರೆತು ಹೋಗಿತ್ತಂತೆ ! ರಾಶಿ ರಾಶಿ ಸರ್ಟಿಫಿಕೇಟುಗಳು, ಮುಖ್ಯ ಅತಿಥಿಗಳ ಸಹಿಗಾಗಿ ಬಂದವು. ಕರೆದೊಯ್ಯಲು ಕಾರು ಬಂದದ್ದು, ಹಾರ, ತುರಾಯಿ ಅರ್ಪಿಸಿದ್ದು. ಛಾಯಾಗ್ರಹಣ ಎಡಬಿಡದೆ ನಡೆದದ್ದು– ಎಲ್ಲವೂ ಮೊದಲ ಅನುಭವಗಳು.

ಪ್ರಾಧ್ಯಾಪಕರು ರಾಯರನ್ನು ಪರಿಚಯಿಸುತ್ತ ಕೊನೆಯಲ್ಲಿ 'ಓರ್ವಪುತ್ರ, ಒಬ್ಬಳೇ ಮಗಳನ್ನು ಪಡೆದು ಆದರ್ಶ ಕುಟುಂಬದ ವರ್ಗಕ್ಕೆ ಸೇರಿದ್ದಾರೆ' ಎಂದು ಬಿಟ್ಟರು. ಏನು ಮಾತನಾಡಬೇಕು ಎಂದು ಗಲಿಬಿಲಿಗೊಂಡಿದ್ದ ಮುಖ್ಯ ಅತಿಥಿಗಳಿಗೆ ಎಳೆಸಿಕ್ಕಿತು. ''ನನ್ನ ಬಗ್ಗೆ ಆಡಿದ ಅಭಿಮಾನದ ಮಾತುಗಳಿಗೆ ಕೃತಜ್ಞತೆಗಳು. ಇನ್ನೂ ಹೆಚ್ಚಿನ ನೆಮ್ಮದಿಯ ವಿಷಯವೆಂದರೆ ಬೆಂಗಳೂರು ಬಿಡುವಾಗ, ಏಕಮೇವ ಅದ್ವಿತೀಯ ಪುತ್ರನ ತಂದೆ ಆಗಿದ್ದೆ. ಇಲ್ಲಿ ಬಂದ ಒಂದೇ ವಾರದಲ್ಲಿ ಒಬ್ಬ ಮಗಳನ್ನೂ ಪಡೆದಿದ್ದೆನೆಂದು ಅರಿತು ಅತೀವ ಆನಂದವಾಗಿದೆ. ಬಸಿರು–ಬಾಣಂತನ ಹೊಣೆಗಾರಿಕೆಗಳಿಲ್ಲದೇ ಮಗಳನ್ನು ಪಡೆಯುವ ಭಾಗ್ಯವಂತ ದಂಪತಿಗಳು ಅದೆಷ್ಟು ಜನರಿದ್ದಾರು ! ಎಂದು ಪ್ರಾರಂಭಿಸುತ್ತಿದ್ದಂತೆ ವಿದ್ಯಾರ್ಥಿಗಳೆಲ್ಲ ಚಪ್ಪಾಳೆ ಹಾಕಿ ನಗೆಗಡಲಿನಲ್ಲಿ ತೇಲಿದರು. ಮುಂದಿನದಾರಿ, ರಾಯರಿಗೆ ಸಲೀಸಾಗಿ ಸಾಗಿತು.

ಇನ್ನು ಉಳಿದದ್ದು ಮುಖ್ಯವಾದ ಪ್ರಶಸ್ತಿ ಪ್ರದಾನ ಕಾರ್ಯಕ್ರಮ. ಹನ್ನೆರಡು ಮೈಲಿ ದೂರದ ಸಮಾರಂಭದ ಊರಿಗೆ ಸೋದರನ ದ್ವಿಚಕ್ರ ವಾಹನದ ಮೇಲೆ ಪಿಲಿಯನ್ ಬಿಟ್ಟಿ ಸವಾರನಾಗಿ ಸೇರಿದ್ದಾಯ್ತು. ಒಂದು ಗಂಟೆ ಮೊದಲೇ ತಲುಪಿದ್ದರಿಂದ, ರಾಯರ ಆಗಮನವನ್ನು ಯಾರೂ ಗಮನಿಸಲಿಲ್ಲ. ಮೂಲೆಯಲ್ಲಿದ್ದ ಮೂರು ಕಾಲಿನ ಸ್ಟೂಲೊಂದರ ಮೇಲೆ ಆಸೀನರಾಗಿ, ಅವರ ಅತ್ಯಂತ ಪ್ರೀತಿಯ ಹಾಬಿಯಾದ, ಬರ ಹೋಗುವವರ ಸೂಕ್ಷ್ಮ ನಿರೀಕ್ಷಣೆಯನ್ನು ಕೈಕೊಂಡಿದ್ದರು. ಕಾರ್ಯಕ್ರಮ ಸಂಚಾಲಕರು ಒಬ್ಬೊಬ್ಬರಾಗಿ ಬಂದು ಮುಖ್ಯ ಅತಿಥಿಗಾಗಿ ಕಾಯುತ್ತಲೇ ಇದ್ದರು. ಪತ್ರಕರ್ತರು, ಛಾಯಾಚಿತ್ರಕರು, ವಿಶೇಷ ಆಹ್ವಾನಿತರು, ಆಸಕ್ತರು, ಇಳಿವಯಸ್ಸಿನವರು, ಹೆಂಗಳೆಯರು, ಎಳೆಯರು, ಬರುತ್ತಲೇ ಇದ್ದರು. ಈ ಕಾರ್ಯಕ್ರಮದ ವರದಿ ಮಾಡಲೆಂದು ಬಂದಿದ್ದ ಬೆಂಗಳೂರಿನ ಪತ್ರಕರ್ತರು ಎಲ್ಲರ ಪರಿಚಯ ಮಾಡಿಕೊಳ್ಳುತ್ತ, ಮೂಕರಾಗಿ ಕುಳಿತಿದ್ದ ರಾಯರ ಬಳಿ ಬಂದು, ತಾವ್ಯಾರು ಎಂದು ತಿಳಿಯಲಿಲ್ಲ ಎಂದು ಉದ್ಗರಿಸಿದಾಗ, ''ಇವರೆಲ್ಲ ನನ್ನ ಅಭಿನಂದನ ಕಾರ್ಯ ಇಟ್ಟುಕೊಂಡಿದ್ದಾರಂತೆ ! ಓದುಗರು ನನ್ನನ್ನು ಕೃಷ್ಣಾನಂದ ಕಾಮತ ಎಂದು ಗುರುತಿಸುತ್ತಾರೆ'' ಎಂದಾಗ ಅವರಿಗಾದ ಪರಮಾಶ್ಚರ್ಯ ಹೇಳತೀರದು ! ''ದರ್ವಾನನ ಆಸನದಲ್ಲಿ ಕುಳಿತಿದ್ರೆ, ಆರ್ಗನೈಜರ್ಸ್‌ಗೆ ಹೇಗೆ ತಾನೆ ತಿಳಿಬೇಕು ಸಾರ್ ?'' ಎಲ್ರೂ ನಿಂಸಲ್ವಾಗೇ ಕಾಯ್ತಾ ಇದಾರೆ. 'ನಿಮ್ಮನ್ನು ಈ ಮೊದಲು ನೋಡಿದವರು, ಇಬ್ರೇ ಇಬ್ರು. ಹೊರಗಡೆ ಗೇಟ ಹತ್ರಾನೇ ನಿಂತಿದ್ದಾರೆ' ಎಂದು ಆತ್ಮೀಯತೆಯಿಂದ ಎಳೆದುಕೊಂಡೇ ವೇದಿಕೆಯತ್ತ

ಬಂದರು. ಪಾಶ್ಚಾತ್ಯ ವೇಷಭೂಷಣದಲ್ಲಿ, ವಿದೇಶಿ ಡಾಕ್ಟರೇಟ್ ಪಡೆದ ಮುಖ್ಯ ಅತಿಥಿ, ಕಾರಿನಿಂದ ಇಳಿದು ಬಂದಾನೆಂದು ನಿರೀಕ್ಷಿಸಿದವರಿಗೆ, ಎಲ್ಲರಿಗಿಂತ ಮೊದಲು ಬಂದು, ಒಂದೆಡೆ ಕುಳಿತಿದ್ದಾನೆಂದು ತಿಳಿದಾಗ ಆಘಾತವಾಗದೇ ಇದ್ದೀತೆ ? ಈ ವ್ಯಕ್ತಿ ಸಾದಾ ಶರ್ಟ ಪ್ಯಾಂಟ ಧರಿಸಿ ಚಪ್ಪಲಿ ಮೆಟ್ಟಿಕೊಂಡು ಬಂದಿದ್ದನ್ನು ಎಲ್ಲರೂ ಕೌತುಕ ದಿಂದ ನೋಡುತ್ತಲೇ ಇದ್ದರು.

ಸರಿ, ಸೇರಿದವರಲ್ಲಿ ಕೆಲವರು, ಸೋದರರ ನಿಕಟವರ್ತಿಗಳು, ಎಂದು ಪರಿಚಯಿಸಿಕೊಂಡರು. ಶಾಲಾ ದಿನಗಳಿಂದಲೇ ನಿಮ್ಮ ಪುಸ್ತಕಗಳನ್ನು ಓದಿದ್ದೇನೆ' ಎಂದು ಇನ್ನೊಬ್ಬ ಅಭಿಮಾನಪಟ್ಟ. ನಿಮ್ಮ ಪ್ರವಾಸ ಕಥನಗಳು ಅದ್ಭುತವಾಗಿವೆ. ಒಬ್ಬನೆಂದರೆ, ಪರಿಸರದ ಕುರಿತಾದ ನಿಮ್ಮ ಕೃತಿಗಳನ್ನು ಅಧಿಕಾರಿಗಳು ಓದಲೇಬೇಕು' ಮತ್ತೊಬ್ಬನೆಂದ. ಯುವಕನೊಬ್ಬ, ನಾನು ನಿಮ್ಮ ಮಗನ ಶಾಲಾ ಸಹಪಾಠಿ ಎಂದು ಕೈಕುಲುಕಿದ. ಆಕರ್ಷಕ ಮಹಿಳೆಯೊಬ್ಬಳು ಪರಿಚಯಿಸಿಕೊಂಡು, 'ನಾನು ನಿಮ್ಮ ಪತ್ನಿಯ ಬಾಲ್ಯ ಸ್ನೇಹಿತೆ' ಎಂದಳು. ಅವಳನ್ನೇಕೆ ಕಾರ್ಯಕ್ರಮಕ್ಕೆ ಕರೆತರಲಿಲ್ಲವೆಂದು ಮೂದಲಿಸಿದಳು. ಅಷ್ಟರಲ್ಲಿ ಉಪಹಾರಕ್ಕೆ ಆಮಂತ್ರಣ ಬಂದಿತು. ತನಗಾಗಿ ಇಷ್ಟೊಂದು ಖರ್ಚು ಮಾಡಿದ್ದಾರೆಯೇ ? ಎಂದು ರಾಯರಿಗೆ ಅಚ್ಚರಿ.

ಅಭಿನಂದನ ಸಮಾರಂಭ ಸಾಂಗವಾಗಿ ನೆರವೇರಿತು. ಗಂಧದ ಹಾರ, ಶಾಲು, ಫಲ, ತಾಂಬೂಲ, ನೆನಪಿನ ಕಾಣಿಕೆ, ಸುಂದರ ಕಟ್ಟು ಹಾಕಿದ ಪ್ರಶಸ್ತಿ ಪತ್ರ ಹಮ್ಮಿಣಿಗಳೆಲ್ಲ ಕಾಣಿಸಿಕೊಂಡವು. ಇತರರ ಛಾಯಾಚಿತ್ರಣವನ್ನು ರೂಪಿಸಿಕೊಂಡವರಿಗೆ ತಾನು, ಛಾಯಾಚಿತ್ರೀಕರಣಕ್ಕೆ 'ಬಲಿಪಶು' ವಾಗುವ ಸಂದರ್ಭ ಬರಬಹುದೆಂದು ಅನಿಸಿಯೇ ಇರಲಿಲ್ಲ ನಮ್ಮ ಪ್ರಶಸ್ತಿ ವಿಜೇತರಿಗೆ.

ರಾಯರು ಎಂದೂ ಭಾಷಣ ಮಾಡಿದವರೇ ಅಲ್ಲ, ಇತರರ ಭಾಷಣಗಳಿಗೂ ಹೋದವರಲ್ಲ, ಆದರೆ ಇಲ್ಲಿ ಭಾಷಣದ ಶಿಕ್ಷೆಯಿಂದ ತಪ್ಪಿಸಿಕೊಳ್ಳುವದು ಸಾಧ್ಯವೇ ಇರಲಿಲ್ಲ, ಪರಿಚಯದ ಸಂಘಟಕರಿಗೆ ಏನು ಹೇಳಬೇಕು ? ಎಂದು ಮೊದಲೇ ವಿಚಾರಿಸಿ ಕೊಂಡಿದ್ದರು. 'ತಮ್ಮ ಅಪೂರ್ವ ಸಾಧನೆಗಳನ್ನು ತಮ್ಮ ಬಾಯಿಂದಲೇ ಕೇಳುವ ಸುಯೋಗ ನಮಗಿರಲಿ' ಎಂದು ಅವರು ಸಂಕ್ಷಿಪ್ತವಾಗಿ ಹೇಳಿದ್ದರು. ರಾಯರು ಕ್ಷಣಕಾಲ ಯೋಚಿಸಿ, ಭಾಷಣದ ಸರದಿ ಬಂದಾಗ ಪ್ರಾರಂಭಿಸಿದರು.

'ಹೊನ್ನಾವರದ ಕಸಬಾಗಂಡು ಮಕ್ಕಳ ಶಾಲೆಯಿಂದ ಶಿಕ್ಷಣ ಪ್ರಾರಂಭಿಸಿ ನ್ಯೂಯಾರ್ಕ ವಿಶ್ವವಿದ್ಯಾಲಯದ ಡಾಕ್ಟರೇಟತನಕ ೨೫ ವರ್ಷ ಓದಿದೆ. ಅಷ್ಟೇ ಅವಧಿಯ ಛಾಯಾಗ್ರಹಣ ಕೈಕೊಂಡಿದ್ದೇನೆ. ಶಾಲೆ–ಕಾಲೇಜುಗಳ ಪತ್ರಿಕೆ ಅಥವಾ ಕೈಬರಹದ ಪತ್ರಿಕೆಯಲ್ಲಿ ಒಂದೇ ಒಂದು ಲೇಖನ–ಕವಿತೆ–ಕತೆ ಬರೆದ ಅನುಭವ ನನಗಿಲ್ಲ. ನಂತರವೂ ಒಂದೇ ಒಂದು ಪತ್ರಿಕೆಗೆ ಲೇಖನ ಬರೆದು ಕಳಿಸಿ ಹಿಂದಿರುಗಿ ಪಡೆದವನಲ್ಲ, ಯಾವೊಂದು ಶ್ರಮಮಾಡದೇ ಸಾಹಿತಿಯಾಗಿದ್ದೇನೆ ಎಂದರೆ ನಂಬುತ್ತೀರಾ ? 'ಬರೀರಿ, ಬರೀರಿ, ನಿಮಗೆ ಬರೆಯೋಶಕ್ತಿ ಸಹಜವಾಗಿ ಸಿದ್ಧಿಸಿದೆ ಏನಾ

ದರೂ ಬರೆಯಿರಲ್ಲ ! ಎಂದು ಒಂದೇ ಸಮನಾದ ಪತ್ನೀ ಪೀಡನೆಯಿಂದ ಬೇಸತ್ತು ನಿರ್ವಾಹವಿಲ್ಲದೇ ಬರೆದೆ. ಅದೇ ಚೊಚ್ಚಿಲು ಕೃತಿ.

"೧೯೬೯ ರ ಅಮೇರಿಕೆಯ ಪ್ರವಾಸಕಥನ. ಅದು ಎಷ್ಟೊಂದು ಜನಪ್ರಿಯ ವಾಯಿತೆಂದರೆ, ರಾತ್ರೆ ಬೆಳಗಾಗುವದರಲ್ಲಿ ನಾನೊಬ್ಬ ಸಾಹಿತಿಯಾದ ಪವಾಡ ನಡೆದು ಹೋಗಿತ್ತು ! ಇದಕ್ಕೆ ರಾಜ್ಯ ಸಾಹಿತ್ಯ ಆಕಾಡೆಮಿಯ ಪುರಸ್ಕಾರ ದೊರೆಯಿತು. ಎರಡು ವಿಶ್ವವಿದ್ಯಾಲಯಗಳಲ್ಲಿ ಅದು ಪಠ್ಯವೂ ಆಯಿತು. ಮುಂದೆ ಇನ್ನೂ ೧೩ ಕೃತಿಗಳು ಬಂದವು. ನನ್ನ ಸಾಧನೆ ? ನನ್ನ ಕೃತಿಗಳಿಗೆ ಮುಖಪುಟ ನಾನೇ ಬರೆಯುತ್ತೇನೆ. ಸಂದರ್ಭಾನುಸಾರ ಚಿತ್ರಗಳು, ರೇಖಾಚಿತ್ರಗಳು ಛಾಯಾಚಿತ್ರಗಳನ್ನೆಲ್ಲ ನಾನೇ ಒದಗಿ ಸುತ್ತೇನೆ. ಹಸ್ತಪ್ರತಿಯ ಬೆರಳಚ್ಚು ನನ್ನದೇ !.... ಸೊಗಸಾದ ಅಡಿಗೆ ಮಾಡುತ್ತೇನೆ. ಬಟ್ಟೆ ಬರೆಗಳ ಮೇಲೆ, ಪತ್ನಿಯ ಸೀರೆಗಳ ಮೇಲೆ ಶಿಲ್ಪ ಚಿತ್ರಗಳ, ಹೂ ಬಳ್ಳಿಗಳ ಡಿಝ್ಯಾನ್ ಬಿಡಿಸುತ್ತೇನೆ. ತರಕಾರಿ ಖರೀದಿ, ಲೆಕ್ಕ–ಪತ್ರ ಕೀರ್ದಿ ಎಲ್ಲವೂ ನನ್ನದೇ"...... ಎಂದು ತಮ್ಮ ಹತ್ತಾರು "ಸಾಧನೆಗಳನ್ನು" ಹೇಳಿಕೊಂಡರು. ಇಂಥ ಸಾಹಿತಿಯನ್ನು ಜಿಲ್ಲೆಯವರು ಈ ಮೊದಲು ಕಾಣುವದಿರಲಿ, ಕಲ್ಪಿಸಿಕೊಂಡಿರಲಾರರು ! ಮಾತೆಲ್ಲ ವ್ಯಂಗ್ಯವೋ ಹಾಸ್ಯವೋ, ನಿಜಸಂಗತಿಯೋ ಎಂದು ಗೊಂದಲ ಮಾಡಿಕೊಂಡವರೂ ಇದ್ದರು.

ನನ್ನ ನಿಜವಾದ ಪೇಚು, ರಾಯರು ಬೆಂಗಳೂರಿಗೆ ಹಿಂದಿರುಗಿದ ನಂತರ ಪ್ರಾರಂಭವಾಯಿತು. ಈಗವರು ತೀರ ಭಿನ್ನ ವ್ಯಕ್ತಿಯಾಗಿ ಮಾರ್ಪಟ್ಟಿದ್ದರು. "ಸದಾಕಾಲ ನೀನು ಆ ಸಭೆ, ಈ ಸಮ್ಮೇಳನ, ಕಾರ್ಯಕ್ರಮ ಎಂದು ಓಡಾಡಿಕೊಂಡಿರುವ ಕಾರಣ ಈಗ ಅರ್ಥವಾಯಿತು ಕಣೇ ! ಆಯಿತು, ಇಷ್ಟು ವರ್ಷ ನೀನು ಸತ್ಕರಿಸಿಕೊಂಡದ್ದು ಸಾಕು. ಇನ್ನು ಮುಂದೆ ನಿಜವಾಗಿ ನಿವೃತ್ತಳಾಗಿ ಮನೆಯಲ್ಲಿ ಇರು. ನಾನು ಈ ಚಟುವಟಿಕೆ ಗಳನ್ನು ನೋಡಿಕೊಳ್ಳುತ್ತೇನೆ !" ಎಂದು ಸುಗ್ರೀವಾಜ್ಞೆ ಹೊರಡಿಸಿ ಬಿಟ್ಟರು. ಹೊಸ ಸೂಟನ್ನು ಹೊಲಿಸಿದರು. ಹೊಸ ಮಾದರಿಯ ಶ್ಯೂ ಖರೀದಿಸಿದರು. ಕರೆಗಂಟೆ ಬಾರಿಸಿದರೆ, ಯಾರಾದರೂ ಆಮಂತ್ರಿಸಲು ಬಂದಿದ್ದಾರೆಯೇ ? ಎಂದು ವಿಚಾರಿಸು ವರು. ಎಂದೂ ಫೋನಿಗೆ ಕೈಹಚ್ಚದವರು, ಅದು ಕಿರುಚಿಕೊಂಡಾಗೊಮ್ಮೆ ಧಾವಿಸಿ ಬರುವರು. ದಿನದ ಅಂಚೆಯಲ್ಲಿ ಆಮಂತ್ರಣವೇನಾದರೂ ಇದೆಯೇ ? ಎಂದು ಕಾತುರತೆ ಯಿಂದ ನೋಡುವರು. ರಾಯರನ್ನು ಅಷ್ಟೊಂದು ಪುಸಲಾಯಿಸಿ ಪ್ರಶಸ್ತಿ ಪಡೆಯಲು ಕಳಿಸಿ ಮಹಾಪರಾಧವಾಯಿತು ಎಂದು ಪರಿತಪಿಸುತ್ತಿದ್ದೇನೆ. ಬಗೆಬಗೆಯ ಪಾಕ ಪ್ರಯೋಗಗಳು, ಸೀರೆಗಳ ಮೇಲಿನ ಕಲಾತ್ಮಕ ಚಿತ್ರಣ, ಒಳ್ಳೊಳ್ಳೆಯ ಛಾಯಾ ಚಿತ್ರಗಳೆಲ್ಲ ನಿಂತೇ ಹೋಗಿವೆ ! ತಾನೊಬ್ಬ ಅಪರೂಪದ ವ್ಯಕ್ತಿ ಇವೆಲ್ಲ ಮೀರಿ ನಿಂತವ, ಎಂಬ ಅರಿವು ಮೂಡಿ, ಬಾಹ್ಯ ಜಗತ್ತನ್ನು ಕಣ್ಣುಬಿಟ್ಟು ನೋಡುತ್ತಿದ್ದಾರೆ. ಅಂತರ್ ಮುಖಿಯಾಗಿ, ಮನೆಯಲ್ಲೇ ಇದ್ದು ಎಷ್ಟೊಂದು ಸಾಧಿಸುತ್ತಿದ್ದರಲ್ಲ ! ಎಂದು ಮಮ್ಮಲ ಮರುಗುವಂತಾಗಿದೆ.

■■

# ೧೩. ಸಾಹಿತಿಯೂ ಸಿರಿವಂತನಾಗಬಲ್ಲ!

"ರೀ! ರೀ! ನಿಮಗೆ ಬಂದ ಸಾಹಿತ್ಯ ಪ್ರಶಸ್ತಿಯಿಂದ ನಮ್ಮ ಬಾಳೆಲ್ಲ ಇಷ್ಟೊಂದು ಗೋಳಿನದಾದೀತು ಎಂದು ಕನಸು-ಮನಸ್ಸಿನಲ್ಲಿಯೂ ಊಹಿಸಿರಲಿಲ್ಲ ಕಣ್ರೀ!" ದೂರದರ್ಶಕದಿಂದ ಕಾಕಸಂಸಾರವನ್ನು ಕಣ್ಣಿಟ್ಟುನೋಡುತ್ತ ಕುಳಿತ್ತಿದ್ದ ರಾಯರ ಗಮನವನ್ನು ನಮ್ಮ ಸಂಸಾರದ ಮುಗ್ಗಟ್ಟಿನತ್ತ ಎಳೆಯಲು ಯತ್ನಿಸಿದೆ.

"ಸಾಹಿತಿಯನ್ನು ವರಿಸಿ ಸುಖಸಂಸಾರ ನಡೆಸುವದು ಅಸಾಧ್ಯವೆಂದು ಎಲ್ಲರಿಗೂ ಗೊತ್ತು! ಈ ರೀತಿ ಜೋರಾಗಿ ಕಿರಿಚಿಕೊಂಡು ಪ್ರಯೋಜನವಿಲ್ಲ!" ಧ್ವನಿಯೇರಿಸದೇ ರಾಯರು ಉತ್ತರಿಸಿದರು.

'ನೋಡಿ, ಕನ್ನಡಾಂಬೆಯ ಸೇವೆ ಕೈಕೊಂಡು ಮೂರು ದಶಕಗಳು ಜಾರಿ ಕೊಂಡವು. ಆದರೂ ಆ ಮಾತೆಯು ಯಾವ ರೀತಿಯಿಂದಲೂ ನಿಮಗೆ ಕರುಣೆ ತೋರಲಿಲ್ಲ....ಎನ್ನುತ್ತಿದ್ದಂತೆ, 'ನಮಗೀಗ ಏನು ಕಡಿಮೆಯಾಗಿದೆ. ಎಂದು ಗೊಣಗುತ್ತಾ ಇದ್ದಿ?' ಬಾಯಿ ಮುಚ್ಚಿಸಲು ಮೃದುವಾಗಿಯೇ ಯತ್ನಿಸಿದರು.

"ನಾನೇನು ವಜ್ರದೋಲೆ ಬೇಕೆನ್ನಲಿಲ್ಲ. ದೊಡ್ಡ ಹವಳಗಳ ಹಾರ ಕೇಳಲಿಲ್ಲ. ಹೊಗಲಿ ಕೆಲಸದವರ ನೆರವಿನ ವೈಭವವನ್ನು ಯಾಚಿಸಲಿಲ್ಲ. ಅಕ್ಕ ಪಕ್ಕದವರು ಮೈಕ್ರೊವೇವ್ ಓವನ್ ಬಳಸುತ್ತಿದ್ದರೆ, ನಮಗೊಂದು ಸಾದಾ ರಿಫ್ರಿಜಿರೇಟರ್, ಕೂಡ ತರಲಿಲ್ಲ" ನೋವನ್ನು ತೋಡಿಕೊಂಡೆ.

'ನಾನೇನು ಬೆಂಗಳೂರು ನವಾಬನಲ್ಲ. ಪತ್ನಿಯ ಬೇಡಿಕೆಗಳನ್ನೆಲ್ಲ ಪೂರೈಸುತ್ತ ಹೋಗಲು ಸಾಧ್ಯವೇ ? ಧನಸಂಪಾದನೆಯೇ ಮುಖ್ಯವಾಗಿದ್ದರೆ ಸರಸ್ವತಿ ಉಪಾಸಕನ ಬದಲು ಲಕ್ಷ್ಮೀಯ ಬೆನ್ನಟ್ಟಿ ಹೋಗುತ್ತಿದ್ದೆ' ವಿವರಣೆ ಕೂಡಲು ಯತ್ನಿಸಿದರು.

"ಕೈಲಾಗದೇ ಬಡತನ ಭೋಗಿಸುವದು ಬೇರೆ. ಆಸಕ್ತಿ ವಹಿಸದೇ ಹಿಂದೆ ಬೀಳುವದು ತೀರ ಬೇರೆ! ನಿಮ್ಮ ಜೊತೆಯವರು, ಮ್ಯಾಟ್ರಿಕ್ ನಪಾಸಾದವರು, ಸೆಲ್ಲೊ ಕಾರಿನಲ್ಲಿ ಓಡಾಡುತ್ತಿದ್ದರೆ ನೀವು ಕಾರಿಡುವದು ಹೋಗಲಿ, ಆಟೋ ರಿಕ್ಷಾ ದುಬಾರಿ ಎಂದು, ನಗರ ಸಾರಿಗೆ ಬಸ್ ಹತ್ತುವದು ಮಾನವಾತೀತ ಸಾಹಸವೆಂದು, ಕಾಲುನಡಿಗೆ ಯಲ್ಲೇ ನಗರವೆಲ್ಲ ಸುತ್ತಾಡುತ್ತೀರಲ್ಲ! ಪತ್ನಿಯಾದವಳಿಗೆ, ಕಳವಳವಾಗದಿರುವದೇ ?" ಎಂದು ತೇವವಾಗದ ಕಣ್ಣೊರಿಸಿಕೊಂಡು, ಜೋರಾಗಿ ಮಾತನಾಡಿದ್ದರಿಂದ ಬಂದ ಕೆಮ್ಮನ್ನು ಬಿಕ್ಕನ್ನಾಗಿಸುವಲ್ಲಿ ಯಶಸ್ವಿಯಾದೆ!

ಅನಿರೀಕ್ಷಿತವಾದ ಈ ಆಘಾತದಿಂದ ರಾಯರು ಕ್ಷಣಕಾಲ ತೆಪ್ಪಗಾದರು. 'ನಮ್ಮ

ಸಾದಾ ಸರಳ ಜೀವನದಿಂದ ನೀನು ಇಷ್ಟೊಂದು ನೊಂದುಕೊಳ್ಳುವಿ ಎಂದು ಅನಿಸಿರಲಿಲ್ಲ. ತ್ಯಾಗದ ಜೀವನದಲ್ಲಿ ಅಭಿಮಾನ ಪಡುತ್ತಿ ಎಂದು ನಾನು ಭಾವಿಸಿದ್ದು ನನ್ನ ತಪ್ಪು !' ಎಂದು ಸಂತೈಸಲು ಯತ್ನಿಸಿದರು.

''ಕೋಪಕ್ಕೆ ಕಾರಣ ಇದೆರೀ ! ಈ ಪ್ರಶಸ್ತಿ ಬರುವ ಮೊದಲು ಆಗೊಮ್ಮೆ ಈಗೊಮ್ಮೆ ಆ, ಈ ವಾರಪತ್ರಿಕೆಗೋ, ವಿಶೇಷಾಂಕಗಳಿಗೋ ಲೇಖ ಬರೆದು ನಾಲ್ಕು ಬಿಡಿಕಾಸು ಸಂಪಾದಿಸುತ್ತಿದ್ದೀರಿ. ಆದರೆ ಈಗ ಸತ್ಕಾರಕ್ಕೆ ಕರೆಯಬಹುದು, ಅಧ್ಯಕ್ಷ ನಾಗಲು ಆಮಂತ್ರಣ ಬರಬಹುದು ಎಂದು ನಿರೀಕ್ಷೆ ಮಾಡುತ್ತ ಬರವಣಿಗೆಯನ್ನು ಸಂಪೂರ್ಣ ನಿಲ್ಲಿಸಿಬಿಟ್ಟಿದ್ದೀರಿ ! ಕೊನೆಗೊಮ್ಮೆ ನನ್ನ ಅತೃಪ್ತಿಯ ಕಾರಣವನ್ನು ಕಾರಿಕೊಂಡೆ.

ಸಾಹಿತಿಗಳೇನು ಮನಸ್ಸು ಮಾಡಿದರೆ ಸಾಹುಕಾರರಾಗಲಾರರೇ ? ಇಂಗ್ಲಂಡ್ ಒಮೇರಿಕೆಗಳಲ್ಲಿ ನೋಡಲ್ಲ ! ಸಾಹಿತಿಗಳ ವಾರ್ಷಿಕ ಉತ್ಪನ್ನ ಕೋಟ್ಯಂತರ ಪೌಂಡು ಹಾಗೂ ಡಾಲರ್‌ಗಳು ! ತಮಗೆ ಬೇಕಾದ ಮಾಹಿತಿ ಪಡೆಯಲು, ಧೀಮಂತರನ್ನು, ತಜ್ಞರನ್ನು ಅವರು ನೇಮಿಸಿಕೊಳ್ಳುತ್ತಾರೆ. ಕಂಪ್ಯೂಟರ್‌ಗಳನ್ನು ಖರೀದಿಸುತ್ತಾರೆ !.......

'ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಯಾವ ವೃತ್ತಿ ಕೈಕೊಂಡರೂ ಬುದ್ಧಿಯಿದ್ದವ ದುಡ್ಡು ಮಾಡುತ್ತಾನೆ' ನಾವಿರುವದು ಭಾರತದಲ್ಲಿ ಭಾರತೀಯರಾಗಿ.......

''ಭಾರತೀಯರಿಗೆ ಏನು ಕಷ್ಟವಾಗಿದೆ ? ಸಲ್ಮಾನ್ ರುಷ್ದೀ, ಇಲ್ಲಿ ಹುಟ್ಟಿದರೂ, ಬ್ರಿಟಿಶ್ ನಾಗರಿಕನಾಗಿ ಹಣವನ್ನು ಗುದ್ದಲಿಯಿಂದ ಎತ್ತತ್ತಿ ತೆಗೆಯುತ್ತಿಲ್ಲವೇ ? ವಿಕ್ರಮ್ ಸೇಠ್, ಆರುಂಧತಿರಾಯ್, ಅಲ್ಪಾವಧಿಯಲ್ಲಿ ಹಣ–ಖ್ಯಾತಿಗಳನ್ನು ಗಿಟ್ಟಿಸಲಿಲ್ಲವೇ ?'' ಸಾಹಿತ್ಯದಿಂದ ಧನಿಕರಾದವರನ್ನು ರಾಯರು ಸ್ಮರಿಸಿಕೊಳ್ಳಲಾರಂಭಿಸಿದರು.

''ಆಹಾ ! ಅವರೆಲ್ಲ ಇಂಗ್ಲಿಷ್ ಭಾಷೆಯಲ್ಲಿ ಬರೆದದ್ದರಿಂದ ಧನಿಕರಾದರು. ಅಲ್ಲದೇ ಕಾಮಶಾಸ್ತ್ರದ ಕರ್ತೃವಿನ ನಾಡಿನವರಿಗೆಲ್ಲ ಆ ಕುರಿತಾದ ಬರೆವಣಿಗೆ ರಕ್ತಗತ ವಾಗಿದೆ, ಎಂದು ಇಂಗ್ಲಿಷ್ ಸಾಹಿತ್ಯ ಪ್ರಕಾಶಕರ ದೃಢವಾದ ನಂಬಿಕೆ ! ಕನ್ನಡಾಂಬೆಯ ಪಾದಗಳನ್ನು ಭದ್ರವಾಗಿ ತಬ್ಬಿಕೊಂಡ ನಿಮಗೆ ಈ ಕಲಾ–ಭಾಷೆ–ಕೃಷಿ ಸಾಧ್ಯವೇ ?'' ಕೆಣಕಿದೆ.

'ಕನ್ನಡ ಬರಹಗಾರನಿದ್ದೂ ಧನಿಕನಾಗುವ ಬೃಹದ್ ಯೋಜನೆಯೊಂದನ್ನು ರೂಪಿಸಿಕೊಳ್ಳುತ್ತಾ ಇದ್ದೆ. ನಡುವೆ ನೀನು ರಿಫ್ರಿಜಿರೇಟರ್‌ನಿಂದ ತಣ್ಣಗಾಗಿಸಿಬಿಟ್ಟೆ ! ಇದ್ದಕ್ಕಿದ್ದಂತೆ ಸಿರಿವಂತಳಾಗುವ ಅವಕಾಶ ಕಳೆದುಕೊಂಡು ಬಿಟ್ಟೆ' ರಾಯರು ದೂರಿದರು.

'ಅದೇನು ಬೃಹತ್‌ಯೋಜನೆ ?' 'ಇಲ್ಲ ಹೇಳುವದಿಲ್ಲ !' ರಾಯರೆಂದರು ತುಂಬ ಅನುನಯ ವಿನಯದ ವಿನಂತಿ ಬಳಿಕ ಗಂಭೀರವಾಗಿ ಪ್ರಾರಂಭಿಸಿದರು.

''ಇಂದಿನ ಯುವ ಪೀಳಿಗೆಗೆ ಅಮೇರಿಕೆ, ಹೇಳಿದ್ದೇ ವೇದವಾಕ್ಯವಷ್ಟೇ ? ಅವರ

ಯಾವತ್ತೂ ನಡಾವಳಿಕೆ ಆದರ್ಶದ್ದಾಗಿ ಬಿಟ್ಟಿದೆ. ಹೀಗಾಗಿ ಇಂಗ್ಲಿಷಿಗೆ ಒಲಿದು, ಕನ್ನಡ ವನ್ನು ಕಸದ ತೊಟ್ಟಿಗೆ ಒಗೆದಿದ್ದಾರೆ. ಮನೆ ಮನೆಗೆ ಟೆಲಿಫೋನ್ ಬಂದು ಕಾಗದ ಬರೆಯುವ ಅಭ್ಯಾಸವೇ ಜನಕ್ಕೆ ಕೈಬಿಟ್ಟು ಹೋಗಿದೆ. ಅದರಂತೆ ದೂರದರ್ಶನ ವಿಶ್ವಜಾಲದಿಂದಾಗಿ ಓದುವ ಪ್ರಕ್ರಿಯೆಯೇ ನಿಂತುಹೋಗಿದೆ ! ಕನ್ನಡಿಗರಲ್ಲಿ ಓದುವ ಅಭಿರುಚಿ ಹೆಚ್ಚಿಸಲೆಂದು ಕನ್ನಡ ಪುಸ್ತಕ ಪ್ರಾಧಿಕಾರವು ಪ್ರಕಟಿತ ಕನ್ನಡ ಪುಸ್ತಕಗಳನ್ನೆಲ್ಲ ಸಾರಾಸಗಟ ಖರೀದಿಸುವ ಯೋಜನೆ ಹಾಕಿಕೊಂಡಿದೆಯಂತೆ. ಅದರ ಲಾಭವನ್ನು ನಾವೇಕೆ ಪಡೆಯಬಾರದು ?'' ರಾಯರ ವಿಚಾರ ಮಂಡನೆ ಆಯಿತು.

ಎಂಥ ಅದ್ಭುತ ವಿಚಾರ! ನಿಮ್ಮ ಯಾವತ್ತೂ ಪುಸ್ತಕಗಳನ್ನು ಇತರರೇ ಪ್ರಕಟಿಸಿದ್ದು ಅಲ್ಲದೇ ಅವುಗಳ ಬೆಲೆಯನ್ನೂ ಕಡಿಮೆ ಇಟ್ಟಿದ್ದರು. ಈಗ ಬಿಡಿಯಾಗಿಯೋ, ಸಗಟಾಗಿಯೇ ಮಾರಿ ಲಾಭ ಬರುವದುಂಟೇ ?' ಅವರ ಉತ್ಸಾಹಕ್ಕೆ ತಣ್ಣೀರೆರಚಿದೆ.

''ಹೆಂಗಳೆಯರ ವ್ಯವಹಾರ ಜ್ಞಾನ ಶೂನ್ಯ ! ಎಂಬ ನಂಬಿಕೆ ಮನು ಮಹರ್ಷಿಯ ಕಾಲದಿಂದ ನಡೆದು ಬಂದಿದ್ದು ಅದು ಸುಳ್ಳಲ್ಲ ಎಂದು ತೋರಿಸಿಕೊಂಡಿರುವಿ ! ಕೆಲ ಪ್ರಕಾಶಕರು ಗೌರವಧನ ಕೊಡುವ ಬದಲಾಗಿ ಕೃತಿಗಳ ಪ್ರತಿಗಳನ್ನೆ ಹೆಚ್ಚೆಚ್ಚು ಒದಗಿಸ ಲಿಲ್ಲವೇ ? ಅದೇನು ಔದಾರ್ಯ ಚಿಕ್ಕದೇ ? ಅವನ್ನೆಲ್ಲ ಪರಿಚಯದವರಿಗೆಲ್ಲ ಕೊಡುವ ಮನಸ್ಸು ಮಾಡಲಿಲ್ಲವಾದ್ದರಿಂದ ಹಾಗೆ ಕುಳಿತಿವೆ ! ಅವನ್ನೇ ಸಗಟಾಗಿ ಪೂರೈಸಿದರೆ, ಎಷ್ಟೋ ಸಂಪಾದಿಸಬಹುದು'' ರಾಯರೆಂದರು.

'ಮೂಗಿನಿಂದ ಊಟ ಮಾಡಿದರೆ ಹೊಟ್ಟೆ ತುಂಬುತ್ತದೆಯೇ ? ಎಂಬ ಕೊಂಕಣಿ ಗಾದೆ ಇದೆಯಲ್ಲ? ಅಲ್ರೀ ! ಆ ಎಲ್ಲಾ ಪ್ರತಿಗಳನ್ನು ನೀವೇ ಹೊತ್ತೊಯ್ದು ಮಾರಿದರೂ ಒಂದು ತಿಂಗಳ ಖರ್ಚನ್ನು ನಿಭಾಯಿಸುವದು ಸಾಧ್ಯವಾಗಲಿಕ್ಕಿಲ್ಲ ! ಮನುವಿನ ಅಭಿಪ್ರಾಯ ಹೇಗೇ ಇರಲಿ. ನಿಮ್ಮಿಂದ ಈ ರೀತಿ ಧನಸಂಪಾದನೆ ಸಾಧ್ಯವಿಲ್ಲ! 'ವಿಚಾರ ವಾದಿಯಾಗಿ ಮಾತನಾಡಿದೆ.

'ಏಯ್ ! ಪ್ರತಿವಾರ ಪತ್ರಿಕೆಯ ಸಾಪ್ತಾಹಿಕ ಪುರವಣಿಯಲ್ಲಿ ಹೊಸ ಪ್ರಕಟಣೆ, ನವಪ್ರಕಾಶನಗಳ ಬೆಲೆಯತ್ತ ಕಣ್ಣು ಹಾಯಿಸಿರುವೆಯಾ ? ಪ್ರಾಣಿ ಸಂಪತ್ತು, ಬನಸಿರಿ, ಖೇಚರಸಿರಿ ಪುಸ್ತಕಗಳ ಬೆಲೆ ನೋಡಿರುವಿಯಾ ? ಬೆಲೆ ನಾಲ್ಕು ನೂರರಿಂದ ಆರು ನೂರುಗಳ ತನಕ ಇದೆ. ಕಲೆಯ ಕುರಿತಾದವಕ್ಕೆ ಇನ್ನೂ ಹೆಚ್ಚಿನ ಬೆಲೆ ! 'ಕಾವಿಕಲೆ' ಪುಸ್ತಕಕ್ಕೆ ಹದಿನೈದು ರೂಪಾಯಿ ಇದೆಯಲ್ಲ ಅದರ ಮುಂದೆ ಒಂದು ಸೊನ್ನೆ ಸೇರಿಸಿದರೆ ನನ್ನ ಈ ಪುಸ್ತಕದ ಬೆಲೆ ನೂರ ಐವತ್ತು ರೂಪಾಯಿ ಆಗುತ್ತದೆ ! ಅದರಂತೆ ಪಶು ಪಕ್ಷಿ ಪ್ರಪಂಚದ ಬೆಲೆ ಮೂವತ್ತರಿಂದ ಮುನ್ನೂರಕ್ಕೆ ಏರಿಸಬಹುದು. ಹೀಗೆ ನಮ್ಮಲ್ಲಿರುವ ಪುಸ್ತಕಗಳ ಮೊತ್ತವನ್ನು ಬಾಯಿಂದ ಲೆಕ್ಕಮಾಡಲು ನಿನಗೆ ಆದೀತೇ ?' ತಮ್ಮ ಬುದ್ಧಿಚಾತುರ್ಯ ವನ್ನು ಪ್ರದರ್ಶಿಸಿದರು.

'ಯಾರೇ ಆದರೂ ತಿದ್ದಿದ ಬೆಲೆಯನ್ನು ಕಣ್ಣುಮುಚ್ಚಿಕೊಳ್ಳುತ್ತಾರೆಯೇ ? ಅದೂ ಕನ್ನಡ ಓದುಗರು ? ನಿಮ್ಮ ಮೇಲೆ ಮೋಸ ವಂಚನೆಗಳ ಆಪಾದನೆ ಬಂದೀತು ! ಮೊಕದ್ದಮೆ ಹೂಡುವ ಸಾಧ್ಯತೆಯನ್ನೂ ಮರೆಯುವಂತಿಲ್ಲ' ನಾನು ಎಚ್ಚರಿಸಿದೆ.

'ಪೇಟೆಯ ವ್ಯವಹಾರವನ್ನೆಲ್ಲ ನಾನೇ ನೋಡಿಕೊಳ್ಳುತ್ತಿರುವದರಿಂದ ಬೆಲೆಗಳತ್ತ ನೀನು ಕಣ್ಣುಹಾಯಿಸಿದಂತಿಲ್ಲ. ಚಹಾ, ಕಾಫಿ, ಔಷಧಿಗಳ ಬೆಲೆ ಪ್ರತಿವಾರಕ್ಕೆ ಬದಲಾಗುತ್ತಲಿವೆ. ನಿನ್ನ ಔಷಧಿ–ಮಾತ್ರೆಗಳ ಬೆಲೆ ಒಂದೇ ತಿಂಗಳಲ್ಲಿ ಹದಿನೇಳು ರೂಪಾಯಿಯಿಂದ ಮೂವತ್ತೆರಡಕ್ಕೆ ಏರಿದ್ದು ಸುಳ್ಳೆ ? ಅವಕ್ಕೆಲ್ಲ ಹಳೆಬೆಲೆಯ ಮೇಲೆ, ಹೊಸ ಬೆಲೆ ಎಂದು ಚೀಟಿ ಅಂಟಿಸಿ ಬಿಡುತ್ತಾರೆ. ಔಷಧಿ ಕಂಪನಿಯವರು ಮಾಡಿದ್ದನ್ನು ಬಡ ಸಾಹಿತಿ ಮಾಡಿದರೆ ಅಪರಾಧವಾಗುತ್ತದೆಯೇ ?' ನ್ಯಾಯ ನಿರ್ಣಯಕ್ಕಾಗಿ ನನ್ನ ಮುಖ ನೋಡಿದರು.

ಸಾಹಿತಿಗೆ ಯಾರ ಬೆಂಬಲವೂ ಇರುವದಿಲ್ಲ. ನೀವು ಹೀಗೆ ಮಾಡುವದು ಸಿಕ್ಕಿ ಹಾಕಿಕೊಳ್ಳುವದು, ಸುಲಭವೆಂದು ನನ್ನ ಆತ್ಮ ಹೇಳುತ್ತದೆ, ನನ್ನ ವ್ಯವಹಾರ ಚಾತುರ್ಯ ತೋರಿದೆ.

'ಹೋಗಲಿ, ಈಗ ಸಾಹಿತ್ಯ ಆಕಾಡೆಮಿಯವರು ಉತ್ತಮ ಕೃತಿಗೆ ಕೊಡುವ ಗೌರವಧನದ ಮೊತ್ತ, ಸಾಕಷ್ಟು ಏರಿಸಿದ್ದಾರಂತೆ ? ಅದಕ್ಕಾಗಿ ಯತ್ನಿಸಬಹುದಲ್ಲ ?' ಇದು ಅತ್ಯಂತ – ಸುಲಭ ಉಪಾಯ ಎನ್ನುವಂತೆ ಕೇಳಿದರು.

'ಕಳೆದ ಮೂರು ವರ್ಷಗಳಲ್ಲಿ ಒಂದೂ ಕೃತಿಯನ್ನು ಬರೆದಿಲ್ಲ ! ಬರೆಯದ, ಪ್ರಕಟವಾಗದ ಕೃತಿಗೆ ಬಹುಮಾನ ಕೊಡುವ ಉದಾರ ಪದ್ಧತಿ, ನಮ್ಮಲ್ಲಿನ್ನೂ ಜಾರಿಗೆ ಬಂದಿಲ್ಲ!'.

'ಹಿಂದೆ ಬರೆದು ಪ್ರಕಟವಾದರೂ ಬಹುಮಾನಕ್ಕೆ ಪರಿಗಣಿಸದ ಪುಸ್ತಕಗಳು ಇವೆಯಷ್ಟೇ ? ಅವುಗಳ ಪ್ರಕಟಿತ ವರ್ಷದ ದಾಖಲೆಯ ಹಾಳೆಗಳನ್ನು ಬದಲಾಯಿಸಿದರಾಯಿತಲ್ಲ ?' ಈ ಕೆಲಸದಲ್ಲಿ ತಾವು ಪರಿಣಿತರು ಎಂಬ ಗೆಲುವಿನ ಧ್ವನಿಯಲ್ಲಿ ಹೇಳಿದರು.

'ಅದೊಂದು ಬಾಕಿ ! ಆಕಾಡೆಮಿ ಆಫೀಸಿನ ನಳಿನಿ, ನಿಮ್ಮ ಎಲ್ಲ ಕೃತಿಗಳನ್ನು ಓದಿದಾಳ್ರಿ. ಕೆಲವುಗಳಲ್ಲಿಯ ವಾಕ್ಯಗಳಂತೂ ಕಂಠಪಾಠ ಅವಳಿಗೆ. ಬಹುಮಾನಕ್ಕೆ ಬಂದ ಕೃತಿಗಳ ಪರಾಮರ್ಶೆ ಮೊದಲಿಗೆ ಅವಳದ್ದೇ ಜವಾಬ್ದಾರಿ' ವಾಸ್ತವ ಪ್ರಪಂಚಕ್ಕೆ ಅವರನ್ನು ತರಲು ಯತ್ನಿಸಿದೆ.

''ಅವಳು ಅಲ್ಲಿ ಇರುವಳೆಂದೇ ಈ ಯೋಜನೆ ಹೊಳೆದದ್ದು. ಯಾರೂ ಮೆಚ್ಚಿಕೊಳ್ಳದ, ಯಾರೂ ಓದದ, ಓದಿದವರಿಗೆ ಅರ್ಥವಾಗದ, ತೀರ್ಪುಗಾರ ಸಮಿತಿಯವರು ತಿರಸ್ಕರಿಸಿದ ಕೃತಿಯೇ ಕೆಲವರ್ಷಗಳ ಹಿಂದೆ ಶ್ರೇಷ್ಠ ಕೃತಿಯೆಂದು ಬಹುಮಾನ ಗಿಟ್ಟಿಸಿದ ಘಟನೆ ನೆನಪಿಲ್ಲವೇ ? ಅದೇ ಆಧಾರವಾಗಿ ಕೇಂದ್ರ ಅಕಾಡೆಮಿಯೂ ಭಾಷೆಯ ಸರ್ವೋತ್ತಮ ಕೃತಿಯೆಂದು ಇಪ್ಪತ್ತೈದು ಸಹಸ್ರ ರೂಪಾಯಿ ಕೊಡ ಮಾಡಿತು. ಯಾವ ಶ್ರಮವಿಲ್ಲದೇ ಒಂದೇ ಪುಸ್ತಕ ಮೂವತ್ತೈದು ಸಹಸ್ರ ಗಿಟ್ಟಿಸಿದ್ದು ಸುಳ್ಳೇ ?'' ತನಗೇ ಅದು ದಕ್ಕಿದ್ದ ಸಂಭ್ರಮವೆಂಬಂತೆ ರಾಯರು ನಲಿದರು.

"ಈ ತಿರುಕನ ಕನಸಿನಂತಹ ವ್ಯವಹಾರ ನಿಮಗೆ ಹೇಳಿದ್ದಲ್ಲ, ವ್ಯಾಪಾರಿ ಕುಟುಂಬ ದಲ್ಲಿ ಜನ್ಮವೆತ್ತಿ ಬಂದವರು ನೀವು. ಹುಟ್ಟಾ ಬಂದ ಆ ಬುದ್ಧಿಯನ್ನು ಉಪಯೋಗಿಸ ಬಾರದೇ ?' ಅಭಿಮಾನವನ್ನು ಬಡಿದೆಬ್ಬಿಸಲು ಯತ್ನಿಸಿದೆ.

"ಅತ್ಯಂತ ಹೊಸದಾದ ಯೋಜನೆಯನ್ನು ರೂಪಿಸಿದ್ದೇನೆ ! ರಾಜಧಾನಿಯಲ್ಲಿ ನಾಡಿನಲ್ಲೆಲ್ಲ ಸಾಹಿತ್ಯಿಕ ಚಟುವಟಿಕೆಗಳನ್ನು ಏರ್ಪಡಿಸಿಯೇ ಧನಿಕರಾಗಿರುವ ಪ್ರತಿಭೆಗಳು ಕಾಣಸಿಕೊಂಡಿವೆಯಂತೆ..... ಬಹಳಷ್ಟು ಬರೆದ, ಪ್ರತಿಭೆಯೇ ಇಲ್ಲದ, ಆದರೆ ಪ್ರಚಾರಕ್ಕೆ ಹಂಬಲಿಸುವ, ಪ್ರಭಾವವಲಯಗಳಲ್ಲಿ ಸುತ್ತಾಡುವ ಸಾಕಷ್ಟು ಸಾಹಿತಿ ಗಳಿದ್ದಾರಲ್ಲ ? ಅಂಥವರನ್ನು ಸಂಘಟಿಸಿ ಸಾಹಿತ್ಯ ಸಮ್ಮೇಳನ ನಡೆಸಿ ಯಶಸ್ವಿಯಾಗಿದ್ದಾ ರಂತೆ. ಹಣವನ್ನೂ ಗಳಿಸಿದ್ದಾರಂತೆ"– ಯೋಜನೆಯ ಮಹತ್ವವನ್ನು ತಿಳಿಯ ಪಡಿಸಿದರು.

'ಹೊಸ ಯೋಜನೆ ಇದ್ದೀತು ! ಆದರೆ ಇದರಿಂದ ಧನಸಂಪಾದನೆ ಹೇಗೆ ಆಗುತ್ತದೆ. ಎಂಬುದು ಅರ್ಥವಾಗಲಿಲ್ಲ' ವಿವರಗಳಿಗಾಗಿ ಕಾದೆ.

'ಕರ್ನಾಟಕದ ವಿವಿಧ ವಿಶ್ವವಿದ್ಯಾಲಯಗಳ ಕುಲಪತಿ, ಉಪಕುಲಪತಿ, ಕನ್ನಡ ಸಂಸ್ಥೆಗಳ ನಿರ್ದೇಶಕರು, ಪರಿಷತ್ತುಗಳ ಅಧ್ಯಕ್ಷರು ಇವರೆಲ್ಲ ಅಕಾಡಮಿ ಅಧ್ಯಕ್ಷರು ಗಳನ್ನು ಆಯ್ಕೆ ಮಾಡುತ್ತಾರಂತೆ. ಅವರ ಅಧಿಕಾರ ಮತ್ತು ವೈಯಕ್ತಿಕ ವರ್ಚಸ್ಸು ಮುಂತಾ ದವುಗಳಿಂದ ಸಮ್ಮೇಳನದ ಏರ್ಪಾಡು ಮಾಡುವದು ಉಸಿರಾಡಿಸಿದಷ್ಟು ಸುಲಭ !' ಬಳಸುದಾರಿ ತುಳಿಯಲಾರಂಭಿಸಿದರು ರಾಯರು.

"ಅದೆಲ್ಲ ನಿಜವಿರಬಹುದು. ಆದರೆ ಇಲ್ಲಿ ಹಣದ ವ್ಯವಹಾರ ಎಲ್ಲಿಂದ ಬಂದಿತು ?" ಅರ್ಥವಾಗದೇ ಕೇಳಿದೆ.

"ತಾಳ್ಮೆಯಿಂದ ಕೇಳುವಂಥವಳಾಗು !........ ಯಾವುದೋ ಬೃಹತ್ ಸಮ್ಮೇಳನ ಸಂಘಟಿಸಲಿದ್ದೇವೆ, ಎಂದು ರಾಜ್ಯಮಟ್ಟದ ಪತ್ರಿಕೆಗಳಿಗೆ ಮನವರಿಕೆ ಮಾಡಲು ಸಭೆ ಕರೆದು ಸಾಕಷ್ಟು ಸಾಮುಗ್ರಿಯ ಕರಪತ್ರಗಳನ್ನು ಹಂಚುವದು. 'ವಿಶೇಷ ಪುರವಣಿ' ಸಂಸ್ಕೃತಿ – ಪರಿಚಯ, ಪ್ರತಿಭಾ ಪರಿಚಯಗಳನ್ನು ಹೊರ ತರಲು ಪ್ರೋತ್ಸಾಹಿಸುವದು. ಅವುಗಳಲ್ಲಿ ಪ್ರಕಟಿಸಲು ಬೇಕಾಗುವ ಜಾಹೀರಾತುಗಳನ್ನು ಮುಂದಾಗಿ ನಾವೇ ಸಂಗ್ರಹಿಸಿಕೊಡುವದು. ಈ ಸೇವೆಗೆ ಪತ್ರಿಕೆಯವರು ಶೇಕಡಾ ಐವತ್ತರಷ್ಟು ಕಮಿಷನ್ ಕೊಡಮಾಡುತ್ತಾರೆ, ಎಂಬ ರಹಸ್ಯವನ್ನು ಕಂಡು ಹಿಡಿದಿದ್ದೇನೆ" ಗೆಲುವಿನ ನಗೆ ನಕ್ಕರು.

'ಆದರೆ ಸಮ್ಮೇಳನದ ಸಂಘಟನೆಯ ಹಣ ಹೇಗೆ ಜೋಡಿಸುವದು ?' ಪುನಃ ಅದೇ ನನ್ನ ಪ್ರಶ್ನೆ.

ಅಲ್ಲಿಯೇ ಅಡಗಿದೆ ಚಾಣಾಕ್ಷತನ. ಅದ್ವಿತೀಯ ಸಾಹಿತಿಯ ಸ್ಥಾನ ಮಾನಕ್ಕನು ಗುಣವಾಗಿ ಸಮ್ಮೇಳನ ನಡೆಸಬೇಕೆಂದು ರಾಜ್ಯ ಸರಕಾರ, ಸಾಂಸ್ಕೃತಿಕ ಸಂಸ್ಥೆಗಳು, ಧರ್ಮಸಂಸ್ಥೆಗಳು, ವ್ಯಾಪಾರಿಗಳು, ದಾನಿಗಳು ಎಲ್ಲರ ಬಳಿ ಕಾಡಿ, ಬೇಡಿ, ಲಕ್ಷಾಂತರ ರೂಪಾಯಿಗಳನ್ನು ಶೇಖರಿಸುವದು. ಅಬಕಾರಿ ಗುತ್ತಿಗೆದಾರರು ಕೆಲವರು ನಗದು

ಕೊಡುವವರೂ ಇದ್ದಾರೆ ! ಗೊತ್ತೆ ? ಆ ಹಣ ಜೇಬಿಗಿಳಿಸಿ ಚೆಕ್‌ಗಳನ್ನು ಸಮ್ಮೇಳನ ಖಾತೆಗೆ ಜಮಾ ಮಾಡಿಸುವದು.........ಹೇಳುತ್ತಿದ್ದಾಗ ನಡುವೆಯೇ 'ಸರಿ ವಂತಿಗೆ, ಚಂದಾ ಎಂದು ಹಣಕೊಟ್ಟವರು ಆ ಕುರಿತು ವಿಚಾರಿಸುವದಿಲ್ಲವೇ ?' ನಾನು ಕೇಳಿದೆ.

''ಈ ಕುರಿತು ಯೋಚಿಸದೇ ಇರುತ್ತಾನೆಯೇ ? ಚಿಕ್ಕ ಪುಟ್ಟ ಪ್ರಕಟನೆಗಳಿಗೆ ವಿಕಾಸನು (ನಮ್ಮ ಮಗ) ಸಾವೇ ಮುದ್ರಿಸಲು ಅನುಕೂಲವಾಗುವಂತೆ ಅಮೇರಿಕೆ ಯಿಂದ ಡಿ.ಟಿ.ಪಿ. ಯಂತ್ರ ತಂದು ಕೊಟ್ಟಿಲ್ಲವೇ ? ಅದನ್ನು ಬಳಸಿ ನಾನೇ 'ಸ್ಮರಣ–ಸಂಚಿಕೆ'ಯನ್ನು ಸಿದ್ಧ ಮಾಡುವೆ. ಅದರಲ್ಲಿ ಆಕ್ಷೇಪ ಎತ್ತಬಹುದಾದ ದೇಣಗಿದಾರರ ಜಾಹೀರಾತುಗಳನ್ನು ಸೇರಿಸುವದು ತುಂಬ ಸುಲಭ. ಅದರಂತೆ ಆಮಂತ್ರಣ ಪತ್ರಿಕೆ ಗಳನ್ನು ಅತಿ ಸೀಮಿತ ಸಂಖ್ಯೆಯಲ್ಲಿ ಮುದ್ರಿಸಿ ಗಣ್ಯರಿಗಷ್ಟೇ ಕಳಿಸುವದು. ಪ್ರಚಾರ ಜಾಸ್ತಿ, ಕಡಿಮೆ ಖರ್ಚು !'' ಅವರ ಕಲ್ಪನಾ ವಿಲಾಸದಲ್ಲಿ ನಾನೂ ಪಾಲುಗೊಳ್ಳಲು ಯತ್ನಿಸುತ್ತ'ಆಮಂತ್ರಣ ಪತ್ರಿಕೆಯಲ್ಲಿ ಹೆಸರು ಸೇರಿಸಲು ಸಾಹಿತಿಗಳು ಬೇಕಲ್ಲ? ಅವರ ಒಪ್ಪಿಗೆ ಪಡೆಯಬೇಕಲ್ಲ?' ಕೇಳಿದೆ.

''ವಯೋವೃದ್ಧ, ಜ್ಞಾನವೃದ್ಧ ಸಾಹಿತಿಗಳೆಲ್ಲ ಇಂಥ ಸಮ್ಮೇಳನದಲ್ಲಿ ಪಾಲು ಗೊಳ್ಳಲು ಸಾಧ್ಯವೇ ? ಅವರಂತೂ ಬರುವದಿಲ್ಲವಾದ್ದರಿಂದ ಒಪ್ಪಿಗೆ ಪಡೆಯದೆಯೇ ಹೆಸರು ಸೇರಿಸುವದು ! ಬಾರದೇ ಇದ್ದುದರಿಂದ ಸಾಹಿತಿಗಳೆನಿಸಿಕೊಳ್ಳಲು ಹಪಹಪಿಸುವ ಸ್ಥಳೀಯರು ಇದ್ದೇ ಇರುವರಲ್ಲ? ಅವರಲ್ಲಿ ಒಬ್ಬರಿಗೆ ವೇದಿಕೆಯನ್ನು ಅಲಂಕರಿಸುವಂತೆ ಕೇಳಿಕೊಂಡರಾಯ್ತು ! ಈ ಅವಕಾಶಕ್ಕಾಗಿ ಸಿದ್ಧರಾಗಿಯೇ ಇರುತ್ತಾರೆ. ಗೋಷ್ಠಿಗಳ ಅಧ್ಯಕ್ಷರು, ನಿರ್ವಾಹಕರು, ಉದ್ಘಾಟಕರು, ಸಮಾರೋಪಕಾರರು, ಯಾರೂ ಬರದಿದ್ದರೂ ಗಾಬರಿಯಾಗಬೇಕಿಲ್ಲ, ಪ್ರೇಕ್ಷಕರಾಗಿ ಬಂದವರಲ್ಲಿಯೇ ಕೆಲವರನ್ನು ವಿನಂತಿಸಿ ವೇದಿಕೆಯ ಮೇಲೆ ಬರಲು ಕೇಳಿಕೊಂಡರಾಯಿತು !'' ಎಲ್ಲ ಸಂಘಟನೆಯೂ ಅತಿ ಸುಲಭ ಎನ್ನುವಂತೆ ವಿವರಿಸಿದರು.

'ಅಲ್ರೀ ! ಯಾವ ಸಿದ್ಧತೆ ಇಲ್ಲದೇ ನೀವು ಎಳೆದು ತಂದವರು ತರುವವರು, ಪ್ರಬಂಧ ಹೇಗೆ ಮಂಡಿಸಬಲ್ಲರು, ತಕ್ಷಣ ?' ಬೆಪ್ಪಾಗಿ ಕೇಳಿದೆ.

''ಮಳ್ಳಿ ! ಇಂಥ ಗೋಷ್ಠಿ–ಸಮ್ಮೇಳನಗಳಲ್ಲಿ ಒಂದೇ ಭಾಷಣ ಮಾಡಿಯೋ ಪ್ರಬಂಧ ಓದಿಯೋ ಅವರಿಗೆ ಕಂಠಸ್ಥವಾಗಿ ಬಿಟ್ಟಿರುತ್ತದೆ. ಅಷ್ಟೂ ಆಗದಿದ್ದರೆ ನಾನೇ ಬರೆದ ಚಿಕ್ಕ ಭಾಷಣಗಳ ಪುಟಗಳು ತಯಾರು ಇದ್ದೇ ಇರುತ್ತವೆ. ಯಾರಿಗೂ ೨-೩ ನಿಮಿಷ ಗಳಿಗಿಂತ ಹೆಚ್ಚು ಸಮಯ ಕೊಡಲಾಗುವದಿಲ್ಲವೆಂದು ಘೋಷಿಸಿಯೇ ಬಿಟ್ಟಿರುವದ ರಿಂದ ವೇದಿಕೆ ಏರುವ ಸಮಯದಲ್ಲಿ ನಾನು ಅವರ ಕೈಗೆ ಸೇರಿಸಿದ ಹಾಳೆಯಿಂದ ಕೆಲಸ ಆದಂತೆಯೇ !''.

''ಅರ್ಥಾತ್, ಸ್ವಾಗತಾಧ್ಯಕ್ಷರಿಂದ ಹಿಡಿದು ಪತ್ರಿಕಾಗೋಷ್ಠಿಯವರೆಗೆ ಇದು ನಿಮ್ಮೊಬ್ಬರದೇ ಸಮ್ಮೇಳನವೆಂದಾಯ್ತು!' ಕೊಂಕುನುಡಿದೆ.

''ಹಾಗೇನಿಲ್ಲ! ನಿನಗೂ ಇದರಲ್ಲಿ ಸಕ್ರಿಯವಾಗಿ ಪಾಲುಗೊಳ್ಳಲು ಅವಕಾಶವಿದೆ. ಮಹಿಳಾಗೋಷ್ಠಿಯ ಉದ್ಘಾಟನೆ, ಅಧ್ಯಕ್ಷತೆ, ನಿರ್ವಹಣೆ, ಸಮ್ ಆರೋಪ ಎಲ್ಲವೂ

ನಿನ್ನದೇ ! ಪ್ರೇಕ್ಷಕ–ಶ್ರೋತೃಗಳಲ್ಲಿ ನಿನ್ನ ಸ್ನೇಹಿತೆಯರಿದ್ದರೆ, ಅವರಿಗೂ ಒಂದೊಂದು ಅವಕಾಶ ಕಲ್ಪಿಸಿ ಕೊಡೋಣ'' ತಮ್ಮ ಸಾಹಸದಲ್ಲಿ ನನಗೂ ಆಸಕ್ತಿ ಹುಟ್ಟಿಸುವ ಕಳಕಳಿಯಿಂದ ನುಡಿದರು.

'ಅದೆಲ್ಲ ಸರಿ, ಸಮ್ಮೇಳನ ನಡೆಸಲು ಹಾಲ್ ಸಭಾಗೃಹ ಬೇಕು. ಆತಿಥ್ಯ ಉಪಚಾರ ಆಗಬೇಕು. ಊಟ–ತಿಂಡಿ–ವಸತಿ ?' ಈ ಎಲ್ಲ ಕೆಲಸ ನನ್ನ ತಲೆಗೆಲ್ಲಿ ಕಟ್ಟುವರೋ ! ಎಂಬ ಅಳುಕಿನಿಂದ ನುಡಿದೆ.

''ಈ ಸಮ್ಮೇಳನದಲ್ಲಿ ಪ್ರೇಕ್ಷಕರ ನೂಕು–ನುಗ್ಗಲಾಗುವ ಸಾಧ್ಯತೆ ಇಲ್ಲ, ಆದ್ದರಿಂದ ದೀಪಾವಳಿ ರಜೆಯಲ್ಲಿ ನಮ್ಮೂರಿನ ಬಾಲವಾಡಿ ಅಥವಾ ಹ್ಯಾಸ್ಕೂಲ್ ಕಟ್ಟಡವನ್ನು ಕೇಳಿದಾಕ್ಷಣ ಕೊಟ್ಟು ಬಿಡುತ್ತಾರೆ. ದೇವಸ್ಥಾನದ ಗುಡಾರಗಳು ಕೈಗಡ ತಂದು ಹಾಕಿದರೆ, ನೂರಿನ್ನೂರು ಜನ ಸುಖವಾಗಿ ಕೂಡ್ರಬಹುದು. ಖಾಲಿ ಬಿಸಲೇರಿ ಬಾಟ್ಲಿಗಳಲ್ಲಿ ಮಡಕೆ ನೀರು ತಂದಿಟ್ಟರೆ, ಬಿಸಿಲ ಬಾಯಾರಿಕೆ ಕಳೆದೀತು. ಚಹಾ–ಕಾಫಿ–ಊಟದ ವ್ಯವಸ್ಥೆಯನ್ನು ಕಾಮತ್ ಹೊಟೇಲಿನವರಿಗೆ ಒಪ್ಪಿಸಬೇಕೆಂದಿದ್ದೇನೆ. ಒಂದಾನೊಂದು ಕಾಲದಲ್ಲಿ ನಾವೂ ಅವರೂ ಒಂದೇ ಕುಟುಂಬದವರಾಗಿದ್ದೆವು, ಎಂದು ಪುಸಲಾಯಿಸಿ ಅವರು ಲಕ್ಷ್ಮೀಪುತ್ರರಾಗಿ ಮೆರೆದದ್ದು ಒಂದು ಪವಾಡವೆಂದು ವರ್ಣಿಸಿದರೆ ಸಂತೋಷ ಪಡದೇ ಇರುತ್ತಾರೆಯೇ ? ಅವರ ಹತ್ತಿರ ಹಣದ ಹೊಳೆ ಹರಿಯುತ್ತಿದೆ. ಒಂದು ದಿನದ ಉತ್ಪನ್ನ ಸರಸ್ವತಿ ಸೇವೆಗೆ ಕೊಡ ಮಾಡಲು ಇಲ್ಲವೆನ್ನುತ್ತಾರೆಯೇ ?''.

ಎಂದೂ, ಯಾರನ್ನೂ ಇಂಥ ವಿಚಾರಕ್ಕೆ ಕೇಳದವರು ಬಾಯಿ ಬಿಡುವದು ಪವಾಡವೇ ! ರಾಯರೂ ಕೊನೆಗೊಮ್ಮೆ ವ್ಯಾವಹಾರಿಕವಾಗಿ ವರ್ತಿಸಬಲ್ಲರೇ ಎಂದು ವಿಸ್ಮಯಪಡುತ್ತ,

'ಎಲ್ಲವೂ ನಿಮ್ಮ ಮುಂದಾಲೋಚನೆಯಂತೆಯೇ ನಡೆದು ಹೋಗುತ್ತದೆ ಎಂದೇ ಇಟ್ಟುಕೊಳ್ಳೋಣ. ಸಮ್ಮೇಳನ ಮುಗಿದ ಬಳಿಕ ಸ್ವಾಗತ ಸಮಿತಿಯವರು, ಲೆಕ್ಕ–ಪತ್ರ ಕುರಿತು ವಿಚಾರಿಸಿದರೆ ಏನು ಮಾಡುವಿರಿ ?' ಕೊನೆಯ ಪ್ರಶ್ನೆ ಕೇಳಿಯೇ ಬಿಟ್ಟೆ.

''ಸ್ಥಳೀಯ ಸ್ವಾಗತ ಸಮಿತಿಯವರು ಧನಸಂಗ್ರಹಣೆಯಲ್ಲಿ ಸಕ್ರಿಯ ಸಹಕಾರ ನೀಡಿಯೇ ಇಲ್ಲವೆಂಬ ಸತ್ಯವನ್ನು, ಆಪಾದನೆಯಾಗಿ ಪರಿವರ್ತಿಸಿ ಮೊದಲಲ್ಲೇ ಅವರೆಲ್ಲರಿಗೆ ಕಸಿವಿಸಿಯಾಗುವಂತೆ ಮಾಡುತ್ತೇನೆ. ನಂತರ ಈ ಸಮ್ಮೇಳನ ನೆರವೇರಿಸಿ ಕೈ ಸುಟ್ಟುಕೊಂಡಿದ್ದೇನೆ. ಖರ್ಚು ಹೆಚ್ಚಾಗಿ ಚಂದಾ–ಎಲ್ಲಿಗೂ ಸಾಲದೇ ಹೋಯಿತು. ಖೋತಾ ಆದ ಹಣ ನೀವುಗಳು ಭರಪಾಯ್ ಮಾಡುವದಾಗಿ ಲೇಖಿಕೊಟ್ಟರೆ, ಪ್ರತಿ ನಯಾಪೈಸಾ ಲೆಕ್ಕಾಚಾರ ಒಪ್ಪಿಸಲು ಸಿದ್ಧ ಎಂದು ಅವರ ಬಾಯಿ ಮುಚ್ಚಿಸುತ್ತೇನೆ. ಒಂದೇ ಒಂದು ಇಂಥ ಸಮ್ಮೇಳನ ಏರ್ಪಡಿಸಿ ಕಡಿಮೆ ಎಂದರೆ ಎರಡು ಲಕ್ಷ ರೂಪಾಯಿಗಳನ್ನಾದರೂ ಜೇಬಿಗೆ ಇಳಿಸಬಹುದು ಎಂದು ನನ್ನ ಲೆಕ್ಕಾಚಾರ ! ಸಾಹಿತಿಯೇನು ವ್ಯಾಪಾರಿಯಾಗಲಾರನೇ !'' ಹೆಮ್ಮೆಯಿಂದ ಬೀಗಿದರು ರಾಯರು.

ನಾನು ಬಾಯ್ತೆರೆದು ಕೇಳುತ್ತಲೇ ಇದ್ದೆ.

‘‘ಮುಂದೆ ಕೇಳೆಲೆ ಕೆಳದಿ! ಕಾಮತ್ ಹೊಟೇಲಿನವರು, ಹಣಕ್ಕಾಗಿ ಬಂದು ವೇಳೆ ಪಿಡಿಸುವ ಸಾಧ್ಯತೆ ಕಂಡು ಬಂದರೆ, ದೇಣಗಿ (ಕೊಡುಗೆ) ರೂಪದಲ್ಲಿ ಜಮಾ ತೆಗೆದು ಕೊಳ್ಳಿ ಅಂತ ಅವರ ಆಪ್ತರಿಂದ ಹೇಳಿಸುತ್ತೇನೆ. ಇನ್ನು ಧನವಿತ್ತ ಸಂಘ–ಸಂಸ್ಥೆಗಳು ಆದಾಯ–ಖರ್ಚುಗಳ ವಿವರಗಳನ್ನು ಕೇಳುವ ಸಾಧ್ಯತೆ ತೀರಾ ಕಡಿಮೆ. ಯಾಕೆ ಗೊತ್ತೆ? ಹಾಸನದಲ್ಲಿ ನಡೆದ ಅಖಿಲ ಭಾರತ ಸಾಹಿತ್ಯ ಸಮ್ಮೇಳನದ ವಿಚಾರ ನೋಡು. ಸರಕಾರ ದಿಂದ ಪಡೆದ ಹದಿನೈದು ಲಕ್ಷ ರೂಪಾಯಿಗಳ ಲೆಕ್ಕ ಪತ್ರಗಳ ವಿವರಗಳನ್ನು ಈ ವರೆಗೆ ಪಡೆಯಲಾಗಿಲ್ಲವಂತೆ. ಅಷ್ಟೇಕೆ ? ಎರಡು ವರ್ಷಗಳ ಹಿಂದೆ ಆರ್ಭಾಟಾಗಿ ನಡೆದ ಮುಧೋಳ ಸಾಹಿತ್ಯ ಸಮ್ಮೇಳನ ನೆನಪಿದೆಯೇ ? ಅದರ ಲೆಕ್ಕಾಚಾರ ಒಪ್ಪಿಸಲು, ಅದೆಷ್ಟೋ ನೆನಪಿನ ಪತ್ರಗಳನ್ನು ಬರೆದರೂ ಸಂಚಾಲಕರು ಉತ್ತರ ಬರೆಯುವ ಸೌಜನ್ಯ ತೋರಿಸಿಲ್ಲವಂತೆ! ಹೇಳಿಕೆಯನ್ನು ದಿನಪತ್ರಿಕೆಯಲ್ಲಿ ಓದದ ನಿನಗೆ ಹೇಗೆ ತಿಳಿಯಬೇಕು ? ಹೀಗಿದ್ದಾಗ ನನಗೆ ಕೊಡಮಾಡಿದ ದ್ರಾಬೆ ಐವತ್ತೊ–ನಾಲವತ್ತೊ ಸಹಸ್ರ ರೂಪಾಯಿಯ ಲೆಕ್ಕಾಚಾರ ಕೇಳುವ, ಪಡೆಯುವ, ತಾಳ್ಮೆ ಆಯಾ ಸಂಸ್ಥೆಗೆ, ಸರಕಾರಕ್ಕೆ ವ್ಯವಧಾನ ಇರುವದೇ ?’’ ಎಂದು ಹೇಳುತ್ತಿದ್ದಂತೆ, ಹೊರಬಾಗಿಲ ಕರೆಗಂಟೆ ಬಾರಿಸಿತು. ಅಂಚೆಯವ ರಾಯರಿಗೊಂದು ತಂತಿಯ ಸಂದೇಶ ತಂದಿದ್ದ.‘ಅಭಿನಂದನೆಗಳು. ಉತ್ತರ ಕನ್ನಡ ಜಿಲ್ಲಾ ಒಂಭತ್ತನೆಯ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಅಧ್ಯಕ್ಷರಾಗಿ ಸರ್ವಾನುಮತ ದಿಂದ ಆಯ್ಕೆಯಾಗಿದ್ದೀರಿ–ಸ್ವಾಗತಾಧ್ಯಕ್ಷ’ ಎಂಬ ಶುಭ ವಾರ್ತೆ ತಂತಿಯ ರೂಪ ದಲ್ಲಿತ್ತು. ನಾನು ಆಘಾತದಿಂದ ಚೇತರಿಸಿಕೊಳ್ಳುವತನಕ ತಂತಿ ಆಳಿಗೆ ರಾಯರು ಕಳಿಸಿಯೂ ಆಗಿತ್ತು.

‘‘ಹೋಗಲಿಬಿಡು. ಸಾಹಿತ್ಯ ಸಮ್ಮೇಳನ ನಡೆಸಿ ಕಳ್ಳಸಾಹಿತಿ ಅನಿಸಿಕೊಳ್ಳುವದ ಕ್ಕಿಂತ, ಸಮ್ಮೇಳನಾಧ್ಯಕ್ಷನಾಗಬಲ್ಲ ಒಳ್ಳೆಯ ಸಾಹಿತಿ ಎಂದು ಬೆನ್ನು ಚಪ್ಪರಿಸಿಕೊಳ್ಳುವದು ಮೇಲು ಅಲ್ಲವೇ ?’’ ಎಂದು ನನ್ನ ಅಭಿಪ್ರಾಯ ಕೇಳುವ ರಾಗ ಎಳೆದಾಗ, ಗೊಳ್ಳೆಂದು ನಕ್ಕುಬಿಟ್ಟೆ. ಅವರೂ ನಕ್ಕರು.

ಇಂಥ ಸಾಹಿತ್ಯ ಸಂದರ್ಭಗಳೂ ಘಟಿಸುವದುಂಟು !

■ ■

# ೧೪. ದೇವರಿಗೂ ದುರ್ಲಭವಾದ ದೋಸೆಗಳು

ದೋಸೆಯ ಹೆಸರು ಎತ್ತಿದಾಗೆಲ್ಲ ದೇವತೆಗಳಿಗೂ ಬಾಯಿಯಲ್ಲಿ ನೀರೂರುತ್ತಿರಬೇಕು. ಆದರೆ ಪಾಪ, ಕೇವಲ ಅಮೃತವನ್ನು ಸೇವಿಸುತ್ತಿರುವವರಿಗೆ ದೋಸೆಗಳ ರುಚಿಯ ಅರಿವಾಗುವುದಾದರೂ ಹೇಗೆ ? ಈ ಕಾರಣಕ್ಕಾಗಿಯೇ ಇರಬೇಕು. ವಿವಿಧ ದೇವ–ದೇವತೆಗಳ ಅವತಾರಗಳನ್ನು ತಾಳಿ ಭೂಲೋಕಕ್ಕೆ ಬಂದು ನೈವೇದ್ಯ ರೂಪದಲ್ಲಾದರೂ ದೋಸೆಯನ್ನು ಮೂಸಿ ನೋಡುವುದನ್ನು ರೂಢಿಸಿಕೊಂಡಿದ್ದಾರೆ ! ದೋಸೆಯ ಶೋಧಕರ ಹೆಸರು ನಮಗೆ ಗೊತ್ತಿಲ್ಲ, ಆದರೆ ಸಹಸ್ರ ವರ್ಷಗಳಿಂದಲೂ ಅವು ಅಸ್ತಿತ್ವದಲ್ಲಿವೆಯೆಂದು ನಮ್ಮ ಪಾಕಶಾಸ್ತ್ರ ಗ್ರಂಥಗಳಿಂದ ತಿಳಿದು ಬರುತ್ತದೆ. ಚಾಲುಕ್ಯ ಸೋಮೇಶ್ವರನ ಮಾನಸೋಲ್ಲಾಸ (೧೨ ನೇ ಶತಕ) ಸಂಸ್ಕೃತ ಗ್ರಂಥವಾದ್ದರಿಂದ ಕನ್ನಡ ದೋಸೆ, 'ಧೋಸಕ'ವಾಗಿ ಪರಿಣಮಿಸಿತು. ಮಂಗರಸನ ಸೂಪಶಾಸ್ತ್ರದಲ್ಲಿ (೧೬ ನೇ ಶತಕ) ದೋಸೆಯ ಹಲವಾರು ಉಲ್ಲೇಖವಿದೆ. 'ಧೋಸಕ ಪುರಾಣ'ದ ಕುರಿತು ಸುದೀರ್ಘ ಸಂಶೋಧನಾ ಗ್ರಂಥವನ್ನೇ ಬರೆಯುವಷ್ಟು ಸಾಂಸ್ಕೃತಿಕ ಹಿನ್ನೆಲೆಯನ್ನು ಈ ತಿಂಡಿ ಹೊಂದಿದೆ. ಆದರೆ ಭೋಜನಪ್ರಿಯರಾದ ಕನ್ನಡಿಗರು ಬಾಯಿ ಚಪ್ಪರಿಸುತ್ತಾ ದೋಸೆಯನ್ನು ಮೆಲ್ಲುವುದನ್ನು ಬಿಟ್ಟು ನೀರಸವಾದ 'ದೋಸೆಯ ಸಂಶೋಧನೆ' ಯಲ್ಲಿ ವಿಶ್ವಾಸವಿಟ್ಟಿಲ್ಲ ಎಂಬುದು ಸ್ಪಷ್ಟ !

ಕರ್ನಾಟಕದ ಕರಾವಳಿಯಲ್ಲಿಯೇ ಮೊದಲ ದೋಸೆಯ ಆವಿಷ್ಕಾರವಾಯಿತು ಎಂದು ಕಡಲ ದಂಡೆಯ ಈ ಕುವರಿಯ ಅಭಿಪ್ರಾಯ ! ಅಲ್ಲಿಯೇ ಅದರ ದಶಾವತಾರಗಳೂ ರೂಪ ತಾಳಿದವು ಎನ್ನುವುದಕ್ಕೆ ಬಲವಾದ ಆಧಾರಗಳಿವೆ. ತೆಂಗಿನ ತೋಟಗಳಲ್ಲಿ ಇಲಿಗಳ ಕಾಟ ಅತ್ಯಧಿಕವಾಗಿ ಕೊಳಬೊಂಡೆ (ಎಳನೀರು) ಗಳು ಬಿದ್ದು ಕೆಡಲಾರಂಭಿಸಿದಾಗ, ಎಳೆಕೊಬ್ಬರಿಯನ್ನು ಅಕ್ಕಿಯೊಂದಿಗೆ ಬೆರೆಸಿ, ಬೆಣ್ಣೆಯಂತೆ ರುಬ್ಬಿ ಹೂಗಳಷ್ಟು ಹಗುರಾದ ದೋಸೆಗಳು ತಯಾರಾದವು. ಬತ್ತ ಕುಟ್ಟಿ ಅಕ್ಕಿ ಮಾಡಿದಾಗ, ನುಚ್ಚು ಹೆಚ್ಚಿನ ಪ್ರಮಾಣದಲ್ಲಿ ಹೊರಟು ಅದರ ದೋಸೆಗಳು ಎರಡನೆ ಯುಗದಲ್ಲಿ ರೂಪಗೊಂಡವು. ಹಬ್ಬದ ಕಾಣಿಕೆಯೆಂದು ಬಂದ ಕಾಯಿಗಳನ್ನು ಹೇರಳವಾಗಿ ತಿಂದು ತೀರದಿದ್ದಾಗ ಅವನ್ನು ದೋಸೆಯ ರೂಪವನ್ನಾಗಿ ಪರಿವರ್ತಿಸಿದರೆ ಹೇಗೆ ? ಎಂದು ಯೋಚಿಸಿದಾಗ ಮೊಗ್ಗೆಕಾಯಿ (ಬಣ್ಣದ ಸೌತೆಕಾಯಿ) ದೋಸೆಗಳು ಜನ್ಮತಾಳಿದವು ! ಬಗೆ ಬಗೆಯ ಬೇಳೆಗಳು ಅಕ್ಕಿಯ ನೆಂಟಸ್ತಿಕೆ ಬೆಳೆಸಿಯೋ ಬೆಳಸದೆಯೋ ದೋಸೆಗಳಾಗಿ ಮಾರ್ಪಾಡಾದವು. ರೇಶನ್ ಯುಗದಲ್ಲಿ ದಕ್ಷಿಣದವರಿಗೂ ಗೋಧಿಯ ಅಭ್ಯಾಸವಾಗಲಿ, ಎಂಬ ಕೇಂದ್ರಸರಕಾರದ ಧೋರಣೆಯಿಂದ ಗೋಧಿಯನ್ನು ಕಡ್ಡಾಯವಾಗಿ ಕೊಂಡರೇ ಅಕ್ಕಿ

ದೊರೆಯುವುದೆಂಬ ಶಾಸನವಾಗಿ, ಅಕ್ಕಿ–ಗೋಧಿ–ಜೋಳಗಳ ಮಿಶ್ರಸಂತಾನದ ದೋಸೆ ಜಾರಿಗೆ ಬಂದಿತು ! ಕೊರತೆ ಇನ್ನೂ ತೀವ್ರವಾಗಿ ಕೆಂಜೋಳ, ಗೋವಿನ ಜೋಳದ ಹಿಟ್ಟುಗಳಿಗೆ ಈರುಳ್ಳಿ, ಹಸಿಮೆಣಸು, ಕೊತ್ತಂಬರಿ ಸೊಪ್ಪು, ಕೊಬರಿಗಳು, ಸೇರ್ಪಡೆಯಾಗಿ೨೦ನೇ ಶತಕದ ಭಾರತದ ಸ್ಥಿತಿ–ಗತಿ ಬಿಂಬಿಸುವ ಅತ್ಯಾಧುನಿಕ ದೋಸೆ ಕಾಣಿಸಿಕೊಂಡಿತು. ಈ ನಾಲ್ಕು–ಐದು ದಶಕಗಳಲ್ಲಿ ದೋಸೆಯ ಆವಿರ್ಭಾವ ಇಂತಿದೆ.

ದೋಸೆಯ ಹುಟ್ಟೂರೆಂದು ಕಲ್ಪಿಸಿಕೊಂಡ ಕರಾವಳಿಯಲ್ಲಿ ಸಿಹಿ ದೋಸೆಗಳೂ ರಾರಾಜಿಸುತ್ತವೆ. ಹಾಲು–ಹೈನು ವಿಪುಲವಾಗಿರುವ ಮನೆಗಳಲ್ಲಿ ಮಜ್ಜಿಗೆ ಉಳಿದು ಬಿಟ್ಟರೆ, ನೆನೆಹಾಕಿದ ನುಚ್ಚು–ಬೆಲ್ಲ–ಮೆಂತ್ಯಗಳೊಂದಿಗೆ ರುಬ್ಬಿ, ಹಿಟ್ಟು ಚೆನ್ನಾಗಿ ಉಬ್ಬಿದಾಗ ಮೆದುವಾದ ಸಿಹಿ 'ಸುರನೋಳಿ'ಗಳು ಬಾಯಲ್ಲಿಟ್ಟರೆ ಕರಗಿ ಹೋಗುತ್ತವೆ. ಕಬ್ಬಿನ ಗಾಣ ಆಡಲು ಪ್ರಾರಂಭವಾದಾಗ, ಕಬ್ಬಿನ ಹಾಲು ಹೇರಳವಾಗಿ ಸಿಕ್ಕಾಗ, ಅದಕ್ಕೂ ಕಾಯಿ, ಅಕ್ಕಿ ಸೇರಿಸಿ ರುಬ್ಬಿ ದೋಸೆ ಮಾಡುವರು. ಇದೇ ಹಿಟ್ಟನ್ನು ತೀರ ತೆಳುವಾಗಿಸಿ ಕಾದ ಮಣ್ಣಿನ ಮಡಕೆಯ ಸುತ್ತ ಸವರಿದರೆ 'ತೊಡದೇವ' ಎಂಬ ಅಪೂರ್ವ ತಿಂಡಿ ತಯಾರಾಗುವದು. ಕೆಲದಿನ ಇದನ್ನು ಇಟ್ಟೂ ತಿನ್ನಬಹುದು. ಸೌತೆಕಾಯಿಯ, ಸಬ್ಬಸಿಗೆ ಸೊಪ್ಪಿನ ದೋಸೆಗಳೂ ಅಸ್ತಿತ್ವದಲ್ಲಿವೆ. ಹೆಚ್ಚೆಚ್ಚು ತೆಂಗಿನಕಾಯಿ, ಹಾಕಿದ ಕಡಿಮೆ ಅಕ್ಕಿಯ ತೆಳು ದೋಸೆಗಳು, ಮುಂದೆ ಬೆಲ್ಲ–ತೆಂಗಿನ ಹಾಲಿನಲ್ಲಿ ಮುಳುಗಿ ಎದ್ದು ಎಲೆ ಸೇರಿದಾಗ ಅದರ ರುಚಿ–ಗಮ ವರ್ಣಿಸುವುದು ಅಸಾಧ್ಯ !

ಚಪಾತಿಯ ಹಾಗೆ ಏಕರೂಪತೆ ತಾಳದೇ ಇರುವುದೇ ದೋಸೆಯ ವೈಶಿಷ್ಟ್ಯ ! ತೊಡದೇವ್, ನೈಲೋನ್ ಸೀರೆಯಷ್ಟು ತೆಳುವಾಗಿದ್ದರೆ ಮೈದಾ ದೋಸೆಗಳು ಫಿನ್ಲೆ ಪಂಚೆಯಂತೆ, ಗೋಧಿ ಹಿಟ್ಟಿನ ದೋಸೆಗಳು, ಕೈಮಗ್ಗದ ಧೋತರದಂತೆ ಕಾಣುತ್ತವೆ ! ಉದ್ದು, ಮೆಂತ್ಯ, ಅಕ್ಕಿಯ ದೋಸೆಗಳು, ರುಚಿ, ಜೀರ್ಣಶಕ್ತಿ ಮತ್ತು ಗೃಹಿಣಿಯ ಕೈಚಳಕಕ್ಕೆ ಅನುಸಾರವಾಗಿ ತೆಳು, ಮಧ್ಯಮ, ದಪ್ಪ ಗಾತ್ರಗಳನ್ನು ಪಡೆಯುತ್ತವೆ. ಅಕ್ಕಿಯ ತರಿಗೆ ತುರಿದ ತೆಂಗಿನಕಾಯಿ ಸೇರಿಸಿ ಕೈಯಿಂದಲೇ ತೆಳುವಾಗಿ ತಟ್ಟಿದ 'ಅಕ್ಕಿರೊಟ್ಟಿ' ನಾಡ ತಿಂಡಿಯಾಗಿ (ಕನ್ನಡಿಗರಂತೆಯೇ !) ಹೊರ ಮೈಯನ್ನು ಬಿರುಸಾಗಿ ಹೊಂದಿ ಅಂತರ್ಯದಲ್ಲಿ ಉಪ್ಪಿಟ್ಟಿನಂತೆ ಮೃದುವಾಗಿರುತ್ತದೆ. ಅಗಿದು ತಿನ್ನಲು ಇಚ್ಛಿಸುವವರಿಗೆ 'ಮುಂಬ್ರಿ' ಅಥವಾ ಕೆಂಡದ ರೊಟ್ಟಿಗಳು ಸಿದ್ಧವಾಗುತ್ತವೆ. ತುಂಬಿದ ಮನೆಯಲ್ಲಿ ಸೌತೆಕಾಯಿ ಅಥವಾ ಉದ್ದಿನ ದಪ್ಪ ದೋಸೆಯ "ದೊಡ್ಡಕ" ಹಾಕಿ ನಂತರ ಕೇಕಿನಂತೆ ತುಂಡುಗಳನ್ನು ಮಾಡಿ ಹಂಚುವುದು, ತಾಯಂದಿರಿಗೆ ಸುಲಭ. ದಪ್ಪವಾದ ಹಂಚಿನ ಮೇಲೆ ಅರಿಸಿಣ ಎಲೆಗಳನ್ನು ಹಾಸಿ ಅಕ್ಕಿಯ ತರಿ, ಸೌತೆಕಾಯಿಯ, ತೆಂಗಿನ ಹೆರಕಲು (ಬೇಕಿದ್ದರೆ) ಬೆಲ್ಲ, ಉಪ್ಪು, ಸೇರಿಸಿ ಆ ಎಲೆಗಳ ಮೇಲೆ ಕೈಯಿಂದ ಸರಿಯಾಗಿ ಹರವಿ, ಮೇಲಿನಿಂದ ತಗಡು ಅಥವಾ ಹಂಚು ಇಟ್ಟು ಕೆಂಡಗಳನ್ನು ಹರಡಿ ಹಾಕುವರು. ಜಿಗಟು ಎಳ್ಳಷ್ಟೂ ಇಲ್ಲದ ಈ "ತೌಸಳಿ" ಅಥವಾ ಸೌತೆಕಾಯಿ ಕಡುಬು ಜೀರ್ಣಕ್ಕೆ ಹಿತಕರವಾದ ತಿಂಡಿ. ಇದೇ ಸಂಪಳೆಯ 'ಬಾಳೆಎಲೆ ದೋಸೆ' ಮಾಡುವುದು ಉಂಟು. ಕುಚ್ಚಕ್ಕಿಯ

ಸಂಪಳೆಯನ್ನು ಬಾಳೆಎಲೆಯಲ್ಲಿ ಸುತ್ತಿ ಕೆಂಡಗಳಲ್ಲಿ ಬೇಯಿಸುವ ದಪ್ಪ ದೋಸೆಗಳು ಎಂಥ ಪಥ್ಯದವರಿಗೂ ತಿಂಡಿಯಾಗಬಲ್ಲವು.

ಕಾಕಂಬಿಯಂಥ ತಿಳಿಬೆಲ್ಲ ಅಥವಾ ಜೋನಿಬೆಲ್ಲ ಕರಾವಳಿಯವರಿಗೆ ಪಂಚ ಪ್ರಾಣ. ಮಡಕೆಗಳಲ್ಲಿ ದಾಸ್ತಾನು ಮಾಡಿ ವರ್ಷದುದ್ದಕ್ಕೂ ಬಳಸುವರು. ಎಷ್ಟೋ ಮನೆಗಳಲ್ಲಿ ಮಕ್ಕಳಿಂದ ಮುದಿಯರೆಲ್ಲ ಬೆಲ್ಲದೊಡನೆ ದೋಸೆಗಳನ್ನು ಸವಿಯುವುದು ಪರಿಪಾಠ. ಅಷ್ಟೆಲ್ಲ ಖಾಲಿ ಬೆಲ್ಲ ತಿಂದರೆ ಅಪಾಯ ಕಾದಿದೆ ಎಂದು ಅದಕ್ಕೆ ಗಟ್ಟಿ ತುಪ್ಪ ಬೆರೆಸುವರು ! ಮಕ್ಕಳು ಹೆಚ್ಚಿನ ದೋಸೆಗಳನ್ನು ತಮ್ಮವನ್ನಾಗಿ ಮಾಡಿಕೊಳ್ಳ ಬೇಕೆಂದಿದ್ದರೆ, ಬೆಲ್ಲ–ತುಪ್ಪ ಉಳಿದೆ ಬಿಟ್ಟಿದೆ ನೋಡು ! ಎಂದು ದೋಸೆಯನ್ನೊ, ಖಾಲಿ ದೋಸೆ ಹೇಗೆ ತಿನ್ನುವುದು ? ತಟ್ಟೆ ಬರಿದಾಗಿದೆ ! ಎಂದು ತುಪ್ಪ–ಬೆಲ್ಲಗಳನ್ನೊ ಗಿಟ್ಟಿಸು ವದು ಪದ್ಧತಿ. ತೆಂಗಿನಕಾಯಿಗೆ ಬರವಿಲ್ಲದ್ದರಿಂದ ಘಟ್ಟದ ಮೇಲಿನವರ ಹಿಂಡಿ. ಚಟ್ನಿ ಪುಡಿಗಳನ್ನು ರೂಢಿಸಿಕೊಳ್ಳದೇ ಸದಾಕಾಲವೂ ಹಸಿಕೊಬ್ಬರಿಯ ಚಟ್ನಿಯನ್ನೇ ಅಪೇಕ್ಷಿಸುವುದು ಇಲ್ಲಿ ಸಾಮಾನ್ಯ. ಚಟ್ನಿಗಳ ಚಮತ್ಕಾರಿಕ ರೂಪಗಳನ್ನು, ಹಲವನ್ನು ಕಾಣಬಹುದು. ಹಲಸಿನ ಹಣ್ಣಿನ ದಿಂಡು ಬಾಳೆ ಕೊನೆಯ 'ಹೂಬೊಂಡಿ' ಒಂದೆಲಗ, ಕರಿಬೇವು. ಕೊತ್ತಂಬರಿಸೊಪ್ಪು, 'ಅಂಬೆಹಳದಿ', 'ಗೊರಸುಗಾಯಿ (ಉಪ್ಪಿನಲ್ಲಿ ಕಾದಿಟ್ಟ ಮಾವಿನಕಾಯಿ) ಈರುಳ್ಳಿ, ಬೆಳ್ಳುಳ್ಳಿ, ಇಂಗಿನ ಚಟ್ನಿಗಳೆಲ್ಲ ಬಳಕೆಯಲ್ಲಿವೆ. ಹೆಚ್ಚಿನವುಗಳಿಗೆ ಹಸಿಮೆಣಸಿನಕಾಯಿ ಬಳಸಿದರೂ ಕೆಲವಕ್ಕಾದರೂ ಒಣಮೆಣಸಿನಕಾಯಿ ಬಳಸುವರು. ಗಟ್ಟಿ ಚಟ್ನಿ ಸಾಮಾನ್ಯವಾದರೂ ತಿಳಿ ಚಟ್ನಿಯೂ ಪ್ರವೇಶ ಮಾಡಿದೆ. ಚಟ್ನಿ, ತುಪ್ಪ, ಬೆಲ್ಲಗಳ ಮಿಶ್ರಣವನ್ನೂ ಸೇವಿಸುವ ಭೂಪರು ಇಲ್ಲದಿಲ್ಲ! ಕೆಲ ವ್ಯಕ್ತಿಗಳು ದೋಸೆಯನ್ನು ಕಷಾಯದಲ್ಲಿ ಅದ್ದಿ ಮೆತ್ತಗೆ ಮಾಡಿ ಉದರಕ್ಕೆ ಇಳಿಸುವುದೂ ಉಂಟು ! ಅತ್ಯಾಧುನಿಕರು ಆಲೂಗಡ್ಡೆ ಪಲ್ಯ, ಟೊಮ್ಯಾಟೊ ಸಾಸ್, ಜಾಮ್‌ಗಳಿಗೂ ಶರಣು ಹೋಗಿದ್ದಾರೆ !

ನಮ್ಮೂರಿನ ಪುನ್ತಪ್ಪನವರು, ತಮ್ಮ ಶಾಶ್ವತ ಗಿರಾಕಿಗಳಿಗೆ ''ಮೆತ್ತಗಿನ ದೋಸೆ ತಿನ್ನಿಸುತ್ತಲೇ ಮುದಿಯರಾಗಿದ್ದಾರೆ ! ಎಂಬುದನ್ನು ಊರವರೆಲ್ಲ ನಂಬಿದ್ದಾರೆ. ಒಲೆಯ ಬೆಂಕಿಯನ್ನು ಪ್ರಜ್ವಲಿಸುತ್ತ, ಕಾದ ಹಂಚಿಗೆ ಎಣ್ಣೆ ಸವರುತ್ತ, ಕೈಗಳು ಸಂಪಳೆ ಬಿಡುತ್ತ 'ಚೊಂಯ್' ಅನಿಸುತ್ತಿದ್ದಂತೆ ಬಾಯಿಂದ ಹಾಡು, ಕಥೆ, ಗಾದೆಮಾತು ಬರಲಾರಂಭಿ ಸುವವು. ಮರಾಠೀ ನಾಟಕದ ಹಾಡು, ಯಕ್ಷಗಾನ ಪ್ರಸಂಗದ ಹಾಡು, ಭಾವಗೀತೆ ಯಾವುದೂ ಅವರಿಗೆ ತ್ಯಾಜ್ಯವಲ್ಲ. ಹಾಡಿನ ಸಂಗ್ರಹ ಬರಿದಾದಾಗ ಜೀವನಾನುಭವದ ಕಥೆಗಳು ಹೊರಗೆ ಬರುವವು. ''ಗಂಡು, ಹೆಣ್ಣು ಇಬ್ಬರೂ ಮೂಕರಾದರೆ ಮದುವೆ ತಾನೆ ಹೇಗೆ ?'' ''ಬಿಸಿ ದೋಸೆಗೆ ಕಾಯುತ್ತಿರುವ ಗಿರಾಕಿಗೆ ಸವಾಲು. ಮಕ್ಕಳಾಗಲು ಮಾತು ಬೇಕೇ ಪುನ್ತಪ್ಪ ?'' ರಸಿಕ ಗಿರಾಕಿಯ ಉತ್ತರ ಕೇಳಿ ಹಲ್ಲಿಲ್ಲದ ಬೊಚ್ಚುಬಾಯಿ ತೆಗೆದು ಮನಸ್ವೀ ನಗುವರು. 'ಕೋಳಿ–ಹೇಂಟೆ ಕಪ್ಪು. ಮೊಟ್ಟೆಗಳು ಹೇಗೆ ಬಿಳಿಯವು?' ಹೊಗೆಯಾಡುವ ಗರಿಗರಿ ದೋಸೆಗಳನ್ನು ಎದುರಿಗಿಡುವರು. ಗಿರಾಕಿಗೆ ಹಸಿವು ತಡೆಯುವುದಾಗದೇ ಮಾತು ನಿಲ್ಲಿಸಿ, ದೋಸೆಯ ಭಕ್ಷಣದಲ್ಲಿ ಏಕಾಗ್ರತೆಯನ್ನು ನಟಿಸ ಬೇಕಾಗುತ್ತದೆ. ಬರೇ ಪುನ್ತಪ್ಪ ಎಂದರೆ ಗುರುತಿಸುವುದು ಕಷ್ಟ. 'ದೋಸೆ ಪುನ್ತಪ್ಪ'

ಎಂದರೆ ಎಲ್ಲರಿಗೂ ಗೊತ್ತು. ಧಾರವಾಡದ ದೋಸೆ ಕೃಷ್ಣಪ್ಪನವರ ಖ್ಯಾತಿ ಬೇರೆ ರೀತಿ ಯದು. ನಾಲ್ಕೈದು ದಶಕಗಳವರೆಗೆ ದೋಸೆಯ ದೊರೆಯಾಗಿ ಮುಂದೆಯೂ ಎಳೆ ವಯಸ್ಸಿನ ಪತ್ನಿಯನ್ನು ಹೊಂದಿ, ಆಕೆಗೆ ದೋಸೆ ಹೊಯ್ಯುವ ಕಲೆಯನ್ನೂ ಕರಗತ ಮಾಡಿಸಿದರು. ಯುವಪೀಳಿಗೆಯವರೇ ಅವರ ಗಿರಾಕಿಗಳಲ್ಲಿ ಹೆಚ್ಚಿನವರಾಗಿದ್ದರು ಎಂಬುದನ್ನು ಮರೆಯುವಂತಿಲ್ಲ.

ದೋಸೆಯ ಭಕ್ಷಣದಿಂದಾಗಿ ಕರ್ನಾಟಕ ಸಂಸ್ಕೃತಿ ಮೆರಗು ತಾಳಿದೆ. ಅನೇಕ ನಾಣ್ಣುಡಿಗಳು ಬಳಕೆಯಲ್ಲಿ ಬಂದಿವೆ. ಓರ್ವ ಪುರೋಹಿತರಿಗೆ ಏಳು ಹೆಣ್ಣುಮಕ್ಕಳು. ಹೊಟ್ಟೆ ಹೊರೆಯುವುದೇ ಕಷ್ಟವಾಗಿದ್ದ ಆ ಬಡವನಿಗೆ ದೋಸೆಯೆಂದರೆ ಪಂಚ ಪ್ರಾಣ. ಊರ ಪ್ರತಿಷ್ಠಿತರ ಮನೆಯಲ್ಲಿ ಕೊಡಮಾಡಿದ ಅಕ್ಕಿ–ತೆಂಗಿನಕಾಯಿ ತಂದು ಗುಟ್ಟಾಗಿ ಹೆಂಡತಿಯನ್ನು ಕರೆದು, ಮಕ್ಕಳಿಗೆ ಸುಳಿವು ಹಚ್ಚದೇ ದೋಸೆ ಮಾಡಲು ನಿರ್ದೇಶನ ಕೊಡುತ್ತಾನೆ. ಮಕ್ಕಳನ್ನು ಮಲಗಿಸಿ ಹೆಂಡತಿ ದೋಸೆ ಹುಯ್ಯಲು ಪ್ರಾರಂಭಿಸುತ್ತಾಳೆ.

ಚುಂಯ್‌ಗುಟ್ಟುವ ಸಪ್ಪಳ ಕೇಳಿ ಹಿರಿಯಮಗಳು ಎದ್ದು ಹಣಿಕಿ ನೋಡುತ್ತಾಳೆ. ತಾಯಿ ಒಂದು ದೋಸೆಯನ್ನು ಅವಳ ಕೈಗೆ ಹಾಕಿ, ಉಳಿದವರಿಂದ ಮುಚ್ಚಿಡಲು ಹೇಳುತ್ತಾಳೆ. ಆ ತುಂಟಿ, ಬಿಸಿ ದೋಸೆಯನ್ನು ಮಲಗಿದ ಸೋದರಿಯ ಹೊಟ್ಟೆಮೇಲೆ ಇಟ್ಟಾಗ ಅವಳು ಎದ್ದು ದೋಸೆಗಾಗಿ ಹಲಬುತ್ತಾಳೆ. ಅವಳಿಂದಾಗಿ ಇತರರೂ ಒಬ್ಬೊಬ್ಬ ರಾಗಿ ಎಚ್ಚತ್ತು ದೋಸೆ ತಿಂದು ಮುಗಿಸಿ ಬಡ ಪುರೋಹಿತನಿಗೆ ಒಂದೂ ದೋಸೆ ಉಳಿ ಯುವುದಿಲ್ಲ. (ಕೊಂಕಣಿ ಜಾನಪದ ಕಥೆ, ''ಕುಂಡ್ಯಾ ಕುರ್ಕುಳ'' ಈ ಕಥಾವಸ್ತುವನ್ನು ಹೊಂದಿದೆ). ಅಲ್ಪವಾಗಿರುವ ಆಸ್ತಿಯನ್ನು ಸಕಲರಿಗೂ ಹಂಚಲು ಹಿರಿಯರು ಹೊರಟಾಗ ಏಳುದೋಸೆಗಳ ಕಥೆಯಾದೀತು ! ಎಂದು ಎಚ್ಚರಿಸುವವರಿದ್ದಾರೆ. ಸರ್ವ ರೀತಿಯ ಸುಖ, ಈ ಮನೆ–ದೋಸೆಯೂ ತೂತು' 'ಎಲ್ಲರ ಮನೆ–ದೋಸೆಯೂ ತೂತು' ಎಂಬ ಗಾದೆಯಿದೆ. ಕಿರಿಯರು ಹಿರಿಯರ ಮಾತಿಗೆ ವಿರೋಧ ವ್ಯಕ್ತಪಡಿಸಿದಾಗ 'ದೋಸೆಗಳಲ್ಲಿ ಗಂಡು–ಹೆಣ್ಣು' ಪ್ರತ್ಯೇಕಿಸಲಾಗದ ಪೋರ, ನನಗೆ ಬುದ್ಧಿ ಮಾತು ಹೇಳಲು ಹೊರಟಿದ್ದಾನೆ ! ಎಂದು ಹಂಗಿಸದೇ ಇರಲಾರರು ! ದೋಸೆಯ ಮೇಲ್ಭಾಗ ಗಂಡು, ಕೆಳಭಾಗ ಹೆಣ್ಣು ಅಂತೆ !

ಮೈಸೂರು ಸೀಮೆಯ ಮಸಾಲೆ ದೋಸೆಯನ್ನು ನಮ್ಮೂರಿಗೆ ಪರಿಚಯಿಸಿದ ಕೀರ್ತಿ ತಮಟೆಭಟ್ಟರಿಗೆ ಸಲ್ಲಬೇಕು. ಸ್ನೇಹಿತೆಯರಿಂದ ಅದರ ಕೀರ್ತಿ ಕೇಳಿ, ಅಜ್ಜನ ವರಿಗೆ ವರ್ತಮಾನ ಪತ್ರ ಓದಿಹೇಳಿ ಪುಡಿಗಾಸು ಪಡೆದು, ದೋಸೆ ತಿನ್ನಲು ಸಾಕಾಗು ವಷ್ಟು ಸಂಗ್ರಹಿಸಿ, ಸ್ನೇಹಿತೆಯೊಂದಿಗೆ ತಮಟೆಹೊಟೇಲಿಗೆ ದೌಡಾಯಿಸಿದ್ದೆ. ಬೆಣ್ಣೆಬೇಕೇ ತುಪ್ಪಬೇಕೆ ? ಎಂದು ಮಾಣಿ ಕೇಳಿದಾಗ ತುಪ್ಪದ ದೋಸೆಗೇ ಆರ್ಡರ್ ಹೋಯಿತು. ನಮ್ಮಲ್ಲಿ ರೂಢಿಯಲ್ಲಿರುವ ದೋಸೆಗಿಂತ ಇಲ್ಲಿಯದು ಭಿನ್ನವಾಗಿದ್ದರೂ 'ಅಪೂರ್ವ' ಅನಿಸಲಿಲ್ಲ. ಸಲಿಗೆಯಿದ್ದ ಭಟ್ಟರಿಗೆ 'ದೋಸೆಗೆ ತುಪ್ಪದ ಪರಿಮಳವೇ ಇರಲಿಲ್ಲ ! ಎಂದಾಗ ಆಲೂಗಡ್ಡೆ ಪಲ್ಯ ಸೇರಿಸಿದ ದೋಸೆ 'ತುಪ್ಪ'ವೆಂದು ಅದಿಲ್ಲದೇ ಇರುವ

ದೋಸೆ 'ಬೆಣ್ಣೆ'ಯೆಂದು ಕರೆದದ್ದು ನಾವೇ ! ಎಂದು ಹೇಳಿ 'ನಿಮ್ಮಂತೆ ಕೊಬರಿ ಎಣ್ಣೆ ಬಳಸದೇ ಎರಡಕ್ಕೂ ಶುದ್ಧ ಶೇಂಗಾ ಎಣ್ಣೆ ಬಳಸುತ್ತೇವೆ' ಎಂದು ಹಾಸ್ಯವಾಗಿಯೇ ಹೇಳಿದ್ದರು. ಯಶಸ್ವಿ ವ್ಯಾಪಾರದ ಗುಟ್ಟು ರಟ್ಟು ಮಾಡಿಬಿಟ್ಟಿರಲ್ಲ ಎಂದು ಅಂದಿಗನಿಸಿತ್ತು. ಕ್ರಮೇಣ ಮಸಾಲೆದೋಸೆ ಸಾಮಾನ್ಯವಾಗಿ ಬಿಟ್ಟಿತು.

ಮಸಾಲೆ ದೋಸೆಗಾಗಿಯೇ ಖ್ಯಾತಿ ಪಡೆದ ಬೆಂಗಳೂರಿನ ಬಸವನಗುಡಿಯಲ್ಲಿರುವ ಹೊಟೇಲಿನ ದರ್ಶನ ಹಲವು ವರ್ಷಗಳ ಹಿಂದೆ ಲಭಿಸಿದಾಗ ಅಲ್ಲಿ ಸೇರಿದ ಜನಜಂಗುಳಿಯನ್ನು ಕಂಡು ಅವಾಕ್ಕಾಗಿದ್ದೆ. ಮಣೆಯ ಮೇಲೆ ಆರೂಢಳಾಗಿ ಎದುರಿಗಿದ್ದ ಬಾಳೆಯೆಲೆಯ ಮೇಲೆ ಗರಿಗರಿಯಾದ ದೋಸೆಯ ದರ್ಶನದಿಂದಲೇ ಕೃತಾರ್ಥತಾ ಭಾವ ಬೆಳೆಸಿಕೊಂಡು ಬಿಟ್ಟಿದ್ದೆ. ದೋಸೆಯ ಒಳಮೈಗೆ ಕೆಂಬಣ್ಣದ ಚಟ್ನಿಯಲೇಪ. ಹಳದಿಬಣ್ಣ ತಾಳಿ ನಳನಳಿಸುತ್ತಿದ್ದ ಆಲೂಗಡ್ಡೆಪಲ್ಯ ಕರಕರಗಿ, ಕನಸಾಗಲಾರಂಭಿಸಿದ ಬೆಣ್ಣೆ ಧಾರಾಳವಾಗಿ ಕೊಟ್ಟಿದ್ದ ಕಾಯಿಚಟ್ನಿಗಳು ! ಈ ದೋಸಕರಾಯನ ಪರಿಕರಗಳು ವರ್ಷಗಳು ಕಳೆದಂತೆ ಸೊರಗುತ್ತ ಬಂದದ್ದನ್ನು ಕಂಡೆ. ಆದರೂ ಅಂದಿನ ದೋಸೆಯ ರೂಪ–ರುಚಿಗಳು ಶಾಶ್ವತವಾಗಿ ನೆನಪಿನಂಗಳದಲ್ಲಿ ನಿಂತುಬಿಟ್ಟಿವೆ.

ಇಷ್ಟಾದರೂ ಬೆಂಗಳೂರು, ದೋಸೆಯ ಸಂಸ್ಕೃತಿಯನ್ನು ಪೂರ್ತಿಯಾಗಿ ಕಳೆದುಕೊಂಡಿಲ್ಲ. ಆಗಾಗ ಇಲ್ಲಿ ಬರುವ ನಮ್ಮ ಉತ್ತರದ ಬಾಂಧವರು ಊಟದ ಗೊಡವೆಗೇ ಹೋಗದೇ ದೋಸೆ ರಾಯನ ಸಾಮ್ರಾಜ್ಯಕ್ಕೆ ಪೂರ್ಣ ನ್ಯಾಯ ಒದಗಿಸುತ್ತಾರೆ. ಹೀಗಾಗಿ ಬಂದ ನಂಟರನ್ನು ಪರಿಚಯದ ಒಂದು ಹೊಟೇಲಿಗೆ ಕರೆದೊಯ್ಯುವುದು ನಮ್ಮ ಕುಟುಂಬದ ಹೆಗ್ಗಳಿಕೆಯೇ ಆಗಿದೆ ! ಮನೆಯ ಅತಿಥಿಗಳು ಬಂದಾಗೊಮ್ಮೆ ಅವರ ಜೊತೆಗೆ ನಾವೂ 'ಮಸಾಲೆ' ಧ್ವಂಸಿಸುವುದು ಆರೋಗ್ಯದ ದೃಷ್ಟಿಯಿಂದ ಒಳ್ಳೆಯದಲ್ಲವೆಂದು ಪರಸ್ಪರ ಆಕ್ಷೇಪಿಸುತ್ತಲೇ ಇರುತ್ತೇವೆ. ಆದರೂ ''ಪಚನಶಕ್ತಿ ಚೆನ್ನಾಗಿರುವಾಗಲೇ ಸಾಕಷ್ಟು ಮಸಾಲೆ ತಿನಿಸಲಿಲ್ಲ ಎಂಬ ಆರೋಪ ಬರಬಾರದು ಮುದಿವಯಸ್ಸಿನಲ್ಲಿ !'' ಎಂದು ಹಿಂದೆ ರಾಯರು ಮೇಲಿಂದ ಮೇಲೆ ದೋಸೆಕೊಡಿಸುತ್ತಿದ್ದುದನ್ನು ನೆನೆಸಿಕೊಂಡು ಎದುರಿಗೆ ಮಸಾಲೆ ಬಂದಾಗೊಮ್ಮೆ ನಗುತ್ತಿರುತ್ತೇವೆ.

ವೈವಿಧ್ಯತೆ ನೀಡಿ ಶ್ರೀಮಂತರಾಗಲು ಹೊರಟ ಹೊಟೇಲು ಮಾಲಿಕರು ಅತ್ಯಂತ ವ್ಯವಹಾರ ಕುಶಲರು, ಗಿರಾಕಿಗಳ ಆರ್ಥಿಕ ಸಾಮರ್ಥ್ಯ, ಪಚನಶಕ್ತಿ, ಬಾಯಿರುಚಿಗಳಿಗೆ ಅನುಸಾರವಾಗಿ ದೋಸೆಗಳ ಸರಣಿಯನ್ನೇ ಸೃಷ್ಟಿಸಿ ಕೊಡಮಾಡುತ್ತಾರೆ. ರಸಿಕರಿಗೆ ಮಸಾಲೆ ಮೀಸಲು ! ಅರಸಿಕರಿಗೆ ಪ್ಲೇನ್‌ದೋಸೆ, ಜಿಡ್ಡನ್ನು ಜೀರ್ಣಿಸಿಕೊಳ್ಳಲಾಗದವರಿಗೆ ಸಾದಾದೋಸೆ, ಲೆಕ್ಕಮಾಡಿ ತಿನ್ನುವ ಮಕ್ಕಳಿಗೆ ಸೆಟ್‌ದೋಸೆ, ಕೇವಲ ಬಾಯ ಚಪಲದವರಿಗೆ ರವಾದೋಸೆ, ಹೊಟ್ಟೆ ತುಂಬಬೇಕೆನ್ನುವವರಿಗೆ ಈರುಳ್ಳಿ ದೋಸೆ, ಮೊಟ್ಟೆ ಆಮ್ಲೇಟಿಗೆ ಹಲುಬಿ ತಿನ್ನಲು ಸಿಗದವರಿಗೆ ಅರಿಸಿನಪುಡಿ, ಕಡ್ಲೆಹಿಟ್ಟು ಸೇರಿಸಿದ ಟೊಮೇಟೊ ಆಮ್ಲೆಟ್‌ದೋಸೆ, ಇಡ್ಲಿರುಚಿಯ ದೋಸೆಗೆ ಆಸೆಪಡುವವರಿಗೆ 'ಉತ್ತಪ್ಪ' ಮೀಸಲಾಗಿದೆ.

ಹೊಟೇಲಿನವರು ಮಾಡುವಂಥ ತಿಂಡಿಗಳು ಮನೆಯಲ್ಲಿ ಮಾಡಲು ಸಾಧ್ಯವೇ ? ಎಂಬ ಸವಾಲಿಗೆ ಉತ್ತರವಾಗಿ ಸಾಂಬಾರ್, ಕುರುಕಲು ವಡೆ, ರವೆ ಇಡ್ಲಿಗಳೇನೋ ಯತ್ನಿಸಿದ ಮೇಲೆ ಕರಗತವಾದವು. ಆದರೆ ಅದೇಕೋ ಏನೋ ಮಸಾಲೆ ದೋಸೆ ಸಾಧಿಸಲೇ ಇಲ್ಲ. ಆದ್ದರಿಂದ ಸಾಧ್ಯವಿದ್ದಲ್ಲೆಲ್ಲ ಹೊಟೇಲಿನ ಅಡಿಗೆ ಮನೆಯತ್ತ ಸುಳಿದಾಡಿ, ಅವರು ಹಸ್ತಗತ ಮಾಡಿಕೊಂಡಿರುವ ವಿಧಾನವನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡಿದಾಗ ಗುಟ್ಟು ರಟ್ಟಾಯಿತು. ಕಟ್ಟಿಗೆ ಒಲೆ ಹದವಾಗಿ ಉರಿಯಬೇಕು. ಅದನ್ನು ಆಗಾಗ ಒಂದೇ ಸವನೆ ಉರಿಯುವಂತೆ ಗಮನವಿಡಬೇಕು. ಕಾದ ಹಂಚಿನ ಮೇಲೆ ಎಣ್ಣೆಯನ್ನು 'ಪರಕೆ' ಯಿಂದ ಲೇಪಿಸಬೇಕು. ದೋಸೆಹಿಟ್ಟಿನ ಸಂಪಳೆ, ದಪ್ಪಪಾಯಸದ ಹದ ಹೊಂದಿರ ಬೇಕು. ಒಂದೇ ತೆರ ಹರಡಬೇಕು. ದೋಸೆ ಒಂದಕ್ಕೆ ಎರಡು ಸೌಟು ಎಣ್ಣೆಯನ್ನು ಎಗ್ಗಿಲ್ಲದೇ ಸುರಿಯಬೇಕು. ಹೀಗಾಗಿ ಅದು ಎಣ್ಣೆಯಲ್ಲೆ ಬೆಂದು ಕರಿದು ತಯಾರಾ ಗುತ್ತದೆ. ನಂತರ ಅದಕ್ಕೆಂದೇ ವಿಶೇಷ ಬಗೆಯಲ್ಲಿ ತಯಾರಿಸಿದ ಬೆಳ್ಳುಳ್ಳಿ ಹುರಿಗಡಲೆ – ಇತ್ಯಾದಿ ಹಾಕಿದ ಕೆಂಪು ಚಟ್ನಿ ಸವರಿ, ಪಲ್ಯವನ್ನು ಸೇರಿಸಿ ಸುರುಳಿ ಮಾಡಿ ಇಲ್ಲವೇ ತ್ರಿಕೋನದ ಆಕಾರದಲ್ಲಿ ನಿಲ್ಲಿಸುವುದು, ಹೊಟೇಲಿನವರು ಬೆಳೆಸಿಕೊಂಡ ಕಲೆ. ಎಣ್ಣೆಯನ್ನು ಸುರಿದ ಬಗೆನೋಡಿ ಇನ್ನೆಂದೂ ಮನೆಯಲ್ಲಿ ಇಂಥ ದೋಸೆ ಮಾಡ ಕೂಡದೆಂದೂ, ಅಪರೂಪಕ್ಕೆ ಹೋಟೇಲಿನಲ್ಲಿ ತಿನ್ನುವುದೆಂದೂ ಅಂದೇ ಭೀಷ್ಮಪ್ರತಿಜ್ಞೆ ಮಾಡಿಬಿಟ್ಟೆ !

ದೋಸೆಯ ಕುರಿತಾದ ಐತಿಹ್ಯಗಳ ಬಗ್ಗೆ ಯೋಚಿಸುವಾಗ ಶಾಲಾ ವಾರ್ಷಿ ಕೋತ್ಸವಕ್ಕೆ ಬಂದ ಅತಿಥಿಗಳೊಬ್ಬರ ನೆನಪಾಗುತ್ತದೆ. ಬಂದವರ ವೇಷ–ಭೂಷಣ, ಶಿಕ್ಷಣದ ಕುರಿತಾದ ವೈಚಾರಿಕ ಭಾಷಣ ವಿದ್ಯಾರ್ಥಿಗಳಿಗೆ ರುಚಿಸದೇ ತಮ್ಮತಮ್ಮಲ್ಲೇ ಭಾಷಣ ಪ್ರಾರಂಭಿಸಿದರು. ಸಂದರ್ಭವನ್ನು ಗ್ರಹಿಸಿದ ಅತಿಥಿ ಕೂಡಲೇ ವಿಷಯಾಂತರ ಮಾಡಿದರು.

''ನೀವೆಲ್ಲ ಹೊಟೇಲಿನ ತಿಂಡಿಗಳನ್ನು ಇಷ್ಟಪಡುತ್ತೀರಿ ಎಂದು ತಿಳಿದಿದ್ದೇನೆ''.

''ಒಮ್ಮಿಂದೊಮ್ಮೆ ಸಭಾಗೃಹ ಶಾಂತವಾಯಿತು.

ಮಸಾಲೆ ದೋಸೆ ನಿಮಗಿಷ್ಟವೇ ?'' ಹೋ !!! ಪ್ರತಿಕ್ರಿಯೆ.

ಅದನ್ನು ತಯಾರಿಸುವ ವಿಧಾನ ಬಲ್ಲಿರಾ ? ವಿದ್ಯಾರ್ಥಿಗಳು ಉಸಿರು ಬಿಗಿಹಿಡಿದು ಕೇಳಲು ಆರಂಭಿಸಿದರು. ಅತಿಥಿ, ಉತ್ಸಾಹದಿಂದ ಮುಂದುವರಿದರು. ''ಹೊಟೇಲಿನ ಅಡಿಗೆ ಮನೆಯಲ್ಲಿ ವಿಪರೀತ ಸಾಮಾನುಗಳು ಕಿಕ್ಕಿರಿದು ತುಂಬಿರುತ್ತವೆ. ಹೀಗಾಗಿ ಅಲ್ಲಿ ಇಲಿ–ಹೆಗ್ಗಣಗಳ ಓಡಾಟ ಹೆಚ್ಚು ! ಪ್ರತಿದಿನ ಒಂದೆರಡಾದರೂ ಜಾರಿ, ಮಾಣಿಯು ರುಬ್ಬಿಟ್ಟ ದೋಸೆ ಹಿಟ್ಟಿನಲ್ಲಿ ಬೀಳದೇ ಇರುವುದಿಲ್ಲ. ದೋಸೆ ಭಟ್ಟರು ಸತ್ತುಬಿದ್ದ ಇಲಿಯನ್ನು ಬಾಲ ಹಿಡಿದೆತ್ತಿ ಅದಕ್ಕಂಟಿದ ಹಿಟ್ಟನ್ನೆಲ್ಲ ಪಾತ್ರೆಗೇ ಸೇರಿಸುತ್ತಾರೆ. ಅಲ್ಲದೇ ಹೆಗ್ಗಣದ ಅಥವಾ ಇಲಿಯ ಹೆಣವನ್ನು ಒಲೆಗೆ ಸೇರಿಸುತ್ತಾರೆ. ಅಂತೆಯೇ ನೀವು ತಿನ್ನುವ ದೋಸೆಗೆ ವಿಶಿಷ್ಟ ರುಚಿ ಬರುತ್ತದೆ !'' ಹೋ ! ನಗೆಯೊಂದಿಗೆ ಪ್ರಚಂಡ ಕರತಾಡನ

ವಾಯಿತು. ನಂತರ ಮಸಾಲೆ ದೋಸೆಯ ಪ್ರಸ್ತಾವನೆಯನ್ನು ಉದ್ದೇಶ ಕಥನಕ್ಕೆ ಕಲಾಪೂರ್ಣವಾಗಿ ಜೋಡಿಸಿ ಭಾಷಣ ಮುಂದುವರಿಸಿದರು. ಅಂದಿನ ಭಾಷಣ ಮರೆತರೂ ಪ್ರಸ್ತಾವನೆ ನೆನಪಿದೆ !

ತಾವು ಬೆಲೆ ಕೊಟ್ಟು ತಿನ್ನುತ್ತೇವೆಂಬ ಕಾರಣಕ್ಕಾಗಿ ದೋಸೆಗೆ ಅನ್ಯಾಯವೆಸಗುವ ಆಸಾಮಿಗಳಿದ್ದಾರೆ. ಸರಿಯಾಗಿ ಬೆಂದಿಲ್ಲ, ಪಲ್ಯಕ್ಕೆ ಉಪ್ಪಿಲ್ಲ, ದೋಸೆಗೆ ರುಚಿಯೇ ಇಲ್ಲ, ಹೊಟ್ಟೆ ತುಂಬಿಹೋಯಿತು. ಎಂದೆಲ್ಲ ಹೇಳಿ ಹೆಚ್ಚಿನ ಭಾಗ ಬಿಡುವವರಿದ್ದಾರೆ. ಚಟ್ನಿ ಕೊಟ್ಟರೆ ಸಾಂಬಾರ್ ಕೇಳುತ್ತಾರೆ. ಎರಡನ್ನೂ ತಂದಿರಿಸಿದರೆ ಮುಟ್ಟದೇ ಎದ್ದು ಹೋಗುವವರೂ ಇದ್ದಾರೆ. ಕೇವಲ ಪ್ರತಿಷ್ಠೆಗಾಗಿ ಹಾಲು ಕುಡಿಯಲು ಬಾರದ ಮಗುವಿಗೂ ಮಸಾಲೆಗೆ ಆರ್ಡರ್ ಕೊಟ್ಟು ಅದು ತಿನ್ನದೇ ಚೆಲ್ಲಾಡಿದರೂ ತೃಪ್ತಿ ಅವರಿಗೆ. ಇಂಡಿಯನ್ ಇನ್‌ಸ್ಟಿಟ್ಯೂಟಿನ ಹಾಸ್ಟೇಲಿಗೆ ಹೊಂದಿದ ಕ್ಯಾಂಟೀನ್‌ದಲ್ಲಿ ತೂಗು ಹಾಕಿದ ಬೋರ್ಡು, 'ಬೇಕಾದಷ್ಟು ದೋಸೆ ತಿನ್ನಿ, ಹಾಳು ಮಾಡಬೇಡಿ' ಎಂದು ಸಾರುತ್ತದೆ. ಅದರ ಅರ್ಥವನ್ನು ಮೇಲ್ವಿಚಾರಕನಿಗೆ ಕೇಳಿದಾಗ, ವಿದ್ಯಾರ್ಥಿಗಳಿಗೆ ಹೊಟ್ಟೆ ತುಂಬುವಷ್ಟು ತಿಂಡಿ-ತಿನಿಸು ಕೊಡಬೇಕೆಂಬ ನಿಯಮವಿದೆ. ಅದರ ದುರುಪಯೋಗವಾಗುತ್ತಿದೆ. ವಿದ್ಯಾರ್ಥಿಗಳು ನಾಲ್ಕು-ಐದು ಮಸಾಲೆ ಹಾಕಿಸಿಕೊಂಡು, ಹೊಟ್ಟೆ ತುಂಬಿದೊಡನೆ ರುಚಿಯೇ ಇಲ್ಲವೆಂದು ಎರಡು-ಮೂರು ದೋಸೆಗಳನ್ನು ಬಿಟ್ಟು ಹೋಗುತ್ತಾರೆ. ಎಮ್.ಟಿ.ಆರ್. ದವರಂತೆ ಅಪ್ಪಟ ತುಪ್ಪದ ದೋಸೆಗಳನ್ನು ಸಬ್‌ಸಿಡೈಝ್ಡ್ ದರಕ್ಕೆ ಕೊಟ್ಟು ಪೂರೈಸುವುದುಂಟೇ ? ಎಂದು ವಿವರಿಸಿದರು. ತಮಿಳುನಾಡಿನ ಈರೋಡ್‌ದಲ್ಲಿ ನಸುಕಿನ ನಾಶ್ತಾಕ್ಕೆ ಗಿರಾಕಿಗಳು ಎಷ್ಟೇ ದೋಸೆ ತಿಂದರೂ ಕೊಡುವ ಬೆಲೆ ಒಂದೇ ದೋಸೆಯದು ಎಂದು ತಿಳಿದಾಗ ಬಹಳ ಆಶ್ಚರ್ಯವಾಯಿತು.

ಪ್ರವಾಸದಲ್ಲಿರುವಾಗ, ಹಸಿವು ಹೆಚ್ಚುತ್ತಿದ್ದಂತೆ ಬಾಯಚಪಲವೂ ಅಧಿಕವಾಗುತ್ತದೆ ಎಂಬುದು ಅನುಭವದ ಮಾತು. ಇನ್ನಿತರ ದಿನಗಳಲ್ಲಿ ಕಣ್ಣೆತ್ತಿಯೂ ನೋಡದ ಸಾದಾ ದೋಸೆಯಾದರು ಸಿಕ್ಕೀತೇ ? ಎಂದು ಹುಡುಕಾಟ ಪ್ರಾರಂಭವಾಗುತ್ತದೆ. ಆದರೆ ಓಡುವ ರೈಲು, ಹಾರುವ ವಿಮಾನದಲ್ಲಿ ಪಯಣಿಸುವವರಿಗೆ ತಂಗಳು ಬ್ರೆಡ್, ಇಡ್ಲಿಗಳೇ ಗತಿ ಎಂದು ಬಲುಬೇಗ ಅರಿಯುವಂತೆ ಆಗುತ್ತದೆ. ಆದರೂ ಪ್ರಯಾಣಕ್ಕೆ ಹೋದಾಗ ಅನೇಕ ತಾಣಗಳಲ್ಲಿ(ನಿಲ್ ತಾಣಗಳಲ್ಲಲ್ಲ!) ಒಳ್ಳೆಯ ದೋಸೆಗಳು ಆಗೀಗ ಸಿಗುವುದುಂಟು. ಕರಾವಳಿ ಹೆದ್ದಾರಿಯಿಂದ ಇಡಗುಂಜಿ ಗಣಪತಿಯ ದರ್ಶನಕ್ಕೆ ಹೋಗುವ ದಾರಿಯಲ್ಲಿ ಇರುವ ಗುಣವಂತೆ ಕತ್ತಿಯಲ್ಲಿ ಎಲ್ಲರಿಗೂ ನಿಲುಕುವ ಬೆಲೆಯಲ್ಲಿ ಅಪ್ಪಟ ತುಪ್ಪದ ದೋಸೆಗಳು ಸಿಗುತ್ತವೆ. ಕಾಡು, ಬೆಟ್ಟದ ಹಾದಿ ತುಳಿಯುತ್ತ ಕಾಲುನಡಿಗೆಯಲ್ಲಿ ಕೊಡಚಾದ್ರಿಗೆ ಹೊರಟಾಗ, ಅರ್ಧ ದಾರಿಯಲ್ಲಿ ಕೇರಳದ ಕಂಗಪ್ಪನ್ ಕುಟುಂಬದವರು ಬಿಸಿ ಬಿಸಿ ಉತ್ತಪ್ಪ-ಚಟ್ನಿ ಕಾಫಿಗಳನ್ನು ಪೂರೈಸಿ ದಣಿದ ಪ್ರವಾಸಿಗರ ಪ್ರೀತಿಗೆ ಪಾತ್ರರಾಗುತ್ತಾರೆ. ಶಿಕಾರಿಪುರ ತಾಲ್ಲೂಕಿನ ಬಳ್ಳಿಗಾವಿಗೆ ಹೊರಟಾಗ ಹಿರೇಕೆರೂರಿನಲ್ಲಿ ಖಾರ ಚುರಮುರಿ. ಕೆಟ್ಟ ಚಹಾ ಸೇವಿಸಿ ಹೊರಟವಳಿಗೆ

ಹನ್ನೆರಡೇ ಮೈಲು ದೂರದ ಶಿರಾಳಕೊಪ್ಪದಲ್ಲಿ ಸಿಕ್ಕ ಒಳ್ಳೆಯ ದೋಸೆ, ಕಾಫಿಗಳಿಂದ, ದೇವಾಲಯದ ಶಿಲ್ಪ ವೈಖರಿಯೆಲ್ಲ ಬಲು ರಮ್ಯವಾಗಿ ಕಂಡಿತು. ಗೇರು ಸೊಪ್ಪೆಯ ನಗರಕೇರಿಯಲ್ಲಿರುವ ಜೈನ ಬಸದಿಗಳನ್ನು ನೋಡಲು ಹೋದಾಗ, ದಟ್ಟ ಕಾಡಿನಲ್ಲಿ ಇದ್ದ ಕಿರಿದಾದ ಅಂಗಡಿ, ದೋಸೆ– ಚಟ್ನಿ ಪೂರೈಸಿದಾಗ, ಇಂಥ ವ್ಯಾಪಾರಿ ಗಳೂ ಇದ್ದಾರೆಯೇ ಅನಿಸಿತ್ತು. ಉಳಿದ ದಿನಗಳಲ್ಲಿ ಇವನ್ನು ತಿನ್ನಲು ಕಾಡಾನೆಗಳು ಬರುತ್ತವೆಯೇ ? ಎಂದು ವಿಚಾರಿಸಿದಾಗ, ಆತಿಥ್ಯ ನೀಡಿದ ಮುದುಕ ಮನಸ್ವೀ ನಕ್ಕಿದ್ದ.

ದೋಸೆಗಳ ಉದ್ದಳತೆಯ ವೈವಿಧ್ಯವೂ ಗಮನೀಯ. ವೀಳ್ಯದೆಲೆಯಷ್ಟು ಗಾತ್ರ ದವು ಇರಬಹುದು. ಇಲ್ಲವೇ ಹುಟ್ಟಿದ ಮಗುವನ್ನು ಮಲಗಿಸುವಷ್ಟು ವಿಸ್ತಾರದ್ದು ಇರಬಹುದು. ಮಾರುದ್ದ ಪೇಪರ್ ದೋಸಾ, ರವಾ ದೋಸಾ, ಮಾರುವ ಸ್ಥಳಗಳಿವೆ. ದೋಸೆಯ ಸಂಪೂರ್ಣ ಸ್ವಾದ ಪಡೆಯಲು ಕೈಯಿಂದ ತಿನ್ನುವದೇ ವಾಡಿಕೆಯಾಗಿದೆ. ಆನಂತರ ಕೈಯೊರಸಲು ಕಾಗದದ ತುಣುಕು, ಸೋಪು–ನೀರುಗಳು ಇದ್ದೇ ಇವೆ. ಆಧುನಿಕವೆನಿಸಿಕೊಳ್ಳುವ ಕೆಲವು ಹೊಟೇಲುಗಳು ಚಮಚ ಫೋರ್ಕುಗಳನ್ನು ಕೊಡ ಮಾಡಿದರೆ, ಪಂಚತಾರಾ ಹೊಟೇಲುಗಳಲ್ಲಿ ಚಾಕು, ಫೋರ್ಕುಗಳು ಇರುವುದುಂಟು. ಒಮ್ಮೆ ಅತ್ಯಾಧುನಿಕ ನೆನಿಸಿಕೊಳ್ಳುವ ಪತಿ, ನಗರದ ರೀತಿ–ನೀತಿಗಳನ್ನು ಅರಿಯದ ಮುಗ್ಧ ಪತ್ನಿಯನ್ನು ಇಂಥ ಹೊಟೇಲಿಗೆ ಕರೆತಂದು ದೋಸೆಗೆ ಆರ್ಡರ್ ಕೊಟ್ಟ. ಪಾಪ ಆ ಅಬಲೆಗೆ ಮುಳ್ಳ ಚಮಚ, ಚಾಕು ಹೇಗೆ ಬಳಸುವುದು ಎಂದು ತಿಳಿಯದೇ ಕಂಗಾಲಾಗಿ ಕೈಯಿಂದ ದೋಸೆ ಹರಿದು ಚಾಕುವಿನ ಮೇಲಿಟ್ಟು ಬಾಯಿಗೆ ಹಾಕಿ, ಮುಳ್ಳು ಚಮಚ ದಿಂದ ಚಟ್ನಿ ಎತ್ತಲು ಸಾಧ್ಯವಾಗದೇ ಪೆಚ್ಚಾಗಿ ಕುಳಿತಾಗ, ಮಾಣಿಯೇ ಎಲ್ಲರೂ ಕೈಯಿಂದ ತಿನ್ನುತ್ತಾರೆ ಹಾಗೇ ತಿನ್ನಿ ! ಎಂದು ಸಂತೈಸುವ ಪ್ರಸಂಗ ಬಂದಿತ್ತು.

ಉತ್ತರ ಭಾರತದಲ್ಲಿ ಅಪ್ಪಟ ದೋಸೆಯ ಪ್ರಚಾರ ಅಷ್ಟು ಇಲ್ಲದ್ದರಿಂದ ಚಪಾತಿಗಳಿಗಿಂತ ಭಿನ್ನವಾದದ್ದೆಲ್ಲ ದೋಸೆಯೆಂದು ಪರಿಗಣಿಸುತ್ತಾರೆ. ಭೋಪಾಲದ ಹೊಟೇಲ ಒಂದರ ಹೊರಗಡೆ ಕಾದ ಕಡಪಾಕಲ್ಲಿನ ಮೇಲೆ ಮೈದಾ–ಗೋದಿ ಹಿಟ್ಟಿನ ಮಿಶ್ರಣ ಬಿಟ್ಟು ಬೇಯಿಸಿ ಮಗುಚಿ ಅದನ್ನೇ ದೋಸಾ ಎಂದು ಮಾರುತ್ತಿದ್ದುದು ನೋಡಿ ಮೋಜೆನಿಸಿತ್ತು. ಅಲ್ಲಲ್ಲಿ ಇಂಡಿಯನ್ ಕಾಫಿ ಹೌಸ್‌ಗಳು ಮಸಾಲೆ ದೋಸೆಯನ್ನು ಮಾರಲು ಯತ್ನಿಸಿದರೂ ಈ ರಾಜಧಾನಿಯ ದೊರೆಯಾದ ದೋಸೆಯ ರುಚಿ ಅವಕ್ಕೆ ಬರುವದು ಸಾಧ್ಯವೇ ಇರಲಿಲ್ಲ.

ಉತ್ತರ ಭಾರತದಲ್ಲಿದ್ದಾಗ ರಜೆಗಾಗಿ ಕರಾವಳಿಯ ನಮ್ಮೂರಿಗೆ ಬಂದಿದ್ದೆವು. ಕೆಲದಿನಗಳ ಮಟ್ಟಿಗಾದರೂ ಊರ ಅಡಿಗೆಯನ್ನು ಸವಿಯಬಹುದು ಎಂದು ಗೆಲುವಾಗಿಯೇ ಇದ್ದೆವು. ತೋಟದ ಮನೆಯ ಆಪ್ತರಲ್ಲಿ ಕಾಲಿಡುತ್ತಿದ್ದಂತೆ ಸೌತೇಕಾಯಿ ದೋಸೆಯ ಪರಿಮಳ ಮೂಗನ್ನು ಸೋಕಿತು. ಗಮಗಮಿಸುವ ದೋಸೆ–ತೆಳುಬೆಲ್ಲ– ಹಸಿ ಚಟ್ನಿಗಳನ್ನು ಕಲ್ಪಿಸಿಕೊಂಡು ಬಾಯಿಯಲ್ಲಿ ನೀರೂರಿತು. ಅಪರೂಪಕ್ಕೆ ಬಂದವರಿಗೆ ದೋಸೆಯೇ ? ಎಂದು ಅತ್ತೆ ಸೊಸೆಗೆ ಕೇಳಿದ್ದು ಕಿವಿಗೆ ಬಿತ್ತು. ಸುಮಾರು ಹೊತ್ತು ಕಾದ ಮೇಲೆ ಅತಿಥಿಗಳ ವಿಶೇಷ ಉಪಾಹಾರಕ್ಕೆ ಚಪಾತಿ ಪಲ್ಯ ಬರಬೇಕೆ ? ರಾಜಸ್ಥಾನದಲ್ಲಿ

ನಾಶ್ತಾ–ಊಟಗಳಲ್ಲಿ ಚಪಾತಿ ಪೂರಿ ತಿಂದು ತಿಂದು ಅವುಗಳ ಬಗ್ಗೆ ತಾತ್ಸಾರ ಬಂದು ಬಿಟ್ಟಿತ್ತು. ನಂತರ ಮಾತ್ರ ಸಂಕೋಚ ಬಿಟ್ಟು–ಕರಾವಳಿಯ ವಿಶೇಷ ಕಾಯಿ ದೋಸೆ ತಿನ್ನುವುದಾದರೆ ಮಾತ್ರ ಬರುತ್ತೇವೆ ! ಎಂದು ಆಮಂತ್ರಿಸಿದವರಿಗೆ ಹೇಳದೇ ನಿರ್ವಾಹ ವಿರಲಿಲ್ಲ.

ಅಮೇರಿಕೆಯ ಪ್ರವಾಸದಲ್ಲಿ ಹೊಟೇಲಿಗೆ ಹೊಂದಿ ಇದ್ದ ಕೆಫಿಟೇರಿಯದಲ್ಲಿ ಯಾವ ತಿಂಡಿಗೆ ಆರ್ಡರ್ ಕೊಡುವುದೆಂದು ಸಮಸ್ಯೆಯಾಯಿತು. ಕೊನೆಗೆ ಎಲ್ಲರೂ ಬೇಡಿ ಬೇಡಿ ತಿನ್ನುತ್ತಿದ್ದ ಪ್ಯಾನ್‌ಕೇಕ್‌ಗಳತ್ತ ಗಮನ ಹರಿಯಿತು. ನಮ್ಮ ಸುರನೋಳಿಗೆ ಹೋಲುವ ಚಿಕ್ಕ ಚಿಕ್ಕ ದೋಸೆಗಳಿದ್ದವು. ಮೇಪಲ್‌ಸ್ಯರಪ್ (ಜೇನು ತುಪ್ಪದಂತೆ ಇರುತ್ತದೆ) ಹಾಕಿ ತಿನ್ನುತ್ತಾರೆಂದು ಸಹ ಪ್ರಯಾಣಿಕಳು ಅಮೇರಿಕನ್ ದೋಸೆಯನ್ನು ಪರಿಚಯಿಸಿದಳು. ಬೆಣ್ಣೆ ಜಾಮ್ ಜೊತೆಗೆ ಅವು ತುಂಬಾ ರುಚಿಯಾಗಿದ್ದವು.

ನಂತರ, ಉದ್ದು–ಅಕ್ಕಿ, ಮೆಂತ್ಯಗಳನ್ನು ಅರೆಯುವ ಸಾಧನವಿಲ್ಲದೇ ಚಡಪಡಿಸಿ, ಕೊನೆಗೆ ಸೂಪರ್ ಮಾರ್ಕೆಟ್ಟಿನಿಂದ 'ಪ್ಯಾನ್‌ಕೇಕ್ ಮಿಕ್ಸ್' ತಂದೆ. ಅದಕ್ಕೆಕಾರ್ನ (ಅಮೇರಿಕನ್ ಗೋವಿನ ಜೋಳ) ಹಿಟ್ಟು ಮತ್ತು ಮೈದಾಹಿಟ್ಟುಗಳನ್ನು ಕಲಿಸಿದೆ. ತೆಳುವಾದ ಮಿಶ್ರಣದಿಂದ ಗರಿಗರಿಯಾದ ದೋಸೆಗಳನ್ನು ಮಾಡುವಂತಾದಾಗ ಹೆಚ್ಚಿನ ಹಿಗ್ಗು ಉಂಟಾಗಿತ್ತು. ಪರಿಚಯದವರೆಲ್ಲರೂ 'ಆಂಟಿಯ ದೋಸೆ' ಇಷ್ಟಪಟ್ಟರು. ಬಲುಬೇಗ ದೋಸಾ ಎಕ್ಸ್‌ಪರ್ಟ್ ಎಂದು ಅಲಬಾಮದಲ್ಲಿ ಸರ್ಟಿಫಿಕೇಟು ದೊರೆ ಯಿತು. ಮೈಮಾಟದ ಬಗ್ಗೆ ಎಚ್ಚರವಹಿಸುವ ಅಮೇರಿಕನ್ ಪರಿಚಿತೆ ಕೂಡ ಮೆನು ಬರೆದುಕೊಂಡಳು.

ಇಷ್ಟರಲ್ಲಿ ಷಷ್ಠ್ಯಬ್ದಿ ಕಾಯುತ್ತ ನಿಂತಿದೆಯಾದ್ದರಿಂದ ಡಾಕ್ಟರು, ಆಹಾರ ಸೇವನೆ ಯಲ್ಲಿ ನಿಯಂತ್ರಣವಿರಲಿ ಎಂದು ಎಚ್ಚರಿಸುತ್ತಲೇ ಇದ್ದಾರೆ. ಎಣ್ಣೆ–ಬೆಣ್ಣೆ, ಸಕ್ಕರೆ–ಬೆಲ್ಲಗಳಿಂದ ದೂರವಿರಲು ಸೂಚಿಸಿದ್ದಾರೆ. ಅಂದರೆ ಮಸಾಲೆ ದೋಸೆಗೆ 'ಬೈ – ಬೈ' ಹೇಳಲೇಬೇಕಾಗಿ ಬರಬಹುದು. ಆದರೆ ತಿಂದು ಅರಗಿಸುವ ದಿನಗಳಲ್ಲಿ ರಾಯರು ಎಲ್ಲರಿಗಿಂತ ಮುಂದಾಗಿ ಹೆಚ್ಚು ಹೆಚ್ಚು ಮಸಾಲೆ ದೋಸೆ ತಿನ್ನಿಸಿದ್ದರು, ಎಂಬ ನೆಮ್ಮದಿ ಉಳಿದುಕೊಂಡಿದೆ.

■ ■

## ೧೫. ಕೆ.ಇ.ಬಿ.ಗೆ ಕೃತಜ್ಞತೆಗಳು !

''ಇನ್ನೂ ಹದಿನೈದು ನಿಮಿಷಕ್ಕೆ ವಿದ್ಯುತ್ತು ಹೋಗಿ ಬಿಡುತ್ತದೆ. ಅರ್ಜೆಂಟಾಗಿರುವ ಕೆಲಸಗಳನ್ನೆಲ್ಲ ಮುಗಿಸಿಕೊ !'' ಕಾದಂಬರಿಯಲ್ಲಿ ಮೈ ಮರೆತಾಕೆಯನ್ನು ರಾಯರು ಎಚ್ಚರಿಸಿದರು.

ಇದೇನು ಹೊಸ ವಿಚಾರವಲ್ಲ. ಕೆ.ಇ.ಬಿ. ಯು ವಿದ್ಯುತ್ ಕಡಿತ ಆರಂಭಿಸಿದ ಯುಗದಿಂದಲೂ. ಆ ಕಡಿತಕ್ಕನುಸಾರವಾಗಿ ದಿನಚರಿ ರೂಪಿಸುತ್ತ ಬಂದು ರಾಯರು ವಿದ್ಯುತ್ ಪೂರೈಕೆಯನ್ನು ಮನೆಯ ಮಟ್ಟಿಗೆ, ತಮ್ಮ ಹಿಡಿತದಲ್ಲಿ ಇಟ್ಟುಕೊಂಡಿದ್ದಾರೆ. ನಿಗದಿತ ಕಟ್ ಅನಿಗದಿತ ಫಟ್ ! ಎಂದು, ಯಾವಾಗ ವಿದ್ಯುತ್ ಹೋದರೂ ಅವರ ಮುಂಜಾಗ್ರತೆಯಿಂದ ಸ್ನಾನ, ಅಡಿಗೆ, ಇನ್ನಿತರ ಕೆಲಸಗಳಿಗೆ ವ್ಯತ್ಯಯ ಬಂದದ್ದೇ ನೆನಪಿಲ್ಲ ! ಈ ವರ್ಷದ ಅಸಾಧ್ಯ ಸೆಕೆ, ಮುಂದುವರಿದ ಹಾಗೂ ಹೆಚ್ಚುತ್ತಿದ್ದ ಕತ್ತಲ ಗಂಟೆಗಳಿಂದಾಗಿ ನನ್ನ ಅಸಹನೆ ಏರುತ್ತಿದ್ದರೆ, ರಾಯರಿಗೆ ವಿದ್ಯುತ್ ಪೂರೈಕೆಯ ಸಂಸ್ಥೆಯ ಬಗ್ಗೆ ಅಭಿಮಾನ ಹೆಚ್ಚುತ್ತಿದೆ.

''ಕನ್ನಡಿಗರ ಜಡತ್ವವನ್ನು ಕಡಿಮೆ ಮಾಡಿದ ಶ್ರೇಯಸ್ಸು ಖಂಡಿತ ಕೆ ಇ ಬಿ ಗೆ ಸಲ್ಲಬೇಕು !'' 'ಶಶಿಕಿರಣ' ಅಪಾರ್ಟ್‌ಮೆಂಟಿನ ಕನಿಷ್ಠ ಐವತ್ತು ಅಡಿಗೆ ಮನೆಗಳಲ್ಲಿ ಏಕ ಕಾಲಕ್ಕೆ ಪ್ರಾರಂಭವಾದ ಮಿಕ್ಸಿಗಳ ಬಹು ತಾನದ ಸಪ್ಪಳ ಕೇಳುತ್ತ ರಾಯರು ಉದ್ಗರಿಸಿದರು.

''ಸರಿ ಪ್ರಾರಂಭವಾಯಿತೇ ? ನಿಮ್ಮ ಅಪ್ರತಿಮ ಸಂಸ್ಥೆಯ ಗುಣಗಾನ ? ಇವತ್ತೇಕೆ ಈ ತನಕ ಸುಮ್ಮನಿದ್ದೀರಿ, ಅಂದುಕೊಳ್ಳುತ್ತಾ ಇದ್ದೆ !'' ಬೇಗ ಬೇಗ ಕಾಯಿ ತುರಿದೆ.

''ಚರಿತ್ರೆಯ ವಿದ್ಯಾರ್ಥಿನಿಯಾದ ನೀನು ಕೆ ಇ ಬಿ ಯು, ಜನತೆಯ ಆಚಾರ–ವಿಚಾರಗಳಲ್ಲಿ ಅಲ್ಪಾವಧಿಯಲ್ಲಿ ತಂದ ಮಾರ್ಪಾಡು ಗಮನಿಸದೆ ಇದ್ದುದು ನಿಜಕ್ಕೂ ಶೋಚನೀಯ !'' ರಾಯರೆಂದರು.

''ಮಾರ್ಪಾಡಂತೆ, ಮಾರ್ಪಾಡು ! ಜಾಗತೀಕರಣ, ಅಂತರಿಕ್ಷ ಯಾನ, ವಿವಿಧ ಗ್ರಹಗಳಲ್ಲಿ ಮಾನವ ವಸತಿಗಳನ್ನು ನಿರ್ಮಿಸುವ ಕುರಿತು ಇತರ ದೇಶಗಳು ಪ್ರಗತಿ ಸಾಧಿಸಿದರೆ ಈ ಸೊಟ್ಟ ಸಂಸ್ಥೆಗೆ ಜನಾವಶ್ಯಕ ಒಂದೇ ಒಂದು ಪೂರೈಕೆ ಸಾಧ್ಯವಾಗಿದೆಯೇ ? ಶಿಲಾಯುಗಕ್ಕೆ ವಾಪಸ್ ಒಯ್ತಾ ಇದೆ ನಮ್ಮನ್ನೆಲ್ಲ !'' ಮಿಕ್ಸಿಯನ್ನು ಇನ್ನೂ ಜೋರಾಗಿ ತಿರುಗಿಸಿದೆ. ಅಸಹನೆಯಿಂದ ಚಟ್ನಿ ಆಗುತ್ತಿದ್ದಂತೆ. ಗಕ್ಕನೆ ನಿಂತ ವಿದ್ಯುತ್ತಿನೊಂದಿಗೆ ಪೈಪೋಟಿ ನಡೆಸಿದ ರಾಯರು, ಮೋಂಬತ್ತಿ ಹಚ್ಚಿದರು.

''ನಿನಗಂತೂ ಎಷ್ಟೇ ಅನುಕೂಲಗಳಿದ್ದರೂ ಸಮಾಧಾನವಿಲ್ಲ ! ಕೇಳು ಮತ್ತು ನೋಡು ಹೊರಗಿನ ಪ್ರಪಂಚ ಹೇಗಿದೆ ಅಂತ !'' ಬಾಲ್ಕನಿ ಬಳಿಯ ಮೂಲೆಯ ಕುರ್ಚಿಯಲ್ಲಿ ಸ್ಥಾಪಿತರಾದ ರಾಯರೆಂದರು. ಮನೆಯಲ್ಲಿ ಎಷ್ಟೇ ಸೆಕೆಯಾದರೂ ಕ್ರಾಸ್ ವೆಂಟಿಲೇಶನ್ ಇರುವ ಈ ಮೂಲೆಯಲ್ಲಿ ಸದಾ ಸುಳಿಗಾಳಿ ಬೀಸುತ್ತದೆಂದು ಕಂಡು ಹಿಡಿದು, ಮುಕ್ಕಾಲು ದಿನ ಅಲ್ಲೇ ಕಳೆಯುತ್ತಾರೆ.

ಒಳಗಿನ ಸೆಕೆಯಿಂದ ತಪ್ಪಿಸಿಕೊಳ್ಳಲು ಬಾಲ್ಕನಿಗೆ ಬಂದೆ. ಎಳನೀರ್ ಎಳನೀರ್ ! ಕೂಗುತ್ತ ಬೆಳಿಗ್ಗೆ ಹೊರಟವ ಸಪ್ಪೆ ಮುಖ ಹಾಕಿಕೊಂಡು ಸೈಕಲ್ ದೂಡಿಕೊಂಡು ವಾಪಸ್ ಹೊರಟಿದ್ದ. ''ಕಣ್ಣು ಬಿಟ್ಟು ನೋಡು !'' ರಸ್ತೆಯಲ್ಲಿ ಹೊರಟಾಕೆಯತ್ತ ಗಮನ ಸೆಳೆದರು. ಸೊಂಟದ ಮೇಲೊಂದು ಮಗು ಹೊಟ್ಟೆಯಲ್ಲಿ ಇನ್ನೊಂದು, ತಲೆಯ ಮೇಲೆ ಹೊಸ ಪೊರಕೆಗಳನ್ನು ಹೊತ್ತ ಕಿರಿವಯಸ್ಸಿನ ಹುಡುಗಿ, ಗಿರಾಕಿಗಳನ್ನು ಕರೆಯುತ್ತಿದ್ದಳು.

''ದಿನಕ್ಕೆರಡು ತಾಸು ಫ್ಯಾನು–ದೀಪ ಇಲ್ಲದ್ದಕ್ಕೆ ಎಷ್ಟೊಂದು ಗಲಾಟೆ ಮಾಡುತ್ತಿ! ಬೆವರು ಸುರಿಸಿಯೂ ಗಂಜಿಗೆ ಗತಿಯಿಲ್ಲದ ಅಸಂಖ್ಯಾತರ ಬಗೆಗೆ ಯೋಚಿಸಬಾರದೇ ? ಸಾಮಾನ್ಯ ಭಾರತೀಯರ ಜನ ಜೀವನದ ಕಲ್ಪನೆಯನ್ನು ಸ್ವಲ್ಪ ದರದಲ್ಲಿ ಕೆ ಇ ಬಿ ಕೂಡ ಮಾಡುತ್ತದೆ! ಒಂದು ಗಂಟೆಯಾದರೂ ಇಲ್ಲಿ ನಿಂತು ಆ ಜ್ಞಾನವನ್ನು ಪಡೆಯಬಾರದೇ'' ಋಣಿಯಾಗಿರಬೇಕು ಕೆ ಇ ಬಿ ಗೆ ! ರಾಯರು ಎಂದರು.

''ಋಣಿಯಾಗಿರಬೇಕೇ ? ವರ್ಷ ವರ್ಷವೂ ವಿದ್ಯುತ್ ದರ ಹೆಚ್ಚಿಸುತ್ತ ಜತೆಗೆ ಪೂರೈಕೆಯನ್ನು ಕಡಿಮೆ ಮಾಡುತ್ತ ಬಂದದ್ದಕ್ಕೋ''.

''ನೀನು ಸುದೈವಿ, ರಾಜ್ಯದ ರಾಜಧಾನಿಯಲ್ಲಿ ಇದ್ದಿ !'' ಇನ್ನೂ ನಿಂತು ಕೆ ಇ ಬಿ ಗುಣಗಾನ ಕೇಳುವ ಸಹನೆ ಇಲ್ಲದೇ ಅಲ್ಲಿಂದ ಬಂದೇ ಬಿಟ್ಟೆ.

ಕೆಲ ದಿನಗಳ ಬಳಿಕ ಮೈದುನನ ಮಗನ ಮುಂಜಿ ಊರಲ್ಲಿ ಏರ್ಪಟ್ಟಿತು. ಎಂದಿನಂತೆ ತಾವು ಹೋಗುವುದಿಲ್ಲವೆಂದು ರಾಯರು ನಿರ್ಧರಿಸಿದರು. ''ನಿನಗೆ ಬದಲಾವಣೆ ಬೇಕೆನ್ನುತ್ತಾ ಇದ್ದಿ. ಹೋಗಿ ಬಾ !'' ಎಂದರು. ಅರೆ ಮನಸ್ಸಿತ್ತು, ಇವರೂ ಬಂದರೆ ಚೆನ್ನಾಗಿರುತ್ತಿತ್ತು, ಆದರೆ ಅದು ಅಸಾಧ್ಯ ಎಂದೂ ಗೊತ್ತು, ಇವರು ಪ್ರಯಾಣದ ವ್ಯವಸ್ಥೆ ಮಾಡಿ, ಟಿಕೀಟು ತಂದೇ ಬಿಟ್ಟರು. ಸಂಭ್ರಮದಿಂದ ಊರಿಗೆ ಹೋದೆ.

ಆದರೆ ಹೋದ ದಿನವೇ ಯಾಕಾದರೂ ಹೋದೆ ಎನಿಸಿತು. ಕರಾವಳಿಯ ಅಸಾಧ್ಯ ಸೆಕೆ. ಬೆವರು ! ಅಲ್ಲಿ ವಿದ್ಯುತ್ ಕಡಿತ ದಿನಾಲೂ ಆರರಿಂದ ಎಂಟು ಗಂಟೆಯಂತೆ ! ಅದನ್ನು ಎದುರಿಸಲು ಜನರೇಟರ್‌ನ ಕರ್ಕಶ ಸದ್ದು. ಮುಂಜಿಮನೆ ಗಲಾಟೆಯಲ್ಲಿ ಎಡಬಿಡದ ಬೆವರು ಧಾರೆ. ಭಾರೀ ಸೊಳ್ಳೆ ಕಾಟಗಳ ನಡುವೆ ಒಂದೆರಡು ದಿನ ಕಳೆಯುವುದೇ ಅಸಾಧ್ಯವಾಯ್ತು. ಆ ಕೂಡಲೇ ಹಿಂದಿರುಗಿದರೆ ಚೆನ್ನಾಗಿರುವುದಿಲ್ಲವೆಂದು ಸೊಂಪಾದ ತೋಟ ಇದ್ದ ಪ್ರಗತಿಪರ ಗ್ರಾಮವೆಂದು ಯಾವುದೋ ಬಹುಮಾನ ಪಡೆದ ಚಿಕ್ಕಮ್ಮನ ಊರಾದ, ನೀಲಕೋಡಕ್ಕೆ ಧಾವಿಸಿದೆ.

ಹಳ್ಳಿಯೇನೋ ಪ್ರಶಾಂತವಾಗಿತ್ತು, ಗಿಜಿಗುಡುತ್ತಿದ್ದ ಚಿಕ್ಕಮ್ಮನ ಮನೆ ಇನ್ನೂ ಶಾಂತ ! ಪ್ರಗತಿಯ ಪ್ರತೀಕಗಳಾದ ಪಂಪ್‌ಸೆಟ್, ಫ್ರಿಜ್, ಟಿ. ವಿ. ರಾಕ್ಷಸಾಕಾರದ ಮೋಟರ್ ಮಿಕ್ಸಿಗಳನ್ನು ಹೊಂದಿದ್ದ ಚಿಕ್ಕಮ್ಮನ ಮನೆಯ ದೊಡ್ಡ ಹಜಾರ, ಸ್ತಬ್ಧ ಚಿತ್ರವಾಗಿತ್ತು! ಕಟ್ಟೆಯ ಮೇಲೆ ಕುಳಿತು ಬೆತ್ತದ ಬೀಸಣಿಕೆಯಿಂದ ಗಾಳಿ ಹಾಕಿಕೊಳ್ಳುತ್ತಿದ್ದ 'ಚಿಕ್ಕಿ'ಗೆ ನನ್ನನ್ನು ನೋಡಿ ಆದ ಸಂತೋಷ ಅಷ್ಟಿಷ್ಟಲ್ಲ.

''ಏ ಕರಿ ಮಗು, ಬೆಂಗ್ಳೂರ ಅಮ್ಮ ಬಂದಿದೆ ! ಬಾವಿ ನೀರು ಸೇದ್ಕೊಂಡು ಬಾರೆ ! ಓ, ಸಂಕೂಸಾ ! ಎರಡು ಕೆಂದಾಳೆ ಸೀಯಾಳ ತಗೊಂಡು ಬಾರೊ !'' ರಕ್ತದೊತ್ತಡದಿಂದ ಬಳಲುತ್ತಿದ್ದವರು ಕುಳಿತೆಡೆಯಿಂದಲೇ ನನ್ನ ಸತ್ಕಾರದ ವ್ಯವಸ್ಥೆ ಮಾಡಿ, ಇನ್ನೊಂದು ಬೀಸಣಿಗೆ ಕೈಗಿತ್ತರು. ಎರಡು ದಿನದಿಂದ ವಿದ್ಯುತ್ ಬಂದಿಲ್ಲವೆಂದರು.

ಬಾವಿಯಿಂದ ಅದೇ ತಾನೆ ಸೇದಿ ತಂದ ನೀರು ತುಂಬ ತಣ್ಣಗಿತ್ತು, ಸೀಯಾಳದ ನೀರಂತೂ ಅಮೃತದಂತಿತ್ತು, ಕಣ್ಣು ಹಾಯಿಸಿದಾಗ ಚಿಕ್ಕಪ್ಪನ ಜೊತೆಗೆ ಉಪಹಾರ ಸೇವಿಸುತ್ತ ಕುಳಿತ ವ್ಯಕ್ತಿ, ಹೊನ್ನಾವರ ಕೆ ಇ ಬಿ ಆಫೀಸಿನವರೆಂದು ಪರೋಕ್ಷ ಪರಿಚಯಿ ಸಿದರು. ಚಿಕ್ಕಮ್ಮ

''ಇಲ್ಲೇ ಹೋಗಿದ್ರೆ ಏನಾದರೂ ಮಾಡಬಹುದಿತ್ತು ! ಕರೆಂಟ್ ಅಲ್ಲೇ ಹೋಗಿದೆ ಸರ್ !'' ಎಂದು ಸಮಾಧಾನ ಹೇಳಿದ ವ್ಯಕ್ತಿ, ಉಪಹಾರ, ಕಷಾಯ ಮುಗಿಸಿ, ಬಾಯ್ತುಂಬ ಕವಳ ತುಂಬಿಕೊಂಡು, ಕೈಯಲ್ಲಿ ಬಾಳೆಗೊನೆ ಹಿಡಿದು ಹೊರಬಿದ್ದ.

''ಅಲ್ಲೇ ಹೋಗಿದೆ ! ಅಂದ್ರೇನು ?'' ಬೆಪ್ಪಾಗೆ ಕೇಳಿದೆ.

''ಬೇಕಾದರ್ಥ ಮಾಡಿಕೋಬಹುದು ! ಟ್ರಾನ್ಸ್‌ಫಾರ್ಮರ್, ಹೈ ಪವರ್ ಜನರೇಟರ್ ಕೆಟ್ಟಿರಬಹುದು ! ಆಡಳಿತ ವರ್ಗದ ದೂ(ದು)ರಾಲೋಚನೆ ಇರ ಬಹುದು ! ಕಡಕ್ ಪಾವರ್ ಕಟ್ ಇರಬಹುದು' ಇಲ್ಲೇ ಅಂದ್ರೆ ನೀಲಕೋಡದಲ್ಲಿ ಬಿಟ್ಟುಕೊಂಡ ತಂತಿ ಜೋಡಣೆ !'' ಎಂದು 'ಅಲ್ಲಿ ಇಲ್ಲಿ'ಗಳ ತಾರತಮ್ಯ ವಿವರಿಸಿದರು. ಚಿಕ್ಕಪ್ಪ ''ಹ್ವೋಯ್ ! ದೊಟ್ಟೆ ನೀರು ಬಂತಾ ?'' ಎಂದು ದನಿ ಕೇಳಿ, ಸಂಕೂಸ ಬಾವಿಯಿಂದ ಎತ್ತಿಹಾಕುತ್ತಿದ್ದ ದೊಟ್ಟೆ ನೀರನ್ನು ಕೈಯಿಂದಲೇ ಚೋಕಲಿಕ್ಕೆ ಚಿಕ್ಕಪ್ಪ ಸ್ವತಃ ಹೋಗಬೇಕಾಗಿ ಬಂದದ್ದು ನೋಡಿ ಕನಿಕರ ಎನಿಸಿತು.

''ನಾಲ್ಕು ದಿನ ಇದ್ದು ಹೋಗು ! ಹಲಸಿನ ಹಣ್ಣಿನ ಪಾತ್ತೊಳಿ ( ಎಲೆ ಕಡಬು), ಒತ್ತು ಸೇವಿಗೆ, ಪತ್ರೊಡೆ ಮಾಡ್ತೀನಿ !'' ಎಂದು ಚಿಕ್ಕಮ್ಮ ಒತ್ತಾಯಿಸಿದರೂ, ಬಾಯಿ ನೀರೂರಿದರೂ ಇವೆರಡು ದಿನ ಕರೆಂಟ್ 'ಅಲ್ಲಿಂದ' ಬರಲಿಕ್ಕಿಲ್ಲ ಎಂದು ಕೇಳಿ ಹತಾಶ ಳಾದೆ. ಬೆವರೂರುವಿಕೆಗೆ ಅದರಿಂಬ ಏಳಬಹುದಾದ ಸೆಕೆ ಹುಗುಳು (ಪ್ರಿಕ್ಲಿ) ಗಳಿಗೆ ಹೆದರಿ ನಿರಂತರ ಕಡಲಗಾಳಿಯ ಗೋಕರ್ಣದ ಮಂಕಾಳತ್ತೆ ಮನೆಗೆ ಹೋದರೆ ಹೇಗೆ ? ಎಂದು ಚಿಕ್ಕಮ್ಮನಿಗೆ ಕೇಳಿದೆ.

''ಕೇಳಿ ಒಳ್ಳೆದು ಮಾಡ್ದೆ ! ಮಂಕಾಳಿ, ತಾಯಿ–ಮಗಳ ಕೂಡ ಬೆಂಗ್ಳೂರಿಗೆ ಹೋಗದೆ ! ಊರು ನೋಡಾಕೆ ! ಗೊತ್ತಿಲ್ವೇ ?'' ಚಿಕ್ಕಮ್ಮ ಹೇಳಿದರು.

ನಿಜಕ್ಕೂ ಗೊತ್ತಿರಲಿಲ್ಲ ! ಒತ್ತಾಯದಿಂದ ಬೇಕೆಂದೇ ನನ್ನನ್ನು ಊರಿಗೆ ಕಳಿಸಿದ ರಾಯರ ಬಗ್ಗೆ ಸಿಟ್ಟು ಬಂದಿತ್ತು. ಈಗ ಅವರಿಗೆ ಅತಿಥಿಗಳನ್ನು ಸಂಬಾಳಿಸುವ ಪರಿಸ್ಥಿತಿ ಬಂದದ್ದು ಕೇಳಿ ಖುಷಿ ಆದರೂ ಸೆಕೆ ತಪ್ಪಿಸಿಕೊಳ್ಳಲಾಗದೆ ಅಲ್ಲಿದ್ದೆ ತಣ್ ಮನೆ. ಇಲ್ಲಿ ಬಂದೆ ಸುಮ್ಮನೆ ! ಎಂದುಕೊಂಡು ಬೆಂಗಳೂರಿಗೆ ಮರಳಿದೆ.

ರಾಯರು ತುಂಬ ಗೆಲುವಾಗಿದ್ದರು. ನಾನಿಲ್ಲವೆಂದು ಒಂಟಿತನ, ಬೇಸರ, ಮನೆಗೆಲಸದ ದಣಿವು ಒಂದೂ ಅವರನ್ನು ಕಾಡಿದಂತೆ ತೋರಲಿಲ್ಲ ! ಮಂಕಾಳತ್ತೆ ಕುಟುಂಬದ ಸುಳಿವೂ ಇರಲಿಲ್ಲ ! 'ಅವರಾಗಲೇ ಹೋಗಿ ಆಯ್ತು !' ಎಂದಿಷ್ಟೇ ಹೇಳಿದರು. ಸೃಜನಾತ್ಮಕ ಕಾರ್ಯದಲ್ಲಿ ತೊಡಗಿದ್ದರೆ ಅವರ ಮಾತೂ ಕಡಿಮೆ. ನನ್ನ ಗ್ರಹಿಕೆ ಸರಿಯಾಗಿತ್ತು, ಸುಂದರವಾದ ಪ್ರಶಸ್ತಿ ಪತ್ರವನ್ನು ದೊಡ್ಡದಾಗಿ ಬಣ್ಣ ಬಣ್ಣದ ಡಿಜೈನ್ ಹಾಕಿ ತಯಾರಿಸಿದ್ದರು. 'ಕೆ ಇ ಬಿಗೆ ಕೃತಜ್ಞತೆಗಳು' ಎಂಬ ಶೀರ್ಷಿಕೆಯಡಿ ! ಊರಿಂದ ಬಂದೊಡನೆ ವಾಗ್ಯುದ್ಧ ಬೇಡವೆಂದು ಸುಮ್ಮನಿದ್ದೆ. ''ನೋಡು ! ವಿದ್ಯುತ್ ಪೂರೈಕೆಯ ಅವ್ಯವಸ್ಥೆಯಿಂದ ಜನ ಬೇಸತ್ತು ಕೆ ಇ ಬಿಗೆ ಹಿಡಿ ಶಾಪ ಹಾಕುತ್ತಿದ್ದಾರೆ ! ನಾನು ಕಂಡಂತೆ, ಅವರೆಲ್ಲ ನಿಜಕ್ಕೂ ಕೃತಜ್ಞರಾಗಿ ಇರಬೇಕಿತ್ತು! ನನ್ನ ಮೆಚ್ಚಿಗೆಯನ್ನು ಕ್ರಮವಾಗಿ ಸಂಗ್ರಹ ರೂಪದಲ್ಲಿ ಇಲ್ಲಿ ಕಾಣಿಸಿದ್ದೇನೆ. ನೀನೂ ಒಪ್ಪಿಕೊಂಡರೆ ಪ್ರಶಸ್ತಿರೂಪದ ಈ ಚಾರ್ಟನ್ನು ಅವರ ಆಫೀಸಿಗೆ ತಲುಪಿಸಿ ಬರೋಣ ಅಂತಿದ್ದೀನಿ ! ಇವೆಲ್ಲ ಸ್ವಾನುಭವದ ಮಾತುಗಳು. ಮಂಕಾಳತ್ತೆ ಅನುಭವ, ಐದನೆಯ ನಂಬರಿನಲ್ಲಿದೆ'' ಎಂದರು.

ಕೆ ಇ ಬಿ ಎಂದೊಡನೆ ಮುಖ ಗಂಟಾದರೂ ಸ್ವ ಅನುಭವ ಏನಿದ್ದೀತು ? ಎಂದು ಕುತೂಹಲದಿಂದ ಅವರು ತೋರಿಸಿದ ಬರಹದತ್ತ ಕಣ್ಣಾಡಿಸಿದೆ.

೧) ಮುಖ್ಯಮಂತ್ರಿ, ಮಂತ್ರಿಮಹೋದಯರು, ಪ್ರತಿಷ್ಠಿತರೆಲ್ಲ ಸಮಯಪ್ರಜ್ಞೆ ಪಾಲಿಸದಿರುವ ದಿನಗಳಲ್ಲಿ, ಘೋಷಿಸಿದ ಸಮಯಕ್ಕೆ ಸರಿಯಾಗಿ ವಿದ್ಯುತ್ ನಿಲ್ಲಿಸಿ ಬಿಡುವ ನಿಷ್ಠೆ ತೋರಿಸಿದ್ದೀರಿ !

೨) ''ಕರೆಂಟ್ ಹೋಗಿಬಿಡುತ್ತೆ !'' ಎಂದು ಲಗುಬಗೆಯಿಂದ ಪ್ರಾತರ್ವಿಧಿ, ಮುಖ ಮಾರ್ಜನ, ಶೇವ್, ಸ್ನಾನಗಳನ್ನು ಚುರುಕಾಗಿ ಪೂರೈಸಿಕೊಳ್ಳುವ ಜನ, ಮನೆ – ಮನೆಯಲ್ಲಿ ಕಂಡು ಬರುತ್ತಿದ್ದಾರೆ ! ನಿವೃತ್ತರ ಸ್ವರ್ಗ, ಐಷಾರಾಮಿಗಳ ವಿಹಾರ ಸ್ಥಳ (Pensioners' Paradise, Lotus eaters' heaven) ಎಂದು ಕುಖ್ಯಾತಿ ಪಡೆದ ಬೆಂಗಳೂರನ್ನು ಅದರಿಂದ ಬಿಡುಗಡೆ ಮಾಡಿದ್ದೀರಿ !

೩) 'ಸರ್ವರಿಗೆ ಸಮಪಾಲು !' ಎಂದು ದೃಢವಾಗಿ ನಂಬಿ, ವಿದ್ಯುತ್ತನ್ನು ಸಮನಾಗಿ ಕೊಡಲಾಗದಿದ್ದರೂ ಅದರ ಅಭಾವವನ್ನು ಸಾಧ್ಯವಿದ್ದಷ್ಟು ಸಮರ್ಪಕವಾಗಿ ಹಂಚಿ ಹಾಕಿದ್ದೀರಿ ! ಪ್ರಜಾರಾಜ್ಯದಲ್ಲಿ ಕೆಲವರಾದರೂ ಇತರರಿಗಿಂತ ಸರಿಸಮಾನರು ! (Some are more equal than others) ಎಂಬ ಅಳಿಸಿ ಹಾಕಲಾರದ ತತ್ವಕ್ಕನು ಗುಣವಾಗಿ ಗ್ರಾಮಸ್ಥರ ಸಹನೆ, ತಾಪತ್ರಯ, ಸೋಮಾರಿತನಗಳನ್ನು ಗಮನಿಸಿ, ಅವರಿಗೆ ವಿಳಂಬಿತ ವಿದ್ಯುತ್ ಕಡಿತವನ್ನು 'ಲಾಗೂ' ಮಾಡಿದ್ದೀರಿ !

೪) ವಿದ್ಯುತ್ ಕೊರತೆಯಿಂದಾಗಿ, ಮನೆ ಮನೆಯಲ್ಲಿ ವಿದ್ಯುತ್ ಬಿಲ್ಲು ಗಮನಾರ್ಹವಾಗಿ ಕಡಿಮೆ ಆಗಿದೆ ! ತನ್ನಿಮಿತ್ತ ಬಹುಮಹಡಿಗಳಲ್ಲಿ ನೀರು ಏರದೇ ನೀರಿನ ಬಳಕೆಯೂ ಕಡಿಮೆ ಆಗಿ. ನೀರಿನ ವೆಚ್ಚದಲ್ಲಿ ಉಳಿತಾಯವಾಗಿದೆ ! ಸಂಪನ್ಮೂಲಗಳ ಉಳಿತಾಯ ಸಾಧಿಸಿದ್ದೀರಿ !

೫) ಬೆಂಗಳೂರಿಗೆ ಬರುತ್ತಿದ್ದ ನೆಂಟರ ಸಂಖ್ಯೆ ಕಡಿಮೆ ಆಗಿದೆ. ಒಮ್ಮಿಂದೊಮ್ಮೆ ಮನೆಯ ಹೊಸ ಜಾಗದಲ್ಲಿ ಎಡವಿಬಿದ್ದು ನಾಲ್ಕಾರು ಕಪ್, ಸಾಸರ್ ಒಡೆದು ಹೋಗುವ ಸಂದರ್ಭ ಕಡಿಮೆಯಾಗಿದೆ. ಊರನ್ನು ನೋಡಹೋದ ವಯಸ್ಕರು, ನಡುವೆ ರಸ್ತೆಗಳಲ್ಲಿ ದೀಪ ಹೋಗಿ, ಅಗಿದು ಹಾಕಿದೆಡೆ ಬಿದ್ದು, ಅಧೈರ್ಯ ಹೊಂದಿ, ತಮ್ಮೂರ ಹಾದಿ ಹಿಡಿದರು. ಸಿಟಿ ತುಂಬ ಅಲ್ಲಲ್ಲಿ ಅಗಿದು ಹಾಕಿದ್ದಲ್ಲಿ ಮುನ್ನೆಚ್ಚರಿಕೆ ವಹಿಸದ ಪಯಣಿಗರು ತಮ್ಮ ಹೊಣೆ ಅರಿಯುವಂತೆ ಆಗಿದೆ !

೬) ಸ್ವದೇಶಿ ವಸ್ತುಗಳ ಪುನರುಜ್ಜೀವನ ಉಂಟು ಮಾಡಿದ್ದೀರಿ ! ಆಧುನಿಕರೆನಿಸಿಕೊಂಡವರೆಲ್ಲ, ಕೇವಲ ವಿದ್ಯುತ್ತನ್ನೇ ಅವಲಂಬಿಸಿದ ಫ್ಯಾನ್, ಮಿಕ್ಸಿ, ಗೀಸರ್, ವ್ಯಾಕ್ಯೂಂ ಕ್ಲೀನರ್, ವಾಶಿಂಗ್ ಮೆಶಿನ್ ಮುಂತಾದ ಪಾಶ್ಚಾತ್ಯ ರೀತಿಯ ಕೃತ್ರಿಮ ಯಂತ್ರಗಳಿಗೆ ಮಾರು ಹೋಗಿದ್ದಾರೆ. ಇದರಿಂದ ನಮ್ಮ ಪುರಾತನ ಗೃಹಕೈಗಾರಿಕೆಗಳೂ, ಅಂದಚೆಂದದ ಉಪಕರಣಗಳೂ ಮಣ್ಣುಗೂಡಿದ್ದವು. ಈಗ ನಿಮ್ಮ ದೂರದೃಷ್ಟಿಯಿಂದಾಗಿ ಕೈಬೀಸಣಿಗೆ, ರುಬ್ಬುಕಲ್ಲು, ತಾಮ್ರದ ಹಂಡೆ, ಪೊರಕೆ, ಬಟ್ಟೆ ಒಗೆಯುವ ಕಲ್ಲುಗಳಿಗೆಲ್ಲ ಪುನಃ ಬೇಡಿಕೆ ಬರುತ್ತಿದೆ ! ಮಾನವನ ಕೈಯಾರೆ ಸೇವೆಗೆ ಗ್ರಾಮ–ನಗರಗಳೆನ್ನದೆ ಬೇಡಿಕೆ ಬಹುಮುಖವಾಗಿದೆ !

೭) ನಮ್ಮ ಆರೋಗ್ಯ ಸಾಕಷ್ಟು ಸುಧಾರಿಸಲಿಕ್ಕೆ ನಿಮ್ಮ ಪರೋಕ್ಷ ಸಹಾಯ ಅಷ್ಟಿಷ್ಟಲ್ಲ ! ವಿದ್ಯುತ್ ಒಲೆಯ ಸಣ್ಣ ಉರಿಯಲ್ಲಿ ನನ್ನಾಕೆ ಮಾಡುತ್ತಿದ್ದ ಬಾಸುಂದಿ, ದೂದಪೇಡ, ನೇಂದ್ರ ಬಾಳೆ ಹಲ್ವ, ಪೋಡಿ, ಸುಕೃತ್‌ನಂತಹ ಪಕ್ವಾನ್ನಗಳು ನಿಂತೇ ಹೋಗಿ ಸಾದಾ ಆಹಾರಕ್ಕೆ ಅವಕಾಶವಾಗಿದೆ.

೮) ಅನಿಗದಿತ ವಿದ್ಯುತ್ ಕಡಿತ ಪ್ರಾರಂಭಿಸಿ, ಗಂಡಸರೇ ಅಡಿಗೆ ಮಾಡುವ ಮನೆಗಳಲ್ಲಿ ಹೊಸ ಪಾಕಶೋಧಗಳಿಗೆ ಅವಕಾಶವಾಗಿದೆ ! ಕುಕ್ಕರ ಪಾತ್ರೆ ಒಂದರಲ್ಲಿ ನೀರಿನೊಂದಿಗೆ ಸಾದಾ ಅಕ್ಕಿ, ಇನ್ನೊಂದರಲ್ಲಿ ಕುಚ್ಚಕ್ಕಿ ಇಟ್ಟು, ಬೇಯಿಸಿಟ್ಟರೆ, ಎರಡೂ ಊಟಗಳಲ್ಲಿ ಎಂಥ ಬದಲಾವಣೆ ! ಬೆಳಿಗ್ಗೆ ಮೊಸರನ್ನ, ಚಟ್ನಿ ಪುಡಿ, ಉಪ್ಪಿನಕಾಯಿ, ರಾತ್ರಿಗೆ ಗಂಜಿಯೂಟ. ಉಪ್ಪುಮಾವಿನಕಾಯಿ ! ಕ್ಯಾಲರಿಗಳ ಮೇಲೆ ಕಣ್ಣು ಇಡುವವರಿಗೆ ಕಿವಿಮಾತು–ಕರೆಂಟಿದ್ದರಷ್ಟೆ ! ಇಲ್ಲದಿದ್ದರೂ ಅಷ್ಟೆ ! ಗಂಜಿಯೂಟದಲ್ಲಿ ಕೊಬ್ಬಿಲ್ಲ!

೯) ವಿದ್ಯುತ್ ಕಡಿತ ಹೆಚ್ಚಿನ ಕನ್ನಡ ಪ್ರೇಮಕ್ಕೆ ಅವಕಾಶ ಮಾಡಿಕೊಟ್ಟಿದೆ ! ಕನ್ನಡ ನಾಡಿನುದ್ದಕ್ಕೂ ವಿದ್ಯುತ್ ಪೂರೈಕೆ ನಿಂತಾಗ ಟಿ.ವಿ. ದರ್ಶನ ಸಾಧ್ಯ ಇಲ್ಲವಷ್ಟೆ ? ಮೂಲೆಗುಂಪಾದ ರೇಡಿಯೋ ಟ್ರಾನ್ಸಿಸ್ಟರ್‌ಗಳೆಲ್ಲ ಈಗ ಸೆಲ್‌ಗಳನ್ನು ಪಡೆದು ಸಕಾಲಕ್ಕೆ

ಸಮಾಚಾರ ಹಾಗೂ ಕನ್ನಡ ಚಿತ್ರಗೀತೆಗಳನ್ನು ಕೇಳುವಂತಾಗಿದೆ ! ಕನ್ನಡಿಗರು ತಾವೇ ಸ್ವಿಚ್ ಹಾಕಿ ಇವನ್ನೂ ಇತರ ಕಾರ್ಯಕ್ರಮಗಳನ್ನೂ ಕೇಳುತ್ತಿದ್ದು ಬಾನುಲಿ ಭವಿಷ್ಯ ಭರವಸೆ ತಾಳಿದೆ !

ಓದುತ್ತಿದ್ದಂತೆ ಫ್ಯಾನ್ ಗಕ್ಕನೆ ನಿಂತು ಬಿಟ್ಟಿತು. ಅನಿಗದಿತ ಪವರ್ ಕಟ್ ಜಾರಿಗೆ ಬಂತೆಂದು ರಾಯರು ಸಮಾಧಾನ ಹೇಳಿದರು ಮೊಂಬತ್ತಿ ಹಚ್ಚಿ, ಮರೆಯದೇ ತಂದ ಕೈಬೀಸಣಿಗೆ ಕೊಟ್ಟರು. ತಣ್ಣೀರಿನ ಸ್ನಾನ ಅದಾಗಲೇ ರೂಢಿಯಾಗಿತ್ತು. ಕಡುಸೆಕೆಯ ನಮ್ಮ ಊರಿಗಿಂತ ಬೆಂಗಳೂರೇ ತಂಪುದಾಣವೆನಿಸಿತ್ತು. ಮಾಡಿಟ್ಟ ಗಂಜಿ ಊಟ ಹಿತವಾಗೇ ಇತ್ತು.

ಬೆಚ್ಚನಾ ಮನೆಯಾಗಿ ಕುಚ್ಚಕ್ಕಿ ಗಂಜಿಯಾಗಿ,<br>
ವೆಚ್ಚವಾಗದೇ ಹಣ ಕೆಇಬಿ ಉಳಿಸೆ,<br>
ಸ್ವರ್ಗಕ್ಕೆ ಕಿಚ್ಚ ಹಚ್ಚೆಂದ ಸರ್ವಜ್ಞ!

ಎಂದು ಸ್ವಾನುಭವದ ನುಡಿಯನ್ನು ರಾಯರು ಹಾಡಿದರು.

ಈಗ, ಬೆವರು ಸುರಿಸಿಯೇ ಗಂಜಿಯೂಟ ಮಾಡುವಂತೆ ಆಗಿದೆ ! ಆದ್ದರಿಂದ ರಾಯರ ಈ ಒಂದು ಮಾತು ಸಾಧ್ಯವಾಗಿದೆ – ಎಂದು ಹೇಳಲು ಸಂತೋಷ ಪಡುತ್ತೇನೆ. ನಡುರಾತ್ರಿ ಗಕ್ಕನೆ ಫ್ಯಾನ್ ನಿಂತಾಗ, ಫಕ್ಕನೆ ಎಚ್ಚರವಾಗುತ್ತದೆ. ಪಕ್ಕದಲ್ಲಿದ್ದ ಬೀಸಣಿಗೆ, ಬೆವರೊರೆಸಲು ಕೈಪಂಚೆಗಳು ನೆರವಿಗೆ ಬರುತ್ತವೆ. ಬೆವರ ಮಹತ್ವವನ್ನು ಊಟದಲ್ಲಿ ಅಷ್ಟೆ ಏಕೆ, ನಿದ್ರೆಯಲ್ಲೂ ಮನಗಾಣಿಸಿಕೊಟ್ಟ ಕೆ ಇ ಬಿ ಮಹತ್ವ ಮರೆಯಲಿಕ್ಕುಂಟೆ ? ಈ ಕೊನೆಯ ಹಾಗೂ ಹತ್ತನೆಯ ಕ ವಿ ಮಂ ಸಾಧನೆಯನ್ನು ಸೇರಿಸಲು ರಾಯರಿಗೆ ಹೇಳಬೇಕೆಂದಿದ್ದೇನೆ.

■ ■

## ೧೬. ಸುಖದ ನಿವೃತ್ತಿಯ ಸೂತ್ರಗಳು

ನಿವೃತ್ತಿ ಸಮೀಪಿಸುತ್ತ ಬಂದಂತೆ, ಮುಂದಿನ ಜೀವನವನ್ನು ಹೇಗೆ ಯೋಜಿಸಬೇಕು ? ಎಂದು ದಿನವೂ ಕೊಂಚ ಹೊತ್ತು ಯೋಚನೆ ಮಾಡುತ್ತಲೇ ಇದ್ದೆ. ಇಷ್ಟೊಂದು ದಿನ ಅಲ್ಲಗಳೆಯಲ್ಪಟ್ಟ ವಿರಾಮ, ಊಟದ ರುಚಿ, ತಿಂಡಿಯ ಸವಿ, ನಿದ್ದೆಯ ಮುದ್ದಾದ ಅನುಭವಗಳನ್ನೆಲ್ಲ ನನ್ನವನ್ನಾಗಿಸುವ ಸುಸಮಯ ಬರುತ್ತಲಿದೆ ! ಅವನ್ನೆಲ್ಲ ಸೂರೆಗೊಳ್ಳಲು ಮುಂದಾಗಿ ಯೋಜನೆ ಹಾಕಿಕೊಳ್ಳಬೇಕು. ಆಕಾಶವಾಣಿಯ ಸೇವೆಯಲ್ಲಿ ಕಾರ್ಯಕ್ರಮಗಳನ್ನೆಲ್ಲ ಮೂರು ತಿಂಗಳು ಮುಂದಾಗಿ ಯೋಜಿಸಬೇಕಾಗುತ್ತಿತ್ತು, ಸುಮಾರು ಮೂವತ್ತು ವರ್ಷಗಳ ಕಾಲ ಅದನ್ನು ಮಾಡಿಯೋ, ಮಾಡಿಸಿಯೋ ದಡ್ಡು ಬಿದ್ದಿತ್ತು.ಯಾರೋ ಸುಖ ಸಂಸಾರಕ್ಕೆ ಹತ್ತುಸೂತ್ರಗಳನ್ನು ಸೂಚಿಸಿದಂತೆ. ಇನ್ನು ಮುಂದೆ ಅರ್ಧ ಸಂಬಳದ ನಿವೃತ್ತಿ ವೇತನಕ್ಕೆ ಅನುಗುಣವಾಗಿ ಐದು ಸೂತ್ರಗಳನ್ನು ಅಂತೂ ಯೋಜಿಸಿ ಗುರುತು ಹಾಕಿಕೊಂಡೆ.

### ಶರೀರದ ಸುಸ್ಥಿತಿ

ಬೆಳಿಗ್ಗೆ ಬೇಗ ಎದ್ದು ಅವಸರವಸರ ತಿಂಡಿ, ಡಬ್ಬಿ, ಅಡಿಗೆ, ಸ್ನಾನ–ಸಿದ್ಧತೆಗಳನ್ನು ಎಡಬಿಡದೆ ಕೈಕೊಂಡು ಸವೆದ ದೇಹಕ್ಕೆ ವಿಶ್ರಾಂತಿ ಕೊಡುವದು. ಬೆಳಿಗ್ಗೆ ೪--೫ಕ್ಕೆ ಏಳುತ್ತಿದ್ದವಳು ಇನ್ನೂ ಮೂರುಗಂಟೆ ಹಾಯಾಗಿ ಮಲಗುವದು.

### ದೇಹ ಹಾಗೂ ಕೂದಲಿನ ಆರೋಗ್ಯ ಮತ್ತುಸೌಂದರ್ಯ ರಕ್ಷಣೆ

"ಮುಪ್ಪು ದೇಹಕ್ಕೂ ಇಲ್ಲ ಮನಸ್ಸಿಗಂತೂ ಮುಪ್ಪು ಇಲ್ಲವೇ ಇಲ್ಲ ! ನಿವೃತ್ತಿ ಎಂಬುದು ಮಾನವನು ಕೃತ್ರಿಮವಾಗಿ ಕಂಡುಕೊಂಡ ಕಲ್ಪನಾ ವಿಲಾಸವಷ್ಟೆ !" ಎಂದು ೮೦ ವರ್ಷದ ಮಹಿಳೆಯೋರ್ವಳು ಕಂಡುಕೊಂಡ ಬದುಕಿನ ರಹಸ್ಯದ ಅಪೂರ್ವಗ್ರಂಥವನ್ನು ಓದಿದ್ದೆ. ಅದರಲ್ಲಿ ದಿನವೂ ಅಭ್ಯಂಗಸ್ನಾನ ಮಾಡುವುದರಿಂದ ನೂತನ ಯೌವನ, ನರ–ಸ್ನಾಯುಗಳ ಪುನಶ್ಚೇತನ ಪ್ರಾಪ್ತವಾಗುತ್ತದೆ ಎಂಬ ಕಿವಿಮಾತು ಇತ್ತು. ಈ ಸೂತ್ರ ನನಗೆ ಇಷ್ಟವಾಯ್ತು. ಆಫೀಸ್ ಜೀವನದ ದೈನಂದಿನ ೮ ನಿಮಿಷದ ಸ್ನಾನವನ್ನು ಒಂದುವರೆ ಗಂಟೆಗೆ ಏರಿಸಲು ಅಭ್ಯಂತರ ಕಾಣಲಿಲ್ಲ ! ಇನ್ನು ರವಿವಾರದ ಅವಸರದ ಅಭ್ಯಂಜನಕ್ಕೆ ಪೂರ್ಣವಿರಾಮ !

### ಶಾರೀರದ ರಿಪೇರಿ

ಹಿಂದೆಂದೋ ನನ್ನ ಧ್ವನಿ ಇಂಪಾಗಿತ್ತಂತೆ ! ಹಾಗೆಂದು ಹೇಳುತ್ತಿದ್ದ ನನ್ನ ಪ್ರಿಯ ಸಖಿಯರು ಸಂದರ್ಭ ಸಿಕ್ಕಾಗೆಲ್ಲ ಕೊಂಕಣಿ ಮರಾಠಿ, ಕನ್ನಡ ಹಾಡುಗಳನ್ನು ನನ್ನಿಂದ

ಹಾಡಿಸುವರು, (ತಲೆ ತಗ್ಗಿಸಿ, ಕಣ್ಣುಮುಚ್ಚಿ ಹಾಡುವ ನನ್ನ ಚಟದಿಂದಾಗಿ, ಅವರು ಗೇಲಿ ಮಾಡುತ್ತಿದ್ದುದಾಗಲಿ, ಸನ್ನೆಯಿಂದ ನಗುತ್ತಿದ್ದುದಾಗಲಿ ಆಗ ತಿಳಿದು ಬರಲಿಲ್ಲ)! ಬಾನುಲಿ ನೌಕರಿಯಲ್ಲಿ ಇತರರ ಧ್ವನಿಗಳ ಅವಲಕ್ಷಣಗಳನ್ನು ಗುರುತಿಸುವದೇ ಮುಖ್ಯ ಹೊಣೆಯಾಗಿತ್ತು. ನನ್ನ ಧ್ವನಿ ನಿರ್ಲಕ್ಷ್ಯಕ್ಕೊಳಗಾಯಿತು. ಬಂಗಾಲಿ, ಮರಾಠಿ, ಹಿಂದಿ ಕೇಂದ್ರಗಳಲ್ಲಿ ಸೇವೆ ಸಲ್ಲಿಸಿ ಅವರವರ ಭಾಷೆಯಲ್ಲಿ ಮಾತನಾಡಿ, ವಿಚಿತ್ರ ಪರಿಚಿತಗಳು ಬೇರೆ ಕಾಣಿಸಿಕೊಂಡು, ನಿಜವಾದ ನನ್ನ ಧ್ವನಿ ಮರೆತೇ ಹೋಗಿತ್ತು! ಸ್ನಾನದ ಮನೆಯಲ್ಲಿ ಸಂಗೀತ ಸಾಧನೆ ಕೈಕೊಂಡು 'ಸ್ವಂತ ಧ್ವನಿ' ಮರಳಿ ಪಡೆಯುವ ನಿರ್ಧಾರ ಮಾಡಿದೆ.

### ಪಾಕಶಾಸ್ತ್ರದಲ್ಲಿ ಪರಿಣತಿ

'ಹೊಟ್ಟೆಯೇ ಪತಿಯ ಹೃದಯಕ್ಕೆ ರಹದಾರಿ, ಎಂಬ ಇಂಗ್ಲಿಷ್ ಗಾದೆಯಿದೆಯಂತೆ. ರುಚಿಕಟ್ಟಾದ ಅಡಿಗೆಯಿಂದ ಪತಿಯ ಮನಸ್ಸನ್ನು ಗೆಲ್ಲಬಹುದು ಎಂದು ಭಾರತೀಯ ನಾರಿಯೂ ಒಪ್ಪುತ್ತಾಳೆ. ಆದರೆ ಪಾಕಕಲೆಯನ್ನು ಮೊದಲೇ ರೂಢಿಸಿಕೊಂಡ ಪತಿರಾಯರ ಮನಸ್ಸನ್ನು ಗೆಲ್ಲಲು ಸಾಧ್ಯವೇ ಇರಲಿಲ್ಲ ! ಸಾಲದ್ದಕ್ಕೆ ಬಾಯಿ ರುಚಿಗಿಂತ ಬುದ್ಧಿಯ ಕೆಲಸಕ್ಕೆ ಗಮನ ಕೊಡು ! ಎಂದು ಮದುವೆಯಾದ ಮೊದಲಲ್ಲೇ ಎಚ್ಚರಿಸಿದ್ದರು. ಆಗ ಅವರ ಮಾತಿಗೆ ಬೆಲೆ ಕೊಟ್ಟು, ನನ್ನ ನಾಲಿಗೆ ರುಚಿ ನಿಯಂತ್ರಿಸಿ ಪರಿತಪಿಸುವಂತೆ ಆಗಿತ್ತು ! ಕುರುಕುಲು ತಿಂಡಿ, ಇಷ್ಟವಿದ್ದ ಸಿಹಿ, ಪಕ್ವಾನ್ನಗಳಿಗೆ ಅಪರೂಪಕ್ಕೆ ಬಿಡುವಿದ್ದಾಗಷ್ಟೆ ಲಕ್ಷ್ಯಕೊಟ್ಟು, ಎಡಬಿಡದ ಗಡಿಬಿಡಿಯ ದಿನಗಳಲ್ಲಿ ಸಾದಾ ಅಡಿಗೆಯನ್ನೇ ರೂಢಿಸಿಕೊಂಡಿದ್ದೆ. ನಿವೃತ್ತಿಯ ನಂತರ ಈ ಮರೆತ ಹಾಬಿಯನ್ನು ಪುನಃ ಕೈಕೊಳ್ಳುವುದು, ಹೊಸ ಪ್ರಯೋಗಗಳನ್ನು ಮಾಡುವುದು ಎಂದುಕೊಂಡೆ, ಭಾರತೀಯ ಚೀನೀ ಹಾಗೂ ಕಾಂಟಿನೆಂಟಲ್ ಪಾಕಪ್ರಕಾರಗಳ ಪುಸ್ತಕಗಳನ್ನು ಕೊಂಡು ತಂದೆ.

### ಬೌದ್ಧಿಕ ಬೆಳವಣಿಗೆ

ಬೇರೆ ಬೇರೆ ಊರುಗಳಲ್ಲಿ ವರ್ಗ, ಟೂರ್‌ಗಳ ಒತ್ತಡಗಳಲ್ಲಿ ನಮ್ಮದು ಮುಖ್ಯತಃ ಪತ್ರ ಸಂಸಾರವೇ ಆಗಿತ್ತು. ಜೊತೆಗೆ ಇರುವ ಸಂದರ್ಭಗಳಲ್ಲೂ ಬೆಳಗಿನ ತಿರುಗಾಟಕ್ಕಷ್ಟೇ ನಮ್ಮ ಮಾತುಕತೆಗಳು ಸೀಮಿತವಾಗುವ ಪ್ರಸಂಗಗಳೇ ಹೆಚ್ಚು. ಇನ್ನು ನಾನು ಮನೆಯಲ್ಲೇ ಇರುವುದರಿಂದ ಸಾಹಿತ್ಯ, ಸಲ್ಲಾಪ, ಮಾನವ ಸಮಾಜದ ಕುರಿತಾದ ಗಂಭೀರ ಚಿಂತನಗಳು, ಗ್ಲೋಬಲ್ ಸಮಸ್ಯೆಗಳ ಕುರಿತು ಮುಕ್ತಮನಸ್ಸಿನ ಚರ್ಚೆಯನ್ನು ರಾಯರೊಂದಿಗೆ ಕೈಕೊಳ್ಳಲು ಸಾಧ್ಯ. ಮಧ್ಯಾಹ್ನ ನಾನು ಬರವಣಿಗೆ ಮಾಡಬೇಕು. ರಾಯರಂತೂ ಮಧ್ಯಾಹ್ನ ಸುಖಶಯನದಲ್ಲಿರುತ್ತಾರೆ ! ಬೆಳಿಗ್ಗೆ ನಾಲ್ಕರ ಮೊದಲೇ ಏಳುವ ಅವರಿಗೆ ಇದೇ ಅಭ್ಯಾಸ. ನಾನು ಆಫೀಸಿನಲ್ಲಿ ತಲೆ–ಬಾಯಿ ಸವೆಸುತ್ತಿದ್ದಾಗ ಇವೆರಡಕ್ಕೂ ವಿಶಾಂತ್ರಿಯನ್ನು ಅವರು ಕೊಡುತ್ತಿದ್ದ ವಿಚಾರದಿಂದ ಆಗೀಗ ಕಸಿವಿಸಿ ಆಗುತ್ತಿದ್ದ ವಿಚಾರ ಒಪ್ಪಿಕೊಳ್ಳುತ್ತೇನೆ ! ಇನ್ನು ಅವರ ಈ ಚಾಳಿ ತಪ್ಪಿಸಬೇಕು. ಮನೆಯಲ್ಲಿ ರಾಶಿ ಬಿದ್ದಿರುವ ಗ್ರಂಥಗಳಲ್ಲಿ ಹೆಚ್ಚಿನವನ್ನು ಅವರು ಓದಿಲ್ಲ 'ಬರಹಗಾರರು ಓದಿನತ್ತ ಸಮಯ ಹಾಕಿದರೆ ಬರವಣಿಗೆ–ಚಿಂತನ ಸಾಗುವುದಿಲ್ಲ' ಎಂದು ಕುಂಟು ನೆವ

ಹೇಳುತ್ತಾರೆ. ಅವರು ಓದದಿದ್ದರೆ, ನಾನಾದರೂ ಅವರಿಗೆ ಓದಿ ಹೇಳಿ, ರುಚಿ ಹುಟ್ಟಿಸಲೇ ಬೇಕು ! ಎಂದು ನಿಶ್ಚಯ ಮಾಡಿಕೊಂಡೆ. ಮಧ್ಯಾಹ್ನದ ಹೊತ್ತು ಇದಕ್ಕೆ ಮೀಸಲು ಎಂದುಕೊಂಡೆ.

ನಿವೃತ್ತಿಯ ದಿನವೂ ಬಂದು ಹೋಯಿತು. ಮರುದಿನ ಎಂದಿನಂತೆ ನಸುಕಿನ ನಾಲ್ಕುವರೆ ಗಂಟೆಗೆ ಎಚ್ಚರವಾಯ್ತು. ಆದರೂ ನಿವೃತ್ತಿಯ ಪಂಚಸೂತ್ರಗಳಲ್ಲಿ ಮೊದಲ ನೆಯದನ್ನು ಜಾರಿಯಲ್ಲಿ ತರಲೇಬೇಕೆಂದು ಮುಸುಕು ಸರಿಯಾಗಿ ಎಳೆದುಕೊಂಡು ಮಲಗಿದೆ. ಇವರು ಬಿಡಲಿಲ್ಲ. ಹದಿನೈದು ನಿಮಿಷ ಬಿಟ್ಟು ''ನಾಲ್ಕೂ ಮುಕ್ಕಾಲಾಯ್ತು! ಏಳುತ್ತೀಯೋ ನೋಡು'' ಎಂದರು.

ನಾನು ಉತ್ತರಿಸದೇ ನಿದ್ರೆಯನ್ನು ನಟಿಸಿದೆ.

''ನಿನ್ನ ಕಾಲುನೋವಿಗೆ, ಡಾಕ್ಟರರು ಕಡ್ಡಾಯದ ನಡಿಗೆಯೊಂದೇ ಪರಿಹಾರ ಎಂದು ಹೇಳಿದ್ದು ಮರೆತೆಯಾ ?''.

''ಏಳರ ನಂತರ ಹೋಗೋಣ್ರಿ !'' ಮುಸುಕಿನೊಳಗಿಂದ ಗೊಣಗಿದೆ.

''ಆ ಹೊತ್ತಿಗೆ ಟ್ರಾಫಿಕ್ಕು, ಧೂಳು, ಸದ್ದು, ಗದ್ದಲ ಹೊಗೆ ಎಂದು ಗೊಣಗು ವವಳೂ ನೀನೇ ! ಮಲ್ಲೇಶ್ವರಂ ರಸ್ತೆಗಳಲ್ಲಿ ಕಾಲಿಡಲಾಗದು ! ಅಡ್ಡಾದಿಡ್ಡಿ ಕಲ್ಲುಗಳು ಪುಟ್‌ಪಾತ್ ಮೇಲೆ ಸರ್ಕಸ್ ಮಾಡುತ್ತ ವಾಕ್ ಸಾಧ್ಯವಿಲ್ಲ ಎಂದು ಸಿಡಿಗುಟ್ಟುವವಳೂ ನೀನೇ !. ಕಾಲು ನೋವು ಕಡಿಮೆಯಾಗಬೇಕಿದ್ದರೆ ವಾಕ್ ಮಾಡಲೇಬೇಕು. ನಿಶ್ಚಿಂತೆ ಯಿಂದ ರಸ್ತೆಯಿಡೀ ನಿನ್ನದು ! ಎಂದು ಕೈಕಾಲು ಬೀಸುತ್ತ ನಡೆದಾಡಬೇಕೆಂದರೆ ಐದು ಗಂಟೆಗಾದರೂ ಹೊರಡಲೇಬೇಕು. ನಾನಂತೂ ಹೊರಟೆ'' ರಾಯರ ಸ್ಟಾರ್ಟಿಂಗ್ ಹಾರ್ನ್ ಕೇಳಿಸಿತು.

ಉಪಾಯವಿಲ್ಲ! ಹಾಲು ತೆಗೆದುಕೊಂಡು ಕಾಸಿ ಇಡುವುದು. ಸ್ವಿಚ್ ಹಾಕಿ ನೀರು ಕಾಸುವುದು. ಕಾಫಿ ತಿಂಡಿಯ ವ್ಯವಸ್ಥೆ ಮಾಡುತ್ತಿದ್ದ ರಾಯರು ಇನ್ನು ಇದನ್ನೆಲ್ಲ ನನಗೇ ಬಿಡುತ್ತಾರೆ, ಎಂದು ಲಗುಬಗೆಯಿಂದ ಪ್ರಾತರ್ವಿಧಿ, ದಂತಧಾವನ ಮುಗಿಸಿ, ಕಾಫಿ ಇಲ್ಲದೆಯೇ ತಿರುಗಾಟಕ್ಕೆ ಹೊರಡಬೇಕಾಯ್ತು, ಕಾಲು ನೋವನ್ನು ಇನ್ನಾರಿಗೊ ದಾಟಿಸಲು ಸಾಧ್ಯವಿಲ್ಲವಲ್ಲ ! ನಿವೃತ್ತಿಯ ಮೊದಲ ದಿನವೇ ಮೊದಲ ಸೂತ್ರ ನಿಷ್ಫಲವಾಯ್ತು.

ಹೋಗಲಿ, ಸ್ನಾನದ ಸುಖವನ್ನಾದರೂ ನಖ ಶಿಖಾಂತ ಪಡೆಯೋಣ ಎಂದು ರಾಯರು ತಮ್ಮ ಲ್ಯಾಬ್‌ಗೆ ಹೊರಟು ಹೋದೊಡನೆ ಬಾತ್‌ರೂಂ ಸೇರಿದೆ. ಕಾಲು ಮಣೆಯ ಮೇಲೆ ವಿರಮಿಸಿ, ನೀರು ಸುರಿದುಕೊಳ್ಳುತ್ತ ಚಿಕ್ಕಂದಿನಲ್ಲಿ ಹಾಡುತ್ತಿದ್ದ ಹಾಡು ಗಳನ್ನು ಒಂದೊಂದಾಗಿ ನೆನಪಿಸಿಕೊಳ್ಳುತ್ತ ಹಾಡಲಾರಂಭಿಸಿದೆ. ಹೊತ್ತು ಸರಿದದ್ದೇ ತಿಳಿಯಲಿಲ್ಲ. ವಿರಾಮವಾಗಿ ಉಳಿದ ಮನೆಗೆಲಸಗಳನ್ನು ಮಾಡಿ ಮುಗಿಸುತ್ತಿದ್ದಂತೆ ಹಿಂದಿರುಗಿದ ರಾಯರು ಹೊರಬಾಗಿಲ ಅಗಳಿಯಲ್ಲಿ ಸೇರಿಸಿದ ಚಿಕ್ಕ ಚೀಟಿ ಕೈಗಿತ್ತರು.

ಮಹಾರಾಯತಿ, ನಹಾನಾದೇವಿ

ಬೀಗಹಾಕದ ಮುಚ್ಚಿದ ಬಾಗಿಲು ನೋಡಿ ಬೆಲ್ ಮಾಡಿದೆ. ಒಂದೇ ಸವನೆ ನೀರು ಸುರಿಯುವ, ಹಾಡುವ ಸದ್ದು ಅಸ್ಪಷ್ಟ ಕೇಳಿಸುತ್ತಲೇ ಇತ್ತು! ಮಲ್ಲೇಶ್ವರಂದಲ್ಲಿ ಒಬ್ಬರ ಮನೆಯಲ್ಲಿ ಬ್ರೆಕ್‌ಫಾಸ್ಟ್ ಆಮಂತ್ರಣವಿತ್ತು, ಅದನ್ನು ಮುಗಿಸಿ ನಿನ್ನ ಮುಖ ದರ್ಶನ ಮಾಡೋಣವೆಂದು ಪುನಃ ಬಂದರೂ ನಿನ್ನ ಸಂಗೀತಾಭ್ಯಂಜನ ಚಾಲೂ ಇದ್ದೇ ಇತ್ತು! ಸಾಯಂಕಾಲ ಪ್ಲೇನಿನಿಂದ ದಿಲ್ಲಿಗೆ. ನಂತರ ಪುನಃ ಜರ್ಮನಿ ತಿರುಗಿ ಬರಲು ಇನ್ನೆರಡು ವರ್ಷ. ಆ ತನಕ ನಿನ್ನ ಸ್ನಾನ ಮುಗಿಯುವ ನಿರೀಕ್ಷೆ!

ನಿನ್ನ 'ಸೋನಾ'

ಸುಧಾ ನನ್ನ ಹಿಂದಿ ಕ್ಲಾಸ್ ಸ್ನೇಹಿತೆ. ಆಕೆಗೆ ತೂಕಡಿಸುವ ಅಭ್ಯಾಸವಿದ್ದುದರಿಂದ ನಾವೆಲ್ಲ 'ಸೋನಾ' ಎಂದೇ ಕರೆಯುತ್ತಿದ್ದೆವು. ಈಗ ಅವಳು 'ಸ್ನಾನದೇವಿ'ಯ ಪದವಿ ಯನ್ನು ನನಗೆ ಕೊಡಮಾಡಿದ್ದಳು. ಆಕೆ ಒತ್ತಿದ ಕರೆಗಂಟೆ ಹಾಡಿನ ಅಬ್ಬರದಲ್ಲಿ ಕೇಳಿಸಲಿಲ್ಲ ವೆಂದು ಫೋನಿಸಿ ಕ್ಷಮೆ ಯಾಚಿಸಿದೆ.

ಆದದ್ದಾಯ್ತು, ಯೋಚಿಸಿ ಫಲವಿಲ್ಲೆಂದು ಮರುದಿನವೂ ಸ್ನಾನದ ಅವಧಿಯನ್ನು ವಿಸ್ತರಿಸಿದೆ.

ಗ್ಯಾಸ್ ಸಿಲಿಂಡರ್ ಖಾಲಿ ಆಗಿ ವಾರ ಕಳೆದಿತ್ತು, ಏಜೆಂಟರಿಗೆ ಫೋನಿಸಿದಾಗ 'ನಮ್ಮ ಡೆಲಿವರಿಬಾಯ್ ಸತತ ಮೂರು ದಿನ ನಿಮ್ಮ ಅಪಾರ್ಟ್‌ಮೆಂಟಿಗೆ ಹೋಗಿ ಹಿಂದಿರುಗಿದ್ದಾನೆ !' ನನಗಿಂತ ಹೆಚ್ಚಿನ ಅಸಹನೀಯತೆಯ ಉದ್ಗಾರ ಆ ಕೊನೆಯಿಂದ ಬಂದಿತು. ನನ್ನ ಸ್ನಾನದ ಸಮಯಕ್ಕೆ ಬಂದು ಹೋಗಬೇಕೇ ಅವನು!

ಮರುದಿನ ಸ್ನಾನದ ಸಮಯ ಮುಂದೆ ಹಾಕಿದೆ. ಆವತ್ತು ಫೋನ್ ದುರಸ್ತಿಯುವ ಬಂದು ಬೆಲ್ ಒತ್ತಿ ಹಿಂತಿರುಗಿ ಹೋದದ್ದು ಗೊತ್ತಾಯಿತು. ಕ್ರಮೇಣ ನನ್ನ ಸ್ನಾನದ ಸಮಯಕ್ಕೆ ಬ್ರೇಕ್ ಬಿತ್ತು, ಜೊತೆಗೆ ಸಂಗೀತದ ಅಭ್ಯಾಸವೂ ಮುರಿದುಬಿತ್ತೆಂದು ಬೇರೆ ಹೇಳಬೇಕಿಲ್ಲ.

ಈಗ ನನ್ನ ನಾಲ್ಕನೆಯ ಸೂತ್ರವಾದ ನನಗೆ ಅತ್ಯಂತ ಪ್ರೀತಿಯ ಹಾಬಿಯೂ ಆದ ಪಾಕಪ್ರಯೋಗಗಳ ವಿಚಾರ ಹೇಳಬೇಕು. ಅತಿ ಅವಶ್ಯವಿದ್ದ ಪ್ರೋತ್ಸಾಹ ಬರ ಬೇಕಾದದ್ದು ಅದನ್ನು ಸೇವಿಸಿ ಆನಂದಿಸಿ ಶಾಭಾಶ್! ಅನ್ನುವವರಿಂದ ತಾನೇ? ಉತ್ತಮ ಪ್ರತಿಕ್ರಿಯೆಯನ್ನು ಮನೆಯ ಪಾಕಪ್ರವೀಣರಿಂದ ನಿರೀಕ್ಷಿಸಿರಲಿಲ್ಲವಾದರೂ ಎಂದಾದ ರೊಮ್ಮೆ ಮೆಚ್ಚಿಕೆ ಬರಬಹುದೆಂದು ಕಾದಿದ್ದೂ ನಿರರ್ಥಕವಾಯ್ತು.

''ಇದೇನು ? ಎಮ್ಮೆಯ ಚಕ್ಕಳದಂತಿರುವ ಈ ಅತ್ಯಾಧುನಿಕ ತಿಂಡಿಯ ಹೆಸರೇನು ?'' ಕಷ್ಟಪಟ್ಟು ತಯಾರಿಸಿದ ಪಿಝ್ಝಾಕ್ಕೆ ರಾಯರ ನಾಮಕರಣ.

''ಸೂಪ್ ಅನ್ನ ಬಸಿದ ಗಂಜಿಯೇ ? ಥೋಕಳಾನೆ! ಬರೆಬೊಗಳೆ!'' ನೂಡಲ್ಸ್ ಮಾಡಿ ಟೇಬಲ್ಲಿಗೆ ತಂದೆ. '' ಈ ಮಳೆ–ಹುಳಗಳ ತಿಂಡಿ ಬೇಡವೇ ಬೇಡ !'' ಎಂದು ಬಿಟ್ಟರು. ಮೊಸರನ್ನ, ಉಪ್ಪಿನಕಾಯಿಯ ಊಟ ಮುಗಿಸಿ ಎದ್ದರು.

ಪಂಪ್‌ಕಿನ್ ಪೈ ತಯಾರಿಸಿದೆ. ನೆನೆಹಾಕಿದ ಸೋಪ್ ತಿಂದಂತಿದೆ ! ರಾಯರ ಉದ್ಗಾರ.

ಎಂದೆಂದಿಗೂ ಅಡಿಗೆಗೆ ಹೆಸರಿಡದ ಮನುಷ್ಯ, ಪ್ರತಿ ಹೊಸ ಪ್ರಯೋಗಕ್ಕೆ ಹೊಸ ಪದಾವಳಿ ಹೆಸರಿಡಲು ಪ್ರಾರಂಭಿಸಿದರು. ಶುದ್ಧ ಶಾಕಾಹಾರವನ್ನು ಸ್ವೀಕರಿಸುವ ನಿರ್ಧಾರ ಕೈಕೊಂಡದ್ದರಿಂದ ಸಾಮಿಷಾಹಾರ ಪ್ರಯೋಗಗಳಿಗೆ ಕಡಿವಾಣ ಬಿದ್ದಿತ್ತು. ಅರವತ್ತರ ಗಡಿ ಭರದಿಂದ ಬಂದಿದೆ. ಕರಿದ ಪದಾರ್ಥ ದೂರವಿರಲಿ, ಸಕ್ಕರೆ ಸಲ್ಲ !' ಎಂದು ಡಾಕ್ಟರರಿಗಿಂತ ಮೊದಲೇ ಎಚ್ಚರಿಕೆಯ ಗಂಟೆ ಬಾರಿಸಲಾರಂಭಿಸಿದರು. ಪುನಃ ಕೊಂಕಣಿ ವ್ಯಂಜನಗಳಿಗೇ ಶರಣು ಹೋದಾಗ, ರುಚಿಯಿಂದ ಊಟ ಮಾಡಿದ್ದರಿಂದ ನನ್ನ ಅಡಿಗೆಯ ಕೈಗುಣ ಪೂರ್ಣ ಕೆಟ್ಟಿಲ್ಲವೆಂದು ಸಮಾಧಾನವಾಯಿತು. ನಿವೃತ್ತಿಯ ಸುಖಜೀವನದ ನಾಲ್ಕನೆಯ ಸೂತ್ರವೂ ಹರಿದುಬಿತ್ತು.

ಕೊನೆಯದಾದ ಬೌದ್ಧಿಕ ಮುನ್ನಡೆಯ ಪ್ರಯೋಗದ ಅತಿಮುಖ್ಯ ಯೋಜನೆಯನ್ನು ಕಾರ್ಯರೂಪಕ್ಕೆ ತರಲು ಅಡ್ಡಿಯಿಲ್ಲ ಎನಿಸಿತು. ಮಧ್ಯಾಹ್ನದಲ್ಲಿ ರಾಯರು ನಿದ್ರಿಸಿ ವಿರಮಿಸುತ್ತಾರೆಂದು ಹೇಳಿದ್ದೆನಷ್ಟೆ ? ನನ್ನ ಆಫೀಸ್ ದಿನಗಳ ಡಬ್ಬಿಯ ೨ ಚಪಾತಿಗಳೂಟ ನಿಂತು ಮನೆಯ ಬಿಸಿ ಊಟ ಅಥವಾ 'ಫುಲ್‌ಮೀಲ್ಸ್' ಮತ್ತು ಹಣ್ಣುಗಳ ಸೇವೆ ಪ್ರಾರಂಭವಾಗಿತ್ತು. ಊಟ ಮುಗಿಸಿ ರಾಯರು ಎಂದಿನಂತೆ ವಿಶ್ರಾಂತಿಗೆ ಬೆಡ್‌ರೂಂ ಸೇರಿದರು. ನಾನು ರೀಡರ್ಸ್ ಡೈಜೆಸ್ಟ್ ಹಿಡಿದು ಆರಾಮ ಖುರ್ಚಿಯಲ್ಲಿ ಒರಗಿದರೆ, ರಾಯರ ಸುಖನಿದ್ರೆಯ ಗೊರಕೆ ಕೇಳಕಲಾರಂಭಿಸಿತು.

'ನಾನೇನು ತಪ್ಪು ಮಾಡಿದ್ದೇನೆ ? ಇಷ್ಟೆಲ್ಲ ವರ್ಷದ ಮಧ್ಯಾಹ್ನದ ಸುಖನಿದ್ರೆ ಹೋಗಲಿ, ಸುಖದ ಲಂಚ್ ಕೂಡ, ಎಷ್ಟೊ ಬಾರಿ ಕುರ್ಚಿಬಿಟ್ಟು ಎದ್ದು ಬೇರೆಡೆ ಕುಳಿತು ಮಾಡಲಾಗುತ್ತಿರಲಿಲ್ಲ. ಕೆಲವರಂತೂ ಅದೇ ಸಮಯಕ್ಕೆ ಕಾದು ಭೇಟಿಗೆ ಬರುತ್ತಿದ್ರು, ಹೋಗಲಿ, ಈಗಲಾದರೂ ಈ ಸಮಯ ನನ್ನದು ! ಎಂದು ಸದ್ದಿಲ್ಲದೇ ಬಂದು ನನ್ನ ಮಂಚದ ಮೇಲೆ ಪವಡಿಸಿದೆ. ಅಭ್ಯಂಜನ ಹೊಟ್ಟೆ ತುಂಬ ಊಟ, ಹಿತವಾದ ಫ್ಯಾನ್ ಗಾಳಿ, ಮಧ್ಯಾಹ್ನದ ನೀರವತೆಗಳು ತಡವಿಲ್ಲದೇ ನಿದ್ರಾಲೋಕಕ್ಕೆ ಕರೆದೊಯ್ದುವು.

ಎಚ್ಚರವಾದಾಗ ೪ ಗಂಟೆ ! ರಾಯರಾಗಲೇ ತಮ್ಮ ಪಾಲಿನ ಟೀ ಮಾಡಿ ಕುಡಿದು, ಬಾಲ್ಕನಿಯಿಂದ ಕಾಕದಂಪತಿ ಗೂಡು ಕಟ್ಟುವುದನ್ನು ವೀಕ್ಷಿಸುವುದರಲ್ಲಿ ತೊಡಗಿದ್ದರು. ನನಗೆ ನಾಚಿಕೆಯೆನಿಸಿ ಮರುದಿನದಿಂದ ಬರವಣಿಗೆ ಪ್ರಾರಂಭಿಸಿಬೇಕು ಎಂದು ದೃಢನಿಶ್ಚಯ ಕೈಕೊಂಡೆ.

ಆದರೆ ಮರುದಿನ, ಅದರ ಮರುದಿನ ಊಟವಾದೊಡನೆ ಕಣ್ಣು ಭಾರವಾಗಿ ದೇಹ ತಂತಾನೆ ಮಂಚದತ್ತ ಸಾಗುತ್ತಿತ್ತು.

ತಿಂಗಳೊಪ್ಪತ್ತಿನಲ್ಲಿ ಮಧ್ಯಾಹ್ನದ ನಿದ್ರೆ ರೂಢಿಯಾಗಿಬಿಟ್ಟಿತು. ರಾಯರಿಗೆ ಓದುವ ಚಟ ಅಂಟಿಸಿ, ಅವರ ದಿನಚರಿಯಲ್ಲಿ ಹೊಸ ಅಧ್ಯಾಯ ಪ್ರಾರಂಭಿಸಬೇಕು ಎಂದು ಕೊಂಡಾಕೆ, ವಾಮಕುಕ್ಷಿಯ ಅವರ 'ಕೆಟ್ಟ ಚಟ'ವನ್ನು ಕಲಿತುಬಿಟ್ಟೆ !

ಆದರೆ ಹೊಸದಾದ ವಿಪತ್ತು ಕಾದಿತ್ತು. ಸೇವಾವಧಿಯ ದಿನಗಳಲ್ಲಿ ಒಟ್ಟಿಗಿರುವ ಸಂದರ್ಭ ಬಂದಾಗ, ರಾಯರು ಕುಕ್ಕರ್ ಇಡುವುದು. ತರಕಾರಿ ಹೆಚ್ಚಿ ಕೊಡುವುದು. ಅಕ್ಕಿ–ಬೇಳೆ ನೆನೆಹಾಕಿದರೆ ರುಬ್ಬಿಡುವುದು ಮೊದಲಾದ ಕೆಲಸಗಳನ್ನು ಮಾಡುತ್ತಿದ್ದರು. ಅದೆಲ್ಲ ಸಹಾಯ ನಿಂತುಹೋಯಿತು. ತಿಂಗಳು ಕಳೆಯುತ್ತ ಬಂದಾಗ, 'ಬರುವ ತಿಂಗಳಿನಿಂದ ಯಾವತ್ತೂ ಶಾಪಿಂಗ್, ಇಲೆಕ್ಟ್ರಿಸಿಟಿ, ಫೋನ್ ಬಿಲ್ ಕಟ್ಟುವುದು, ನಿನಗೇ ವಹಿಸಬೇಕೆಂದಿದ್ದೇನೆ !'' ಬಾಂಬ್ ಹಾಕಿದರು.

ನನ್ನ ಎದೆ ಝಲ್ ಎಂದಿತು. ''ಅಲ್ರೀ ? ಮದುವೆಯಾದಾಗಿನಿಂದ........ ಅದೆಷ್ಟೋ ವರ್ಷಗಳಿಂದ ಈ ಕೆಲಸಗಳನ್ನೆಲ್ಲ ನೀವೇ ಮಾಡುತ್ತ ಬಂದಿದ್ದೀರಿ ! ಅದೇಕೆ ಇದ್ದಕ್ಕಿದ್ದ ಹಾಗೆ ಈ ಶರ್ತು ?''.

''ನಿವೃತ್ತಿ ಜೀವನ ನಿನ್ನೊಬ್ಬಳದೇ ಹಕ್ಕೇನು ? ಮದುವೆಯಾದ ಬಳಿಕ ನೀನು ಜೊತೆಯಲ್ಲಿರಲಿ, ಝುಂ ಅಂತ ಬೇರೆ ಊರಿನಲ್ಲಿ ನೌಕರಿ ಮಾಡಲಿ ನಿನ್ನ ಈ ಮನೆವಾಳ್ತೆ ನಾನೇ ಸಂಭಾಳಿಸಲಿಲ್ಲವೇನು ? ಆದಾಯಕರ ಸಂದಾಯ, ಬ್ಯಾಂಕ್ ವ್ಯವಹಾರ, ಮಗನ ಶಿಕ್ಷಣದ ಮೇಲ್ವಿಚಾರಣೆ, ಫ್ಲ್ಯಾಟ್‌ಗಳ ಹಣ ಹೊಂದಿಸುವಿಕೆ, ಹಲವಾರು ಬಿಲ್‌ಗಳ ತಿಂಗಳಾ ತಿಂಗಳಾ ಚುಕ್ತಾ ಮಾಡಿಲ್ಲವೇನು ? ನೀನು ಒಬ್ಬ ಮ್ಯಾನೇಜರ್ ಎಂದು ನೇಮಿಸಿ, ಅತಿ ಕಡಿಮೆ ಗೌರವಧನ ಕೊಟ್ಟಿದ್ದರೂ ಮನೆ ಸಂಭಾಳಿಸಿದ್ದಕ್ಕೆ ಎಷ್ಟು ಲಕ್ಷ ಸುರಿಯ ಬೇಕಾಗಿತ್ತು, ನನ್ನ ಚಪ್ಪಲಿಗಳ ಜೊತೆಗೆ ಎಲುವು–ಮಾಂಸ ಖಂಡಗಳೂ ಸವೆದಿವೆ. ನನಗೀಗ ಪೂರ್ಣ ನಿವೃತ್ತಿಬೇಕು. ಮನೆಯ ಜವಾಬ್ದಾರಿ ನೀನು ವಹಿಸಿಕೊ !'' ಎಂದು ಮುಸುಕೆಳೆದು ಮಲಗಿದರು. ಗಾಂಧಿ ಸಾಹಿತ್ಯ ಜಾಸ್ತಿ ಓದದಿದ್ದರೂ ಅವರ ಸತ್ಯಾಗ್ರಹದ ಮಾದರಿ ಸ್ವೀಕರಿಸಿದ್ದರೇನೋ ತಮ್ಮದೇ ವಿಧದಲ್ಲಿ!

ಈ ಬ್ರಹ್ಮಾಸ್ತ್ರಕ್ಕೆ ನನ್ನ ಸಿದ್ಧತೆಯಿರಲಿಲ್ಲ! ಅವರು ಮಾಡುತ್ತಿದ್ದ ಅಷ್ಟೊಂದು ಕೆಲಸಗಳಲ್ಲಿ ಒಂದಾದರೂ ಮಾಡಿ ನನಗೆ ಗೊತ್ತಿರಲಿಲ್ಲ. ನಿಯಮಿತ ಸಮಯಕ್ಕೆ ಟಿಫಿನ್ ಡಬ್ಬಿ ಬ್ಯಾಗ್‌ದೊಳಗಿಟ್ಟು ಆಫೀಸಿಗೆ ಹೋಗುವುದು, ತಿರುಗಿಬರುವುದು, ಹೆಚ್ಚೆಂದರೆ ಅಡಿಗೆ ಮನೆ ಜವಾಬ್ದಾರಿ ನನ್ನದಾಗಿತ್ತು. ಇನ್ನು ಈ ಹೊಸ ಕೆಲಸಗಳನ್ನು ಹೇಗಪ್ಪ ನಿರ್ವಹಿಸುವುದು ? ಎಂಬ ಯೋಚನೆಯಲ್ಲಿ ಆ ಮಧ್ಯಾಹ್ನವಿಡೀ ನಿದ್ರೆ ಹತ್ತಲಿಲ್ಲ!

ಹೊಸ ಜವಾಬ್ದಾರಿಗಳನ್ನು ತಪ್ಪಿಸಿಕೊಳ್ಳುವ ಉಪಾಯಗಳನ್ನು ಯೋಚಿಸುತ್ತ ರಾತ್ರಿ ತಡವಾಗಿ ನಿದ್ರೆ ಹತ್ತಿದ್ದರಿಂದ ಮರುದಿನ ತಡವಾಗಿ ಎಚ್ಚರವಾಯ್ತು. ಪ್ರಾತರ್ವಿಧಿಗಳನ್ನು ಮುಗಿಸಿ ರಾಯರತ್ತ ಗಮನ ಹರಿಸಿದೆ. ಬಾಲ್ಕನಿಯಲ್ಲಿ ಅಳಿಲುಗಳ ಮುಟ್ಟಾಟವನ್ನು ದೂರದರ್ಶಕದಿಂದ ವೀಕ್ಷಿಸುತ್ತ ಕುಳಿತಿದ್ದರು. ಅವರ ಕಾಫಿ ಸೇವನೆಯಾಗಿ ಮೂರು ಗಂಟೆ ಕಳೆದ ವಿಚಾರವನ್ನು ಬರಿದಾದ ಬಟ್ಟಲು ಸಾರಿತು.

ರಾಯರು ಹಿಂದಿರುಗಿ ನೋಡಿದರು. ''ಏನು ಅಮ್ಮಾವ್ರು ತಡವಾಗಿ ಎದ್ರಿ ? ನಿದ್ರೆ ಸರಿಯಾಗಿ ಆಯ್ತಾ? ಕಾಫಿ ಕುಡಿತೀರಾ ? ತಿರುಗಾಟಕ್ಕೆ ಹೊರಡ್ತೀರಾ ? ತಿರುಗಾಟ–ಕಮ್ ಬ್ರೆಕ್‌ಫಾಸ್ಟ್ ಮಾಡೋಣವೇ ? ನಿಮ್ಮ ಪ್ಲಾನ್ ಹೇಳಿ !'' ಉಲ್ಲಾಸದಿಂದ ವಿಚಾರಿಸಿಕೊಂಡರು. ಮೊದಲ ದಿನದ ಅವರ ನಿರ್ಧಾರ ಮರೆತಂತೆ ತೋರಿ ಸದ್ಯ

ಬಚಾವಾದೆ ಎಂದುಕೊಂಡು ಕೊನೆಯ ಸೂಚನೆ ಅತ್ಯಂತ ಯೋಗ್ಯವೆಂದು ಒಪ್ಪಿಗೆ ನೀಡಿದೆ.

ಬೇಗ ಬೇಗ ತಯಾರಾಗಿ ಹೊರಟೆ. ತಿರುಗಾಟ ಮುಗಿಸಿ ಮಲ್ಲೇಶ್ವರದ ಪ್ರಸಿದ್ಧ ಉಪಾಹಾರ ಗೃಹಕ್ಕೆ ಹೊರಟದ್ದಾಯಿತು. ಬಿಸಿಬಿಸಿ ವಡಾ, ಸಾಂಬಾರ್ ಪ್ಲೇನ್ ದೋಸಾ ಕಾಫಿಗಳಿಗೆ ಆರ್ಡರ್ ಹೋಯಿತು. ಕಾಫಿಯನ್ನು ಸೇವಿಸುತ್ತಿದ್ದಂತೆ ಈ ವಾಕ್–ಕಮ್–ಬ್ರೇಕ್‌ಫಾಸ್ಟ್ ವ್ಯವಸ್ಥೆ ಮುಂದುವರಿಸಿಕೊಂಡು ಹೋಗುವ ಹೊಸಸೂತ್ರವನ್ನು ಕಂಡು ಹಿಡಿಯಲು ಮನಸ್ಸು ತವಕಗೊಂಡಿತು.

ಮುನ್ನಾರಾತ್ರಿ ಯಾವುದಾದರೂ ಗೃಹೋದ್ಯೋಗದ ಸಮಸ್ಯೆಯನ್ನು ಹುಡುಕಿ ರಾಯರನ್ನು ಕೆಣಕುವುದು, ವಾಗ್ಬಾಣಗಳ ವಿನಿಮಯವಾದಾಗ ಮುನಿಸಿನಿಂದ ಮಲಗುವುದು, ತಡವಾಗಿ ಏಳುತ್ತಿದ್ದಂತೆ ತಿರುಗಾಟ ತಪ್ಪಿಸಲು ಮನಸ್ಸಿಲ್ಲ ಎಂದು ಅವರನ್ನೂ ಹೊರಡಿಸಿ ವಾಕ್ ಹೋಗುವುದು. ಹೊಟೇಲಿನಲ್ಲಿ ಮೊದಲ ಬ್ಯಾಚಿನ ಗಿರಾಕಿಗಳಾಗಿ ಹೊಗೆಯಾಡುವ ಇಡ್ಲಿ–ವಡಾ ಅಥವಾ ದೋಸೆಗೆ ಕಾಫಿಗೆ ನ್ಯಾಯ ಒದಗಿಸುವುದು.

ಈ ಯೋಜನೆ ಸದ್ಯಕ್ಕೆ ಯಶಸ್ವಿಯಾಗಿದೆ. ವಾರಕ್ಕೆ ೨–೩ ಬಾರಿ ಟಿಫಿನ್ ಹೊರಗೆ ಆಗುತ್ತಿದೆ. ಮೊದಲೇ ಐಚ್ಛಿಕ ನಿವೃತ್ತಿ ಪಡೆದಿದ್ದರೆ, ಇನ್ನೆಷ್ಟೋ ಬಿಸಿ ಬಿಸಿ ವಡಾ ದೋಸೆಗಳನ್ನು ಸೇವಿಸಬಹುದಿತ್ತಲ್ಲ ಎಂಬ ಹಳಹಳಿ ಸುರುವಾಗಿದೆ !



## ೧೭. 'ಸ್ಕ್ಯಾಮ್' ತಂದ ಸಂಕಟ

ಈ ವರ್ಷದ ಕಡು ಬೇಸಿಗೆಯಲ್ಲಿ ನಡುರಾತ್ರಿ ಕಳೆದರೂ ಸೆಕೆಯಿಂದ ನಿದ್ರೆ ಬಾರದೇ ಹಾಸಿಗೆಯಲ್ಲಿ ಹೊರಳಾಡುತ್ತಿದ್ದೆ. ಕರೆಗಂಟೆ. ಜೋರಾಗಿ ಕಿರುಚಿಕೊಂಡಿತು. 'ಈ ಮನೆಯಲ್ಲಿಯಾರೂ ಕಿವುಡರಲ್ಲ!' ಎಂದು ಆಗುಂತಕರ ಅಸಭ್ಯ ವರ್ತನೆ ಖಂಡಿಸ ಬೇಕೆಂದು ದೀಪ ಹಾಕಿ ಚಿಕ್ಕಕಿಂಡಿಯ ಬಾಗಿಲು ತೆಗೆದು ಇಣಕಿ ನೋಡಿದೆ. ಸಮವಸ್ತ್ರದ ಅಧಿಕಾರಿಗಳು ನಿಂತಿದ್ದರು ! ಈ ಮೊದಲೂ ಅಪರಾತ್ರಿಯ ಇಂಥ ಅನುಭವ ಬಂದಿದ್ದರಿಂದ. 'ಏನು ಬೇಕಾಗಿತ್ತು ?' ಎಂದು ನಮ್ರತೆಯಿಂದ ವಿಚಾರಿಸಿದೆ. 'ನಾನು ಶ್ರೀಮನ್ನಾರಾಯಣ, ಇವರು ಶ್ರೀವಾಸ್ತವ್, ಸಿ.ಬಿ.ಐ. ದಿಂದ ಬಂದಿದ್ದೇವೆ..... ಎನ್ನುತ್ತಿದ್ದಂತೆಯೇ ಬಾಗಿಲು ತೆಗೆದು, ಆದರದಿಂದ ಬರಮಾಡಿಕೊಂಡು, ಕುಳಿತು ಕೊಳ್ಳಲು ಹೇಳಿ ಫ್ಯಾನ್ ಹಾಕಿದೆ. ಶರಬತ್, ಟೀ, ಕಾಫಿ ಬೇಕೇ ಎಂದು ವಿಚಾರಿಸಿದೆ. ಔಪಚಾರಿಕ ಮಾತು ಸ್ವತಃ ಪರಿಚಯ ಮುಗಿದ ನಂತರ ಶ್ರೀಮನ್ನಾರಾಯಣರು, 'ಮೇಡಂ, ನೀವು ಕೇಂದ್ರ ಸರಕಾರದ ಹಿರಿಯ ಅಧಿಕಾರಿಗಳಾಗಿದ್ದವರಂತೆ. ಸ್ಥಳೀಯರಲ್ಲಿ ವಿಶೇಷ ವರ್ಚಸ್ಸು ಇದ್ದವರಂತೆ. (ಅನಪೇಕ್ಷಿತವಾಗಿ ನನ್ನ ಹುಬ್ಬು ಏರಿದ್ದವು !).... ಆದ್ದರಿಂದ ನಮ್ಮ ವಿಚಾರಣೆಯ ಬಲೆಯಿಂದ ಜಾರಿ ಹೋಗದಂತೆ ಮುನ್ನೆಚ್ಚರಿಕೆಯಿಂದ ವ್ಯವಹರಿಸಬೇಕೆಂದು ನಮ್ಮ ದಿಲ್ಲಿಯ ಮಹಾನಿರ್ದೇಶನಾಲಯದಿಂದ ಆದೇಶ ಬಂದಿದೆ ! ಆದ್ದರಿಂದ ಈ ನಡು ರಾತ್ರಿಯ ವೇಳೆಯಲ್ಲಿ ತೊಂದರೆ ಕೊಡಬೇಕಾಯಿತು !' ಎಂದು ಹಿರಿಯ ಅಧಿಕಾರಿ ವಿವರಿಸಿದರು.

'ನೀವು ಮಾಡಿದ್ದು ಸರಿ, ನಾನು ಮಾಡಿದ್ದ ಅಪರಾಧ. ಅಥವಾ ನನ್ನ ಮೇಲಿನ ಆರೋಪ ಏನೆಂದು ಅರಿಯಬಹುದೇ ?' ಎಂದು ಕೇಳಿದೆ.

'ನಿಮ್ಮ ಸಜ್ಜನಿಕೆ, ಸರಳ ವ್ಯವಹಾರ, ಒಂದಿಷ್ಟೂ ಗಾಬರಿ, ಗೊಂದಲಗಳ ಸುಳಿವಿಲ್ಲದ ಮಾತುಕತೆ ಕೇಳಿದಾಗ, ಅದನ್ನು ಹೇಳಲು ಬಾಯಿಯೇ ಬರುತ್ತಿಲ್ಲ! ಆದರೆ ಹೇಳದೇ ಮಾರ್ಗವಿಲ್ಲ.... ನೀವು ನಿಮ್ಮ ಯಜಮಾನರೊಂದಿಗೆ ಸೇರಿಕೊಂಡು ಭಾರಿ ಸ್ಕ್ಯಾಮಿನ ಒಳಸಂಚು ನಡೆಸಿದ್ದೀರಂತೆ !'.

ಇದಕ್ಕೆ ಏನಾದರೂ ಆಧಾರ, ಪುರಾವೆ ಇದೆಯೇ ?' 'ಅದನ್ನೆಲ್ಲ ದಿಲ್ಲಿಯವರೇ ಕೇಳಿಕೊಂಡು ಖಚಿತ ಪಡಿಸಿ, ಹೆಚ್ಚಿನ ತನಿಖೆಗಾಗಿ ನಮ್ಮನ್ನು ಕಳಿಸಿದ್ದಾರೆ. ನಿಮ್ಮ ಆಕ್ಷೇಪ ಇಲ್ಲದಿದ್ದರೆ, ಟೇಪ್ ಕೇಳಿಸುತ್ತೇವೆ' ಎಂದು ಕಾಯದೇ ಜೊತೆಯಲ್ಲಿ ತಂದ ಯಂತ್ರವನ್ನು ಪ್ರಾರಂಭಿಸಿಯೇ ಬಿಟ್ಟರು. ಅದರಲ್ಲಿ ಕ್ಷೀಣವಾದ ಧ್ವನಿ ಕೇಳುವುದು ತುಂಬ ಕಷ್ಟಕರ

ವಾಗಿತ್ತು, ನಮ್ಮ ಮನೆಯ ಜಪಾನಿ 'ಸೆನೆಸೊನಿಕ್'ಕ್ಕೆ ವರ್ಗಾಯಿಸಲು ವಿನಂತಿಸಿಕೊಂಡು, ನೆರೆಹೊರೆಯವರಿಗೆ ತೊಂದರೆಯಾಗದಂತೆ ಇಯರ್ ಫೋನ್ ಜೋಡಿಸಿದ್ದಾಯಿತು. ಗಾಢ ನಿದ್ರೆಯಲ್ಲಿದ್ದ ರಾಯರನ್ನು ಎಬ್ಬಿಸಿ, ಹಿನ್ನೆಲೆಯನ್ನು ವಿವರಿಸಿ, ಹೊರಗೆ ಕರೆತಂದು, ಆಗುಂತಕರನ್ನು ಪರಿಚಯಿಸಿ ಧ್ವನಿ ಸುರಳಿ ಕೇಳಿಸಿಕೊಳ್ಳಲು ಸೂಚಿಸಿದೆ. ನಮ್ಮಿಬ್ಬರ ಸಂಭಾಷಣೆಯೇ ಹೊರ ಬರಲಾರಂಭಿಸಿತು.

'ನೋಡು, ನನ್ನ ವೃತ್ತಿ ಜೀವನದಿಂದ ನಿವೃತ್ತನಾಗಿ ಕಾಲು ಶತಕ ಜಾರಿಕೊಂಡಿದೆ. ಈ ಅವಧಿಯಲ್ಲಿ ಕನ್ನಡ ಬರಹಗಾರನಾಗಿ ಅದೆಷ್ಟು ಹಣ ಸಂಪಾಸಿದ್ದೇನೆ ಎಂದು ನನಗೆ ಮತ್ತು ಆಕಾಶದಲ್ಲಿ ಅದೃಶ್ಯನಾಗಿರುವ ದೇವರಿಗೆ ಮಾತ್ರ ಗೊತ್ತು!' ರಾಯರ ಧ್ವನಿ.

'ಇದರರ್ಥ ನಾನೂ ನಿವೃತ್ತಳಾಗಿದ್ದೇನೆ ಎಂಬ ಸೂಚನೆಯೇ ? ಆದರೇನಂತೆ ? ನನಗೆ ಪೆನ್‌ಶನ್ ಬರುತ್ತಿದೆಯಲ್ಲ?' ನನ್ನ ಧ್ವನಿ.

'ಅಜ್ಜಿ ನೂತದ್ದೆಲ್ಲ ಮೊಮ್ಮಗನ ಉಡಿದಾರಕ್ಕೆ ಸಾಲದಂತೆ ! ಈವರೆಗಿನ ನಿನ್ನ ಆದಾಯ, ಆಗಾಗ ಆಸ್ಪತ್ರೆ ಭೇಟಿ ಔಷಧೋಪಚಾರಗಳಿಗೇ ಸಾಲದಿದ್ದಾಗ, ಹೊಟ್ಟೆ–ಬಟ್ಟೆಗೆ ವ್ಯವಸ್ಥೆ ಬೇಡವೇ !

'ಕಠೋರ ಸತ್ಯ ! ನೋಡಿ, ನಿಮ್ಮ ಸೋದರರೆಲ್ಲ ಬಟ್ಟೆ ವ್ಯಾಪಾರ ಮಾಡಿಯೇ ಕಾರಿನಲ್ಲಿ ಓಡಾಡುತ್ತಾರೆ. ನೀವು ಒಂದು ಸಾಯಕಲ್ ಕೊಳ್ಳದಷ್ಟು ಧನಿಕರಾಗಿರುವಿರಿ ! ಈಗಲಾದರೂ ಬರಹಗಾರನ ಹವ್ಯಾಸ ಬಿಟ್ಟು ಯಾವುದಾದರೂ ಲಾಭದಾಯಕ ವೃತ್ತಿ ಕೈಕೊಳ್ಳಬಾರದೇ ? ಜಾತಿ – ಕುಲ ಕಸುಬಿಗೆ ಅಪವಾದವಾಗಿದ್ದೀರಿ !'.

'ಹೌದು ಕಣೆ ! ಆ ದಿಸೆಯಲ್ಲಿ ನಾನು ಆಳವಾಗಿ ಆಲೋಚಿಸಿ ಒಂದು ನಿರ್ಧಾರಕ್ಕೆ ಬಂದುಬಿಟ್ಟಿದ್ದೇನೆ. ಇದಕ್ಕೆ ಸಮ್ಮತಿಸಿ ನೀನು ಸಂಪೂರ್ಣ ಸಹಕಾರ ನೀಡಿದರೆ ನಾವು ಆಗರ್ಭ ಶ್ರೀಮಂತರಾಗುವುದರಲ್ಲಿ ಯಾವ ಸಂಶವೂ ಇಲ್ಲ'.

'ಅಂ ! ಕುತೂಹಲ ತಡೆಯಲಾಗುತ್ತಿಲ್ಲ, ಬೇಗ ಹೇಳಿ !'.

'ಕೆಲಕಾಲದಿಂದ ಷೇರುಗಳ ಸ್ಕ್ಯಾಮ್, ಸಕ್ಕರೆ ಸ್ಕ್ಯಾಮ್, ಶೂ ಸ್ಕ್ಯಾಮ್‌ಗಳ ಪ್ರಕರಣಗಳನ್ನು ಕೂಲಂಕಷವಾಗಿ ಅಭ್ಯಸಿಸುತ್ತಿದ್ದದ್ದು ನಿನಗೆ ಗೊತ್ತಿದೆ. ನಾವೂ ಸ್ವಾರ್ಥಕ್ಕಾಗಿ ಸ್ಕ್ಯಾಮ್ ಯೋಜನೆಯೊಂದನ್ನು ಏಕೆ ಜಾರಿಗೆ ತರಬಾರದು ? ಎಂಬ ನಿರ್ಧಾರಕ್ಕೆ ಬಂದಿದ್ದೇನೆ ! ಇದಕ್ಕಾಗಿ ಬೃಹತ್ ಯೋಜನೆಯ ಕಲ್ಪನೆಯಲ್ಲಿ ತಯಾರಾಗಿದೆ !

'ಬೇಗನೇ ಹೇಳ್ರಿ !'.

ನಮ್ಮ ಹಿಂದುಳಿದ ಊರಾದ ಹೊನ್ನಾವರದಲ್ಲಿ ಗೋಡಂಬಿ ಉತ್ಪಾದನಾ ಕಾರ್ಖಾನೆಗಾಗಿ ಸರಕಾರದ ಅನುಮತಿ ಕೇಳುವುದು. ಅದಕ್ಕೆ ಬೇಕಾಗುವ ಪರಿಸರ, ಯೋಜನಾ, ಅರಣ್ಯ, ವಿದ್ಯುತ್ ಖಾತೆಗಳಿಂದ 'ಆಕ್ಷೇಪವಿಲ್ಲ' ಎಂಬ ಸರ್ಟಿಫಿಕೇಟು ಪಡೆಯುವುದು ಕಷ್ಟವಿಲ್ಲ, ಅವರ ಮಾಮೂಲು, ಫೀ ಕಟ್ಟಿಬಿಟ್ಟರೆ ಕಣ್ಮುಚ್ಚಿ ಹಸ್ತಾಕ್ಷರ

ಹಾಕಿಕೊಡುತ್ತಾರೆ ! ಉದ್ಯೋಗ, ಉದ್ದಿಮೆ ಮಂತ್ರಿಗಳಂತೂ ಜಿಲ್ಲೆಯವರೇ ಇದ್ದುದರಿಂದ ಈ ಯೋಜನೆಗೆ ಬೆಂಬಲ ಸಿಕ್ಕಿಯೇ ತೀರಿದ ಹಾಗೆ......

'ಅದು ಹೇಗೆ ?'

'ಅಯ್ಯೋ ಮರುಳೆ ! ಇಂಥವಕ್ಕೆ ಬೆಂಬಲಿಸದಿದ್ದರೆ ಜನರ ಅವಕೃಪೆಗೆ ಒಳಗಾಗಿ ಅವರ ಮತವನ್ನು ಕೇಳುವ ಅಧಿಕಾರವನ್ನೇ ಕಳೆದುಕೊಳ್ಳುತ್ತೇವೆ ಎಂಬ ಭಯ–ಭೀತಿ ಅವರನ್ನು ಸದಾ ಕಾಡುತ್ತಿರುತ್ತವೆ– ಈ ಕಾಗದ–ಪತ್ರಗಳನ್ನು ಆಧರಿಸಿ ರಾಷ್ಟ್ರೀಕೃತ ಬ್ಯಾಂಕಿನಿಂದ ಐದು ಲಕ್ಷ ರೂಪಾಯಿಗಳ ಸಾಲ, ಸುಲಭ ಬಡ್ಡಿಯಲ್ಲಿ ಪಡೆಯುವದು ಉಸಿರಾಡಿಸಿದಷ್ಟು ಸುಲಭ.

'ಅದೆಲ್ಲ ಸರಿ, ಕಾರ್ಖಾನೆ ಎಲ್ಲಿ ಸ್ಥಾಪಿಸ್ತೀರಿ ?' 'ಪೂರ್ಣ ವಿವರಗಳನ್ನು ಕೇಳುವಷ್ಟು ತಾಳ್ಮೆ ತೋರಿಸು ಮಹಾರಾಯ್ತಿ ! ಊರಲ್ಲಿ ಹಾಳು ಬಿದ್ದ ಹಿತ್ತಲೊಂದಿದೆಯಲ್ಲ ? ಅಲ್ಲಿ 'ಕಾಮತ್ ಕ್ಯಾಷೂಸ್' ಎಂಬ ಅಂತರಾಷ್ಟ್ರೀಯ ಗಿರಾಕಿಗಳನ್ನೂ ಆಕರ್ಷಿಸುವಂತಹ, ಕಂಡವರಿಗೆಲ್ಲ ಬಾಯಿ ನೀರೂರುವಂತಹ ಫಲಕವನ್ನು ತೂಗಿ ಹಾಕುವುದು. ಕರ್ನಾಟಕದ, ಇತರ ರಾಜ್ಯಗಳ ಎಲ್ಲ ವೃತ್ತಪತ್ರಿಕೆ, ನಿಯತಕಾಲಿಕೆಗಳಲ್ಲಿ 'ಅರ್ಧ ಬೆಲೆಗೆ ಗೋಡಂಬಿ' ಎಂದು ಗೋಡಂಬಿಯಾಕಾರಾದ ಅರೆನಗ್ನ ಮಾಡೆಲ್‌ದ ಜಾಹೀರಾತು ಕೊಡುವುದು ! ಎಲ್ಲ ಊರುಗಳಲ್ಲಿ ಠೋಕ್ ಮತ್ತು ಚಿಲ್ಲರೆ ಮಾರಾಟಗಾರರು ಬೇಕು ಎಂಬ ಇನ್ನೊಂದು ಜಾಹೀರಾತು. ಇಷ್ಟು ಮಾಡಿದೆನೆಂದರೆ ಆರ್ಡರುಗಳ ಸುರಿ ಮಳೆಯೇ ಬೀಳುವುದರಲ್ಲಿ ಸಂಶಯವಿಲ್ಲ'.

'ಹೀಗೋ ! ಚೆನ್ನಾಗಿದೆ ಪ್ಲಾನ್ ! ಆದರೆ ಅರ್ಧಬೆಲೆಗೆ ಗೋಡಂಬಿ ಹೇಗೆ ?' 'ಅಲ್ಲೇ ಇರುವುದು ಮಜಾ ! ಇದು ಪರಿಸರ ಪ್ರಜ್ಞೆಯ ಯುಗವಲ್ಲವೇ ? ಅಂತೆಯೇ ಅರಣ್ಯ ಕಡಿದು, ಗುಡ್ಡ–ಬೆಟ್ಟಗಳಲ್ಲಿ ಬೆಳೆಸಿದ ಗೇರು ಮರಗಳಿಂದ ಪಡೆದ ಗೋಡಂಬಿ ಇವಲ್ಲ, ಪರಿಸರ ಪ್ರಿಯ ಗೋಡಂಬಿಗಳು ! ಹೊಲಗಳಲ್ಲಿ ವರ್ಷ ವರ್ಷವೂ ಬೆಳೆಯುವ ಗೋದಿಯಿಂದ ಪಡೆಯುವ ಶುಭ್ರ ಮೈದಾದಿಂದ ಉತ್ಪನ್ನವಾದವು ! ಶುದ್ಧ ಗೋಡಂಬಿ ಆಕಾರದ ಬಿಸ್ಕತ್ತುಗಳು, ಮಲಬಾರ ಬೇಕರಿಯವರು ತಯಾರಿಸಿದ, ಗರಿ ಗರಿಯಾದ 'ಕಾಮತ್ ಕ್ಯಾಷೂ'ಗಳು ! ಅವುಗಳನ್ನು ಕಾಮಿನಿಯೋರ್ವಳ ಸುಂದರ ಚಿತ್ರವುಳ್ಳ ಪೊಟ್ಟಣಗಳಲ್ಲಿ ಕಟ್ಟಿ ಮಾರಾಟ ಮಾಡಿದರೆ ಜನ ಮೈಮೇಲೆ ಬಿದ್ದು ಖರೀದಿಸುತ್ತಾರೆ ! ತಿಳಿಯಿತೇ ?'

'ಗಿರಾಕಿಗಳು ನಾವು ತಿಳಿದಷ್ಟು ಮೂರ್ಖರಲ್ಲ ರಾಯರೇ! ಇದು ಗೋಡಂಬಿ ಹೆಸರಿನಲ್ಲಿ ನಡೆಯುತ್ತಿರುವ ಶುದ್ಧ ಮೋಸ ಎಂಬ ವಾರ್ತೆ, ಎಲ್ಲೆಡೆ ಹಬ್ಬದೇ ಇರುತ್ತದೆಯೇ ?'

'ಇದಕ್ಕೇ ಅಂತ ಕಾಣುತ್ತೇ. ಹೆಂಗಸರ ಬುದ್ಧಿ ಮೊಣಕಾಲ ಕೆಳಗೆ ಅಂತ ನಮ್ಮ ಹಿರಿಯರು ಸಾರಿದ್ದು ! ಇವು ಜನರ ಬಾಯಲ್ಲಿ ಬಿದ್ದು ಮೋಸ ಅರಿವಾಗುವ ಮೊದಲೇ ವರ್ತಮಾನ ಪತ್ರಿಕೆ, ರೇಡಿಯೋ, ದೂರದರ್ಶನದಲ್ಲಿ ಭಾರೀ ಭಾರೀ ಜಾಹೀ

ರಾತುಗಳು ಬಂದಿರುತ್ತವೆ. ಹೇಗೆಂದು ಕೊಂಚ ಕೇಳು. 'ಕಾಮತ್ ಕ್ಯಾಷ್ಯೂ'ದವರ ಹೊಸ ದಾಖಲೆ ! ಪ್ರಾರಂಭಿಸಿದ ಒಂದೇ ವರ್ಷದಲ್ಲಿ ತೊಡಗಿಸಿದ ಬಂಡವಲು ಹಿಂತಿರುಗಿ ಪಡೆಯುವುದಲ್ಲದೇ ಪಾಲುದಾರರಿಗೆ ಶೇಕಡಾ ಐವತ್ತರಷ್ಟು ಡಿವಿಡೆಂಡ್ ಹಂಚಲಾಗಿದೆ. ಜರ್ಮನಿ, ಬ್ರಿಟನ್, ಆಸ್ಟ್ರೇಲಿಯ, ಅಮೇರಿಕೆಗಳಂಥ ಮುಂದುವರಿದ ರಾಷ್ಟ್ರಗಳಿಂದಲೂ ಭಾರೀ ಬೇಡಿಕೆ ಬರಲಾರಂಭಿಸಿದ್ದರಿಂದ ಈ ಉದ್ದಿಮೆಯ ವಿಸ್ತರಣೆ ಯೋಜಿಸಲಾಗಿದೆ. ನೂರು, ಸಹಸ್ರ ಒಟ್ಟು ಸಂಖ್ಯೆ. ಹತ್ತು ರೂಪಾಯಿಗಳ ಒಂದು ಷೇರನ್ನು ಐವತ್ತು ರೂಪಾಯಿಗಳ ಫ್ರೀಮಿಯಂ ಮೇಲೆ ಕೊಡಲಾಗುವುದು. ದೀಪಾವಳಿ ರಜೆ ನಂತರ ಬ್ಯಾಂಕ್ ತೆರೆದ ದಿನ ಹಣ ಪಡೆಯಲು ಪ್ರಾರಂಭಿಸಿ ! ಒಂದು ವಾರ ಇಲ್ಲವೇ ಅದಕ್ಕೂ ಮೊದಲು ಮುಚ್ಚಲಾಗುವುದು. ಜಾಹೀರಪಡಿಸಿದ ಷೇರು ಬಂಡವಲಿಗಿಂತ ಶೇಕಡಾ ಅರವತ್ತರ ತನಕ ಹೆಚ್ಚಾಗಿ ಬಂದ ಹಣವನ್ನು ಇಟ್ಟುಕೊಳ್ಳುವ ಹಕ್ಕನ್ನು ಕಂಪನಿ ಪಡೆದಿದೆ' ಎಂದು ಸಾರಿದರೆ ಹಣದ ಹೆಬ್ಬಾಸೆಯುಳ್ಳವರು, ಕಪ್ಪು ಧನವುಳ್ಳವರು, ಮೊದಲಾದವರು ಬೇನಾಮಿಯಾಗಿ ಜೇನ್ನೊಣಗಳಂತೆ ಷೇರುಗಳಿಗಾಗಿ ಧಾವಿಸುವುದರಲ್ಲಿ ಸಂಶಯವೇ ಇಲ್ಲ!'

'ಹೀಗೆ ಕೋಟ್ಯಂತರ ಹಣ ಪಡೆದು ಸಕಲರಿಗೂ ಮೋಸ ಮಾಡಿದರೆ, ಶೇರು ಪಡೆದವರು ಮತ್ತು ಸರಕಾರದವರು ಸುಮ್ಮನೆ ಬಿಡುವರೇ ?'

'ಅಯ್ಯೋ ! ಇದೇನು ಮಹಾ ರಕಮು ಎಂದು ತಿಳಿದಿದ್ದಿಯಾ ? ಬೊಫೋರ್ಸ್ ತೋಪು ಪ್ರಕರಣದಲ್ಲಿ ಮಧ್ಯವರ್ತಿಗಳು ಕೋಟಿಗಟ್ಟಲೆ 'ಗುಳುಂ ಮಾಡಿದ್ದಾರೆಂದು ತಿಳಿದರೂ ಒಂದು ಪೈಸಾ ಹಿಂದಿರುಗಿ ಪಡೆಯಲು ಸಾಧ್ಯವಾಯಿತೇ ? ಸ್ಕ್ಯಾಮ್ ಹಣದಲ್ಲಿ ಹೊರಳಾಡುತ್ತಿರುವ ಇತರರ ಹೆಸರುಗಳು ಸರ್ವವಿದಿತವಾಗಿದ್ದರೂ ಒಂದು ಬಿಡಿಗಾಸು ಹಿಂದಿರುಗಿ ಹೊಂದಲು ಸರಕಾರಕ್ಕೆ ಆಗಲಿಲ್ಲ. ಅಂತೆಯೇ ಈ ಕಾಮತನಿಂದಲೂ ಒಂದು ಕವಡೆ ವಸೂಲು ಮಾಡುವ ಎದೆಗಾರಿಕೆ ಯಾರಲ್ಲಿ ಇದೆ ?'

'ಪರವಾ ಇಲ್ಲವೇ ! ಇಷ್ಟೆಲ್ಲ ವರ್ಷ ಎಲ್ಲಿ ಹೋಗಿತ್ತು ಈ ಕಾಮತ್ ಕುಶಾಗ್ರ ಮತಿ ? ವ್ಯಾಪಾರಿ ಕುಟುಂಬದಲ್ಲಿ ಹುಟ್ಟಿ, ವ್ಯಾಪಾರವನ್ನು ಎಂದು ಕೈಕೊಳ್ಳದಿದ್ದರೂ ವ್ಯಾಪಾರಿ ಬುದ್ಧಿ ಕಳೆದುಕೊಳ್ಳಲಿಲ್ಲ. ಹುಲಿಮರಿ ಹುಲ್ಲು ಮೇವುದೇ !' ಮೆಚ್ಚಿಗೆಯ ನಗು. ರಾಯರ ಖುಷಿಯ ನಗುವಿನೊಂದಿಗೆ ಟೇಪು ಮುಗಿದಿತ್ತು.

ಆಗಂತುಕ ಗುಪ್ತಚಾರ ಅಧಿಕಾರಿ, ಗೆಲುವಿನ ಧ್ವನಿಯಲ್ಲಿ, 'ಇದಕ್ಕೂ ಹೆಚ್ಚಿನ ಪುರಾವೆ, ಸಮಾಜ ದ್ರೋಹ, ವಂಚನೆಗಳ ಸಂಚಿಗೆ ಇನ್ನೇನು ಬೇಕು ? ನಡೆಯಿರಿ ನಮ್ಮೊಡನೆ' ಎಂದು ಮೃದುಧ್ವನಿ ಆದರೆ ದೃಢವಾದ ಶಬ್ದಗಳಲ್ಲಿ ಆಜ್ಞಾಪಿಸಿದರು. ಅವರ ಮಾತುಗಳಿಂದ ನನಗೆ ನಗು ತಡೆದುಕೊಳ್ಳುವುದು ಬಹಳ ಕಷ್ಟವಾಗಿ ಸೆರಗಿನಿಂದ ಮುಖ ಮುಚ್ಚಿಕೊಂಡು ಕುಳಿತೆ. ರಾಯರು ನನ್ನತ್ತ ಆಕ್ಷೇಪದ ದೃಷ್ಟಿಯಲ್ಲಿ ನೋಡಿ, 'ಕೇವಲ ಈ ಧ್ವನಿ ಸುರುಳಿಯಿಂದ ಅಪರಾಧ ಸಿದ್ಧವಾಗುವುದೇ ? ಅಥವಾ ಬೇರಾವ ಪ್ರಮಾಣಗಳು ಇವೆಯೇ ?' ಎಂದು ಗಂಭೀರವಾಗಿ ಅಧಿಕಾರಿಗಳ ಮುಖ ದಿಟ್ಟಿಸಿದರು.

'ಇನ್ನೊಬ್ಬರನ್ನು ಶಬ್ದಶಃ! ಅನುಕರಣೆ ಮಾಡುವರು ಇದ್ದೇ ಇರುತ್ತಾರೆ. ಆದ್ದರಿಂದ ಕೋರ್ಟು, ಕಚೇರಿಗಳು ಇಂಥ ಸಾಕ್ಷಿಗಳನ್ನು ಸಂಪೂರ್ಣವಾಗಿ ಒಪ್ಪಿಕೊಳ್ಳುವುದಿಲ್ಲ ವೆಂದು ಎರಡು ದಶಕಗಳ ಸಾರ್ವಜನಿಕ ಸೇವೆ ಸಲ್ಲಿಸಿದ ನಾವು ಅರ್ಥೈಸಿಕೊಂಡಿದ್ದೇವೆ'. ಇನ್ನೊಬ್ಬ ಅಧಿಕಾರಿಯೂ ತಲೆದೂಗಿದರು. ಅಂತೆಯೇ ನಿಮ್ಮ ನೆರೆಹೊರೆಯ ಶಾಂತಕ್ಕ ಮತ್ತು ರವಿ ಅವರನ್ನೂ ಸಂಪರ್ಕಿಸಿದ್ದೇವೆ. ಶಾಂತಕ್ಕ ಹೇಳಿದ ಮಾತು ಕೇಳಿ :

'ಕಳೆದ ಹತ್ತು ವರ್ಷಗಳಿಂದ ನಾವು ಪಕ್ಕದ ಮನೆಯಲ್ಲಿದ್ದರೂ ಆ ಅಮ್ಮ ಒಮ್ಮೆಯೂ ನಮ್ಮನ್ನು ತನ್ನ ಮನೆಗೆ ಬರಗೊಟ್ಟಿಲ್ಲ. ನಾನೇ ಸತ್ಯನಾರಾಯಣ ಪೂಜೆ, ವರಲಕ್ಷ್ಮೀ ಪೂಜೆ, ಹೋಗಲಿ ಅರಿಶಿಣ–ಕುಂಕುಮ ಇಟ್ಟುಕೊಂಡು ಕರೆದರೂ ತಪ್ಪಿ ಕೂಡಾ ನಮ್ಮಲ್ಲಿ ಬಂದಿಲ್ಲ! ಅವರದು ರಹಸ್ಯಮಯ, ಗುಪ್ತ ಜೀವನ. ಹೋಗಲಿ ಸಾದಾ, ಸರಳ ವ್ಯಕ್ತಿಗಳೆಂದು ಒಪ್ಪಿಕೊಂಡರೆ, ನಮ್ಮನ್ನೆಲ್ಲ ಏಕೆ ದೂರ ಇಡಬೇಕು ? ಮಾತಿಗೆ ದುಡ್ಡಿದಿಯೇ ?' ಹೆಣ್ಣು ಧ್ವನಿ ಹೇಳಿತು.

ಗಂಡು ಧ್ವನಿಯೊಂದು ಮಾತನ್ನು ಪ್ರಾರಂಭಿಸಿದಾಗ, ನನ್ನ ಎಲ್ಲ ಪ್ರಯತ್ನ ಮೀರಿ ಖೊಕ್ ! ಧ್ವನಿ ಹೊರಬಿದ್ದಾಗ, ಕಷ್ಟಪಟ್ಟು ಅದನ್ನು ಕೆಮ್ಮಿಗೆ ಮಾರ್ಪಡಿಸಿದೆ. ಗಂಟಲು ಸರಿಮಾಡಿಕೊಂಡು ಕಿವಿಗೊಟ್ಟೆ, 'ಈ ಪತಿ–ಪತ್ನಿಯರಲ್ಲಿ ಒಬ್ಬರೂ ನೌಕರಿ ಮಾಡು ವುದಿಲ್ಲ. ಊರವರೆಲ್ಲ ಮಲಗಿರುವಾಗಲೇ ಬೆಳಗಿನ ಸಂಚಾರಕ್ಕೆ ಹೋಗಿ ಬಂದು ನಂತರ ಹೊರಗೆ ಬೀಳುವುದೇ ಇಲ್ಲ. ಇವರಲ್ಲಿ ಅಡಿಗೆಯಾಳು, ಹೊರಕೆಲಸದ ಸೇವಕಿ ಯಾರೂ ಇಲ್ಲ. ಅಪ್ಪಿತಪ್ಪಿ ಯಾರಾದರೂ ಬಂದರೆ, ಮನೆಯ ಬಾಗಿಲು ತೆರೆಯದೇ, ಮುಖ ಮಾತ್ರ ಕಾಣುವ 'ಕನಕನಕಿಂಡಿ' ಯನ್ನು ಮಾಡಿಸಿದ್ದಾರೆ. ಅದರಿಂದ ಹಣಿಕಿ ನೋಡುತ್ತಾರೆ. ಇಷ್ಟಾಗಿ ಸಿರಿವಂತಿಕೆ ಕಡಿಮೆ ಇಲ್ಲ. ವಿವಿಧ ಪ್ರಕಾರದ ದುಬಾರಿ ಕ್ಯಾಮರಾ ಬಳಸುತ್ತಾರೆ. ಬೆಲೆಯುಳ್ಳ ಧ್ವನಿಶ್ರವಣ ಯಂತ್ರ–ರಿಕಾರ್ಡರ್ ಹೊಂದಿದ್ದಾರೆ. ಜಪಾನಿನ ಪೆನಸೋನಿಕ್ ಡೆಕ್ ಇತ್ಯಾದಿಗಳಿವೆ. ಇವರ ಗೂಢಜೀವನ, ಜನರೊಂದಿಗೆ ಬೆರೆಯದೇ ಇರುವುದು ಮತ್ತು ಧನ ಸಂಪಾದನೆಯ ಕುರಿತು ಸಂಶೋಧನೆ ನಡೆಸಿದಾಗ, ನಿಜಸಂಗತಿ ಹೊರಗೆ ಬಂದೀತು !' ಧ್ವನಿಸುರುಳಿ ನಿಲ್ಲಿಸಿ ಶ್ರೀಮನ್ನಾರಾ ಯಣರು ನಮ್ಮತ್ತ ನೋಡಿದರು.

'ಗಂಡು ಧ್ವನಿ ರೌಡಿ ರವಿಯದಲ್ಲವೇ ?' ನಾನು ಗಟ್ಟಿಯಾಗಿ ನುಡಿದು ನಕ್ಕ ನಗೆಯಲ್ಲಿ ಈ ಬಾರಿ ರಾಯರೂ ಪಾಲುಗೊಂಡಿದ್ದರು. ತಾವೆಲ್ಲೊ ಬೇಸ್ತು ಬಿದ್ದಿರಬೇಕೆಂಬ ವಿಚಾರ, ಈಗ ಕ್ರಿಮಿನಲ್ ಕೇಸುಗಳನ್ನು ಹುಡುಕುವ ಹಿರಿಯ ಅಧಿಕಾರಿಗಳನ್ನು ಕಾಡಿತು. ಸ್ವಲ್ಪ ತಡೆದು ರಾಯರು ಸಂತೈಸುವ ಧ್ವನಿಯಲ್ಲಿ 'ನೋಡಿ, ಸರ್, ನಮ್ಮ ನೆರೆಮನೆಯಲ್ಲಿ ರವಿ ಎಂಬ ಉಂಡಾಡಿ ಹುಡುಗ ಇದ್ದಾನೆ. ಆತನಿಗೆ ಓದಲು ಬುದ್ಧಿ ಸಾಲದು. ಕೆಲಸ ಮಾಡಲು ವೇಳೆ ಸಾಲದು. ಅಪ್ಪ ವ್ಯಾಪಾರದಲ್ಲಿ ತುಂಬ ಹಣ ಮಾಡಿದ್ದರಂತೆ. ಈಗವರು ಇಲ್ಲ. ತಾಯಿಯೊಬ್ಬರೇ. ಈತ ಹೆಣ್ಣು–ಹೆಂಡಗಳ ಸಹವಾಸದಲ್ಲಿ ಹಣ ಪೋಲು ಮಾಡುತ್ತ ದಿನಕಳೆಯುತ್ತಿದ್ದಾನೆ. ಒಮ್ಮೆ ಗಲಾಟೆ ವಿಪರೀತವಾದಾಗ ನಾವು ತೀವ್ರವಾಗಿ

ಆಕ್ಷೇಪಿಸಿದ್ದೇ ಅಲ್ಲದೇ ಆತನ ವಿವಿಧ ಚಟುವಟಿಕೆಗಳಿಗೆ ಆತಂಕ ಒಡ್ಡಿದ್ದೆವು. ಅದಕ್ಕವನು ರೋಷದಿಂದ 'ನಿಮಗೆ ಬುದ್ಧಿ ಕಲಿಸದೇ ಬಿಡುವುದಿಲ್ಲ!' ಎಂದು ಪಣ ತೊಟ್ಟಿದ್ದ. ಆತನ ಹತ್ತಿರ ಕಾರ್ಡಲೆಸ್ ಮತ್ತು ಬೆಲೆಯುಳ್ಳ ಧ್ವನಿ ಮುದ್ರಣ ಯಂತ್ರವಿದೆ. ನಮ್ಮ ಎರಡೂ ಮನೆಗಳ ಗ್ಯಾಲರಿಗಳು ಬೇರೆ ತುಂಬ ಹತ್ತಿರ. ಅಂತೆಯೇ ಒಮ್ಮೆ ನಾವು ಅಲ್ಲಿ ಕುಳಿತು ಮಾಡಿದ ಸಂಭಾಷಣೆಯನ್ನು ಕದ್ದು ರಿಕಾರ್ಡ್ ಮಾಡಿ, ಧ್ವನಿ ಸುರುಳಿಯನ್ನು ಪೊಲೀಸ್ ಗುಪ್ತಚಾರ ದಳಕ್ಕೆ ಒಪ್ಪಿಸಿರಬೇಕು. ಅವರು ಪಾಪ, ತಮ್ಮ ಅಪೂರ್ವ ಸಾಧನೆಯನ್ನು ದಿಲ್ಲಿಯ ಅಧಿಕಾರಿಗಳಿಗೆ ತಲುಪಿಸಿರಬೇಕಲ್ಲವೇ ?' ರಾಯರು ವಿವರಣೆ ಕೊಟ್ಟರು.

'ಅದೇನೋ ಒಪ್ಪಿಕೊಳ್ಳೋಣ. ಆದರೆ ಇವೆರಡೂ ನಿಮ್ಮ ಧ್ವನಿ ಮತ್ತು ವಿಚಾರಗಳು ಅಲ್ಲವೆಂದು ಹೇಳಬಲ್ಲಿರಾ ?'.

'ಅದು ನಡೆದದ್ದು ಹೀಗೆ. 'ಪ್ರಜಾವಾಣಿ'ಯವರು ದೀಪಾವಳಿ ಸಂಚಿಕೆಗೆ ಹಾಸ್ಯ ಲೇಖನವೊಂದನ್ನು ಕೇಳಿದ್ದರು. ಈಗಾಗಲೇ ಬರೆದು ಬೇಸತ್ತ ವಿಷಯ ಬೇಡವೆಂದು ಅನಿಸಿ ಹೊಸ ವಿಷಯ ಸೂಚಿಸಿ ! ಎಂದು ರಾಯರಿಗೆ ದುಂಬಾಲು ಬಿದ್ದಿದ್ದೆ. ಸಂಜೆ ಟೀ ಕುಡಿದಾದ ಮೇಲೆ ಈ ಬಾಲ್ಕನಿಯಲ್ಲಿ ಕುಳಿತಾಗ ರಾಯರ ವಿಚಾರಲಹರಿ ಹೊರಟಿತ್ತು. ಅದೇ ಈಗ ನೀವು ಕೇಳಿಸಿದ ಕಾಮತರಿಗೆ ತಂದ 'ಸ್ಕ್ಯಾಮ್ ಸಂಕಟ !' ಎಂದು ನಾನೇ ವಿವರಣೆ ಕೊಟ್ಟು 'ಪ್ರಜಾವಾಣಿ'ಯ ಸಂಪಾದಕರ ಹಸ್ತಾಕ್ಷರವಿದ್ದ ಪತ್ರವನ್ನು ಒಳಗಿನಿಂದ ತಂದು ತೋರಿಸಿದೆ.

ಈಗ ಪೆಚ್ಚಾಗಿ ನಗುವ ಸರದಿ ಅಧಿಕಾರಿಗಳದ್ದಾಗಿತ್ತು. ಮನಸ್ವೀ ನಕ್ಕು, ಮುಕ್ತವಾಗಿ ಹಸ್ತ ಕುಲುಕಿ. ಆ ಅವೇಳೆಯಲ್ಲಿಯೂ ಮಾಡಿಕೊಟ್ಟ ಕಾಫಿಯನ್ನು ಸವಿದೇ ಹೊರಟು ಹೋದರು.



## ೧೮. ಪಯಣಕ್ಕೆ ಪ್ರೋತ್ಸಾಹಿಸಿದಾಗ....

ಅಧಿಕಾರಿಣಿ ಪತ್ನಿ, ಆಕಾಶವಾಣಿ ನೌಕರಿ ನಿಮಿತ್ತ ದೂರ ದೂರದ ನಗರಗಳಲ್ಲಿ ವಾಸ ಮಾಡಬೇಕಾಗಿ ಬಂದ ದಿನಗಳಲ್ಲಿ ನನ್ನ ರಾಯರು ಪ್ರತಿದಿನ ಮಾಡುವ ಹತ್ತಾರು ಸಾಧನೆಗಳನ್ನು ಗಮನಿಸಿದವರಿಲ್ಲ! ಗೃಹಕೃತ್ಯಗಳು, ಸ್ವಯಂಪಾಕ, ವೈಜ್ಞಾನಿಕ ಛಾಯಾ ಗ್ರಹಣ, ಚಿತ್ರಕಲೆ, ಬರವಣಿಗೆ, ಪತ್ರಲೇಖನ, ಇತ್ಯಾದಿ. ಮೈತುಂಬ ಕೆಲಸಗಳಿದ್ದರೂ ದಿನಕ್ಕೊಂದಾದರೂ ಪತ್ರ ಬರೆಯದೇ ಇರುತ್ತಿರಲೇ ಇಲ್ಲ. ನಿವೃತ್ತಳಾಗಿ ಮನೆಯಲ್ಲಿ ಇರುವಂತಾದ ಬಳಿಕ ಈ ಎಲ್ಲ ಚಟುವಟಿಕೆಗಳು ಕುಂಠಿತ ವಾಗುತ್ತ ನಂತರ ನಿಂತೇ ಹೋದವು. ನಿದ್ರೆ, ವಿರಾಮ, ಆಕಳಿಕೆಯ ಹೊತ್ತು ಕಳೆದು, ಹೆಚ್ಚೆಂದರೆ ಪಶು–ಪಕ್ಷಿ–ಜನ ವೀಕ್ಷಣೆಯಲ್ಲಿ ತೊಡಗಿದರು. ಬೇರೆ ಏನನ್ನಾದರೂ ಮಾಡಲು ಸೂಚಿಸಿದರೆ "ಬರೆಯಬೇಕೇ ? ಊಹೂಂ ! ನಾನು ಬರೆದೂ ಬರೆದೂ ಅತ್ತಿಮಬ್ಬೆ ಪ್ರಶಸ್ತಿ ಪಡೆಯಬೇಕಾಗಿಲ್ಲ ! ಛಾಯಾಗ್ರಹಣ ಮಾಡಬೇಕೇ ? ನನಗೆ ಖ್ಯಾತಿ–ಹಣಗಳು ಬೇಕಿಲ್ಲ ! ನಾನೂ ಸೇವಾ ನಿವೃತ್ತನಾದರೆ ನೀನೇಕೆ ಆಕ್ಷೇಪಿಸಬೇಕು?" ಎನ್ನುತ್ತ ಎಂದಿನಂತೆ ಅಚ್ಚುಕಟ್ಟಾಗಿ ನಿಗದಿತ ಚಿಕ್ಕಪುಟ್ಟ ಚಟುವಟಿಕೆಗಳನ್ನು ಮುಗಿಸಿ, ಊಟ ಮಾಡಿ, ಸುಖನಿದ್ರೆಯ ಪ್ರಪಂಚವನ್ನು ಪ್ರವೇಶಿಸಿಬಿಡುವರು. ನಡುರಾತ್ರಿಯ ವರೆಗೆ ನಿದ್ರೆ ಬಾರದೇ ಹೊರಳಾಡುವ ನಾನು, ರಾಯರ ಜೀವನದಲ್ಲಿ ಮೊದಲಿನ ಲವಲವಿಕೆ ತುಂಬುವುದು ಹೇಗೆ ? ಎಂದು ಯೋಚಿಸಿಯೇ ಹಣ್ಣಾದೆ. ಅವರಿಗೆ ಕೈಯಲ್ಲಿ ಕ್ಯಾಮರಾ ಇದ್ದರೆ ಮಾತ್ರ ಎಲ್ಲಿಲ್ಲದ ಹುಮ್ಮಸ್ಸು ! ಊಟ–ಉಪಚಾರ ಮರೆಯುತ್ತಾರೆ. ಊರೂರು ಅಲೆದು ಇನ್ನಾವುದರ ಪರಿವೆ ಮಾಡುವುದಿಲ್ಲ ಎಂಬ ಸತ್ಯವನ್ನು ಕಳೆದ ಮೂರು ದಶಕಗಳ ದಾಂಪತ್ಯದಲ್ಲಿ ಸರಿಯಾಗಿ ಕಂಡುಕೊಂಡಿದ್ದೆ. ಒಂದು ದಿನ ಆಕಳಿಸುತ್ತ ತಮ್ಮ ಎಂದಿನ ಬಾಲ್ಕನಿ ಪೀಠದಲ್ಲಿ ವಿರಾಜಮಾನರಾಗಿದ್ದಾಗ "ಕೆಲ ದಿನ ಕ್ಯಾಮರಾ ಜೊತೆ ತಿರುಗಾಡಿ ಬರಬಾರದೇ ?" ಎಂದು–ಕೊಂಚ ಖಾರವಾಗಿಯೇ ಹೇಳಿದೆ ಎಂದು ಕಾಣುತ್ತೆ – ಹೇಳಿಬಿಟ್ಟೆ. ತಕ್ಷಣ ಒಪ್ಪಿಕೊಂಡು ಹೊರಡುವ ತಯಾರಿ ನಡೆಸಿಯೇ ಬಿಟ್ಟರು.

ಕ್ಯಾಮರಾ ಕೊರಳನ್ನಲಂಕರಿಸಿತು. ಫಿಲ್ಮ್‌ರೋಲ್, ಫ್ಲ್ಯಾಶ್ ಆದಿ ಪರಿಕರಗಳು ಕಿಟ್‌ಬ್ಯಾಗ್ ಸೇರಿದವು. ತಾನಿಲ್ಲದಾಗ ಮನೆಯ ಏರ್ಪಾಡು, ಹಣಕಾಸಿನ ವ್ಯವಹಾರ ಗಳನ್ನು ತಿಳಿಸಿ ಹೇಳಲು ಪ್ರಾರಂಭಿಸಿದಾಗ ಅಸಹನೆಯಿಂದ "ಅಲ್ರೀ ? ಅದೆಷ್ಟೋ ಕಾಲ, ನೂರಿನ್ನೂರು ಸಿಬ್ಬಂದಿಯ ಸಂಸ್ಥೆ ನಡೆಸಿದಾಕೆಗೆ ಕೆಲ ದಿನ ತನ್ನನ್ನು ಸಂಭಾಳಿಸಿ ಕೊಳ್ಳಲು ಆಗದೇ ? ಒಬ್ಬಳ ಸಂಸಾರಕ್ಕೆ ತಾನೇ ಎಷ್ಟು ಸಾಮಾನು ಬೇಕು ? ಅದೂ

ಕೆಲವೇ ದಿನ ?'' ಎಂದು ಕೊಂಕುನುಡಿ ತಂತಾನೆ ಉದ್ದೇಶವಿಲ್ಲದೇ ಹೊರಬಿತ್ತು ! ರಾಯರು ಒಂದು ಕ್ಷಣ ಬೆಪ್ಪಾಗಿ ನೋಡಿ ತೆರೆದ ಬಾಯಿ ಮುಚ್ಚಿ ಹೊರಟೇಬಿಟ್ಟರು. ''ಅರೇ, ಇನ್ನೆರಡು ಜೋಡಿ ಬಟ್ಟೆ ಒಯ್ಯಲಿಲ್ಲ, ಟಾವೆಲ್, ಟೂತ್‌ಪೇಸ್ಟ್, ಸೋಪ್, ಶೇವಿಂಗ್ ಸೆಟ್ ತೆಗೆದುಕೊಂಡಿದ್ದಾರೋ ನೋಡಲಿಲ್ಲ! ಎಷ್ಟು ದಿನ ದೂರ ಇರುತ್ತೀರಿ, ಯಾವಾಗ ವಾಪಸ್ ಬರುತ್ತೀರಿ ? ಎಂದು ಕೂಡ ಕೇಳಲಿಲ್ಲವಲ್ಲ ?'' ಎಂದು ಅವರು ಎಂದಿನಂತೆ ಕೈಎತ್ತಿ ಟಾಟಾ ಹೇಳಿ ದೂರ ಹೊರಟುಹೋದ ಬಳಿಕ ಹೊಳೆದು, ಪರಿತಪಿಸುವಂತೆ ಆಯಿತು. ಛೇ ! ಯಾರಾದರೂ ಈ ರೀತಿ ಬೀಳ್ಕೊಡುವುದುಂಟೆ ! ಎಂದು ಪಶ್ಚಾತ್ತಾಪವಾಯಿತು. ಎಲ್ಲಿಗೆ ಹೋಗುತ್ತೀರಿ ? ಎಂದು ಕೂಡ ಕೇಳಲು ಮರೆತಿದ್ದೆ!

'ಎಲ್ಲಿಗೆ ತಾನೆ ಹೋದಾರು ? ಹುಟ್ಟೂರಾದ ಹೊನ್ನಾವರಕ್ಕೆ ಹೋಗಿರುತ್ತಾರೆ ! ಹೆಚ್ಚೆಂದರೆ ಕೆಲದಿನ ಸೋದರ–ಸೋದರಿಯರೊಂದಿಗಿದ್ದು ಮನಸ್ವೀ ಛಾಯಾಗ್ರಹಣ ಮಾಡಿ ಹಿಂದಿರುಗುತ್ತಾರೆ ?' ಎಂದು ನನಗೆ ನಾನೇ ಸಮಾಧಾನ ಮಾಡಿಕೊಂಡೆ. ಆದರೆ ನಿದ್ರೆ ಬರದಾಕೆಗೆ, ಅಜ್ಞಾತಭಯ–ತಳಮಳಗಳು ಕಾಣಿಸಿಕೊಂಡು ಇದ್ದಬಿದ್ದ ನಿದ್ರೆಯೂ ಹಾರಿಹೋಗಬೇಕೇ ? ಊರನ್ನು ಸುರಕ್ಷಿತವಾಗಿ ತಲುಪಿದ ಬಗ್ಗೆ ನಸುಕಿನಲ್ಲಿ ದೂರವಾಣಿಯಿಂದ ತಿಳಿಸಬಹುದೆಂಬ ಖಾತ್ರಿ ನಂಬಿಗೆಯೂ ಸುಳ್ಳಾಯಿತು. ಫೋನ್ ಟ್ರಿನ್‌ಗುಡಲೇ ಇಲ್ಲ, ದಿನವೂ ಬರುತ್ತಿದ್ದ ಹತ್ತಾರು ತಪ್ಪು ಫೋನ್‌ಕಾಲ್‌ಗಳೂ ಅಡಗಿಬಿಟ್ಟಿದ್ದವು ! ಕಡೆಗೆ ನಾನೇ ಜಂಬವನ್ನು ಬದಿಗಿಟ್ಟು ನಡುಮೈದುನನಿಗೆ ಫೋನಿಸಿ ವಿಚಾರಿಸಿದಾಗ ಅವನಿಗಾದ ಅಚ್ಚರಿ ಅಷ್ಟಿಷ್ಟಲ್ಲ! 'ಅಣ್ಣ ಹಾಗೆಲ್ಲ ತಿಳಿಸದೇ ಬರುವವರು ಅಲ್ಲವೇ ಅಲ್ಲ... ಹೋಗಲಿ ಉಮೇಶಣ್ಣನವರ ಮನೆಯಲ್ಲಿ ಇಳಿದುಕೊಂಡಿರ ಬಹುದು. ವಿಚಾರಿಸಿ ತಿಳಿಸುತ್ತೇನೆ' ಎಂದ. ಊರಿನಲ್ಲೇ ಮೂವರು ಸೋದರರು ಪ್ರತ್ಯೇಕ ವಾಗಿ ಮನೆಗಳನ್ನು ಹೊಂದಿದ್ದರಿಂದ ಆ ಸಾಧ್ಯತೆ ಇದ್ದೇ ಇತ್ತು.

ಆದರೆ ಆ ಇಬ್ಬರು ಸೋದರರಲ್ಲೂ ಅವರು ಬಂದಿರಲಿಲ್ಲ. ಕುಮಟಾದಲ್ಲಿರುವ ಸೋದರಿಯರಲ್ಲಿ ಹೋಗಿರಬಹುದೇ ? ಎಂದು ವಿಚಾರಿಸಿ ತಿಳಿಸಲು ಪುನಃ ನಡುಮೈದುನ ತುಳಸೀದಾಸನಿಗೆ ಫೋನಿಸಿದೆ. ಅಲ್ಲಿಯ ಎರಡೂ ಮನೆಗಳಲ್ಲಿ ಅವರು ಇಲ್ಲವೆಂದು ತಿಳಿದಾಗ ಮಾತ್ರ ಎದೆ ಜೋರಾಗಿ ಬಡಿದುಕೊಳ್ಳಲಾರಂಭಿಸಿತು. ಕಾಫಿ, ಸ್ನಾನ, ಊಟ ಏನೂ ಬೇಡವಾಯಿತು. ಕೊನೆಗೆ ಮಧ್ಯಾಹ್ನದಲ್ಲಿ ''ಅಣ್ಣನವರು ಸುರಕ್ಷಿತ ವಾಗಿದ್ದಾರೆ ! ಅಜ್ಞಾತವಾಸದಲ್ಲಿದ್ದಾರೆ. ಕಾಳಜಿ ಕೂಡದು ! ಅಷ್ಟೇ ಅಲ್ಲ, ತನ್ನನ್ನು ಹುಡುಕಿಸುವುದಾಗಲಿ, ಸಂಪರ್ಕಿಸುವುದಾಗಲಿ, ಮಾಡಲೇಕೂಡದು ! ಎಂದು ಕಟ್ಟಪ್ಪಣೆ ಮಾಡಿದ್ದಾರೆ !'' ಎಂದು ಕಾಮತ್ ಕುಲದ ಭರತ–ಹಿರೇಸೋದರನ ಸಂದೇಶವನ್ನು ಸಾರಿ, ತನ್ನ ಹೊಣೆ ಕಳೆದುಕೊಂಡ ಸದ್ಯ. ಸುರಕ್ಷಿತವಾಗಿದ್ದಾರೆ. ಸುಖ ವಾಗಿ ಇರಲೂ ಸಾಕು ಎಂದು ನಿಟ್ಟುಸಿರು ಬಿಡುವಂತೆ ಆಯಿತು.

ಅವಿವಾಹಿತ ಸಹೋದ್ಯೋಗಿಗಳು, ಸ್ನೇಹಿತೆಯರಂತೆ ನಾನೂ ಕೆಲಕಾಲ ಮನಸ್ವೀ

ಸ್ವಾತಂತ್ರ್ಯದಿಂದ, ಸಂಸಾರದ ಜಂಜಾಟದಿಂದ ದೂರ ಇರಲು ಸಾಧ್ಯ ಎಂಬ ವಿಚಾರದಿಂದ ಸಾಕಷ್ಟು ಪುಳಕಿತಳಾದೆ. ರಾಯರು ಈಗ ಸದಾಕಾಲ ಮನೆಯಲ್ಲಿಯೇ ಇರುತ್ತಿದ್ದರಿಂದ ಸಮಾನತಾವಾದಿ ಸ್ನೇಹಿತೆಯರನ್ನು ಮನೆಗೆ ಆಮಂತ್ರಿಸಿ ಮುಕ್ತ ಚರ್ಚೆಯನ್ನು ಏರ್ಪಡಿಸಲು ಆಗುತ್ತಿರಲಿಲ್ಲ. ಅಂತೆಯೇ ಅವರೆಲ್ಲರ ಗೌರವಾರ್ಥ ಭೋಜನ ಕೂಟವನ್ನು ಏರ್ಪಡಿಸುವುದೆಂದು ನಿರ್ಧರಿಸಿದೆ. ರಾಯರಿಗೆ ಎಳ್ಳಷ್ಟೂ ಇಷ್ಟವಾಗದ ಮದುವೆ–ಮುಂಜಿ ಸಮಾರಂಭಗಳಲ್ಲಿ ಪಾಲುಗೊಳ್ಳಬಹುದು. ನಗರದ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಮನಸ್ಸು ಹಾಕಬಹುದು. ಫೋನಿನಲ್ಲಿ ಯಾರ ಹತ್ತಿರ ಹೆಚ್ಚು ಮಾತನಾಡಿದರೂ ಇಷ್ಟಪಡದ, ಅತಿಥಿಗಳಿಗೆ ಸತ್ಕಾರ ಮಾಡಿದರೆ ಸಂತೋಷಪಡದ, ಸಿಕ್ಕ ವಿರಾಮ ವೇಳೆಗಳನ್ನು ಸೃಜನಾತ್ಮಕ ಚಟುವಟಿಕೆಗಳಿಗೆ ಮೀಸಲಿಡು ! ಎಂದು ಮೂರೂ ಹೊತ್ತು ಬೋಧನೆ ಮಾಡುವ ರಾಯರ ಕುರಿತು ದೂರನ್ನು ಅಮೇರಿಕದಲ್ಲಿರುವ ಮಗನಿಗೆ ತಲುಪಿಸಬಹುದು ! ರಾಯರು ಮನೆಯಲ್ಲೇ ಇದ್ದಾಗ ಇವೆಲ್ಲ ಸಾಧ್ಯವಿಲ್ಲ ಎಂದು ನನ್ನ ತಾತ್ಪೂರ್ತಿಕ ಸ್ವಾತಂತ್ರ್ಯದ ಸದುಪಯೋಗ ಮಾಡಿಕೊಳ್ಳುವ ಯೋಜನೆಗಳನ್ನು ಹಾಕಿದೆ..... ಆದರೆ ಗವ್ ! ಎಂದು ಇಡೀ ಮನೆಯೇ ನುಂಗಲು ಬಂದಾಗ, ಕೆಲದಿನ ಅಥವಾ ರಾತ್ರಿಗಳನ್ನು ಒಬ್ಬಳೇ ಕಳೆಯಬೇಕಲ್ಲ ! ಎಂದು ನಿಶ್ಯಬ್ದವಾದ ಮನೆಯಲ್ಲಿ ದಿಂಬಿಗೆ ಮುಖ ಒತ್ತಿ ಅತ್ತೂಬಿಟ್ಟೆ – ಏನೂ ತೋಚದೇ. ಪತಿ ಎಂಬ ಪ್ರಾಣಿ – ಎಂಥವನಿದ್ದರೂ ಮನೆಯಲ್ಲಿ ಬೇಕು ಎಂದು ಸಹೋದ್ಯೋಗಿಯೋರ್ವಳು ಅಳುತ್ತ ಹೇಳಿದ್ದು ನೆನಪಾಯ್ತು!

ರಾತ್ರಿ ನಿದ್ರೆ ಸರಿಯಾಗಲಿಲ್ಲ. ನಸುಬೆಳಗಾಯಿತು. ಪ್ರತಿದಿನ ಕಗ್ಗತ್ತಲಿನ ತಿರುಗಾಟ ಮುಗಿಸಿ ಬರುತ್ತಿದ್ದಂತೆ, ರಾಯರು ಕಾಯುತ್ತ ಬಾಗಿಲು ತೆಗೆದು ಬರ ಮಾಡಿಕೊಳ್ಳುವುದು ರೂಢಿಯಾಗಿತ್ತು. ಇಂದು ಹಿಂದಿರುಗಿ ಬರುವಾಗ ವಿದ್ಯುತ್ ಪೂರೈಕೆ ಇಲ್ಲದ್ದರಿಂದ ಬಳಚಿ ಬಳಚಿ ಬೀಗ ತೆಗೆದು ಒಳಸೇರುವುದೇ ಕಷ್ಟಕ್ಕಿಟ್ಟುಕೊಂಡಿತು. ಬೆಂಕಿ–ಪೊಟ್ಟಣ–ಮೋಂಬತ್ತಿಗಳ ಖಾತೆ ರಾಯರದ್ದಾಗಿದ್ದರಿಂದ ನಾನು ಅದರ ಜಾಗ, ನೋಡಿಕೊಳ್ಳದ್ದರಿಂದ ಬಳಚುತ್ತ ರ್‍ಯಾಕ್ ಮೇಲಿನ ಎಣ್ಣೆ ಬಾಟ್ಲಿ–ಗಾಜಿನ ಭರಣಿ ನೆಲಕ್ಕುರುಳಿ ಬಿದ್ದವು. ಅದರ ಸ್ವಚ್ಛತೆಗೆ ಅರ್ಧ ಗಂಟೆ ಮೀಸಲಾಯಿತು. ನಿಮಗೆ ಖರೇ ಮಾತು ಹೇಳಬೇಕೆಂದರೆ ಬೆಳಗಿನ ನಾಶ್ತಾಕ್ಕೆ ಉಪ್ಪಿಟ್ಟಿಗೆ, ಅವಲಕ್ಕಿಗೆ ಹಸಿಮೆಣಸು, ಈರುಳ್ಳಿ, ಟೊಮ್ಯಾಟೊ ಹೆಚ್ಚಿಕೊಡಲು, ರುಬ್ಬಿ ಇಟ್ಟ ಹಿಟ್ಟಿನ ಗರಿಗರಿ ದೋಸೆ ಹುಯ್ದುಕೊಡಲು ರಾಯರು ಸದಾ ಸಿದ್ಧರಿರುತ್ತಾರೆ. ನಾನು ಐದೇ ನಿಮಿಷದಲ್ಲಿ ಚಹಾ ಮಾಡಿ ಬ್ರೇಕ್‌ಫಾಸ್ಟ್ ತಯಾರಿ ಮಾಡುವುದನ್ನು ರೂಢಿಸಿಕೊಂಡಿದ್ದೇನೆ. ಈಗ ಎಲ್ಲ ಕೆಲಸಗಳನ್ನು ಶ್ರೀಗಣದಿಂದ ಪ್ರಾರಂಭಿಸಬೇಕಾಯಿತಲ್ಲ! ಎಂದು ಉಸಿರ್ಗರೆದೆ.

ರಾಯರೇನೊ ಸಾಕಷ್ಟು ನಗದು ಕ್ಯಾಷ್ ಮನೆಯಲ್ಲಿ ತಂದಿಡುತ್ತಾರೆ. ಆದರೆ ಅದನ್ನು ಬಚ್ಚಿಡುವ ಸ್ಥಳ ಎಂಥ ಖದೀಮ ಕಳ್ಳನಿಗೂ ಪತ್ತೆ ಹಚ್ಚಲು ಸಾಧ್ಯವಿಲ್ಲ! ಇನ್ನು ನನಗದು ದುಸ್ಸಾಧ್ಯವೇ ! ಎಂದು ಅತ್ಯವಶ್ಯಕವಾಗಿದ್ದ ದುಡ್ಡು ತರಲು ಬ್ಯಾಂಕಿಗೆ

ಸರದಿಯಲ್ಲಿ ನಿಂತು ಕಾದೆ. ಚೆಕ್ ನೋಡಿದ ಕೌಂಟರ್ ವ್ಯಕ್ತಿ 'ಇದು ನಮ್ಮ ಬ್ಯಾಂಕಿನದಲ್ಲ! ಎಂದು ಹೇಳಿದಾಗ ಕಣ್ಣುಬಿಟ್ಟು ನೋಡಿ, ಆಟೋ ಹಿಡಿದು ವೈಯಾಲಿ ಕಾವಲ್ ಬ್ಯಾಂಕಿಗೆ ಧಾವಿಸಿದೆ. ಅಲ್ಲಿ 'ಬ್ಯಾಂಕೇನೋ ನಮ್ಮದೇ ! ಆದರೆ ನಿಮ್ಮ ಖಾತೆ ಧಾರವಾಡ ಶಾಖೆಯದು !' ಎಂದು ಅರ್ಧ ಗಂಟೆ ಕಾದ ಬಳಿಕ ಕೇಳಬೇಕಾಗಿ ಬಂದಿತು. ದುಡ್ಡು ಬೇಕಿದ್ದರೆ ಚಲನ್ ತುಂಬಿ ಪಡೆಯಬಹುದು ಎಂದು ಥಟ್ಟನೆ ಅರಿವಿಗೆ ಬಂದು, ಪುನಃ ಮೊದಲಿನ ಬ್ಯಾಂಕಿಗೆ ಬಂದೆ. ಅಲ್ಲೇ ರಾಶಿ ಒಟ್ಟಿದ ಚಲನ್ ಫಾರ್ಮು ಎತ್ತಿ ತುಂಬಿ ಒಂದು ಸಹಸ್ರ ರೂಪಾಯಿಗೆ ಬೇಡಿಕೆ ಬರೆದೆ. ''ಅಮ್ಮಾವ್ರೆ ! ಹೊರಗೆ ಇಟ್ಟ ಚಲನ್‌ಗಳೆಲ್ಲ ಹಣ ಕಟ್ಟುವುದಕ್ಕೆ, ಸಾಲ ತುಂಬುವುದಕ್ಕೆ, ಡಿ. ಡಿ. ಪಡೆಯುವುದಕ್ಕೆ ಬಳಸುವಂಥವು ! ಹಣ ಪಡೆಯಲು ನಿಮ್ಮ ಪಾಸ್ ಬುಕ್ ತೋರಿಸಿ ಸಹಿ ಹಾಕಿ. ಆಗ ಮಾತ್ರ ಅಕೌಂಟೆಂಟ್ ಸಾಹೇಬರೇ ಹಣ ಪಡೆಯುವ ಚಲನ್ ಕೊಡುತ್ತಾರೆ'' ಅಲ್ಲಿದ್ದೊಬ್ಬ, ನನ್ನ ಮೇಲೆ ಕರುಣೆ ತೋರಿ, ಬ್ಯಾಂಕ್ ವ್ಯವಹಾರವನ್ನು ಪರಿಚಯಿಸಲು ಯತ್ನಿಸಿದ. ಅಕೌಂಟೆಂಟ್ ಹತ್ತಿರ ಹೋಗಿ, 'ಪಾಸ್ ಬುಕ್ ತಂದಿಲ್ಲ! ಖಾತೆ ನಂಬರ್ ನೆನಪಿಲ್ಲ!' ಎಂದು ನಿಜವಾದದ್ದನ್ನೇ ಉಸುರಿದೆ. 'ಮ್ಯಾನೇಜರನನ್ನು ಕಾಣ್ರಿ !' ಎಂದು ಆಜ್ಞಾಪಿಸಿದ. ಪಾಪ ! ಬ್ಯಾಂಕಿನ ಬಡಪಾಯಿ, ಈ ಮ್ಯಾನೇಜರನೇ ಅನ್ನಬೇಕು ! ಒಂದಿಷ್ಟೂ ಅಸಹನೆ ತೋರದೆ, ರಾಯರ ಹೆಸರು ವಿಚಾರಿಸಿ, ಜೋಡಿ ಹೆಸರಿನಲ್ಲಿದ್ದ ನಂಬರ್ ಹುಡುಕಿಸಿ ಸರಿಯಾದ ಚಲನ್ ಫಾರ್ಮ್‌ನ್ನು ಕೊಡಿಸಿದ. ಪುನಃ ಅರ್ಧಗಂಟೆ ಕ್ಯೂನಲ್ಲಿ ನಿಂತು ಹಣ ಪಡೆದಾಗ, ಬಾದರಾಯಣ ಕಾಲದ ಹರಿದ ಹಳತಾದ ನೋಟಿನ ಕಂತೆಗಳನ್ನು ನೋಡಿ ಸಿಟ್ಟು ನೆತ್ತಿಗೇರಿತು. ಹಿಂದೊಮ್ಮೆ ಅಧಿಕಾರ ಇದ್ದಾಗ ನೆಟ್ಟಗೆ ಮ್ಯಾನೇಜರ್ ಕ್ಯಾಬಿನ್ ಅಧಿಕೃತವಾಗಿ ಪ್ರವೇಶಿಸುತ್ತಿದ್ದೆ. ಅವರು ಸಂಭ್ರಮದಿಂದ ಕಾಫಿ ತರಿಸುತ್ತಿದ್ದರು. ಲೋಕಾಭಿರಾಮವಾಗಿ ಮಾತನಾಡುವುದರೊಳಗೆ ಏನೇನೆಲ್ಲ ಎಂಟ್ರಿ ಮುಗಿದು ಗರಿಗರಿಯಾದ ಹೊಸ ನೋಟುಗಳ ಕಂತೇಗಳೇ ಕೈ ಸೇರುತ್ತಿದ್ದವು. ನಿವೃತ್ತಿಯ ಬಳಿಕ ಹಣಕಾಸಿನ ವ್ಯವಹಾರಗಳನ್ನೆಲ್ಲ ರಾಯರೇ ನೋಡಿಕೊಳ್ಳುತ್ತಿದ್ದರು. ನನಗೆ ಇವಾವುಗಳ ಜಂಜಾಟವೇ ಇರಲಿಲ್ಲ.

ಮನೆಯಲ್ಲಿ ಹಣ್ಣು–ಹಂಪಲು, ತರಕಾರಿಗಳೆಲ್ಲ ಮುಗಿದು ಹೋಗಿದ್ದವು. ರಸ್ತೆಯಲ್ಲಿ ಹೊರಟ ಕೈಗಾಡಿಯವನು 'ಎಪ್ಪಲ್, ಟೊಮ್ಯಾಟೊ ಆರು, ಎಳೆ ಬೀನ್ಸು ಐದು ರೂಪಾಯಿ' ಎಂದು ಕೂಗುತ್ತ ಹೋಗುತ್ತಿದ್ದ. ಹೊಸ ಅರ್ಥ ಮಂತ್ರಿಗಳ ಸುವ್ಯವಸ್ಥೆಯಲ್ಲಿ ಹಣ್ಣು–ಕಾಯಿ ಬೆಲೆಗಳೆಲ್ಲ ಕುಸಿಯ ಹತ್ತಿವೆ ಎಂದು ಅರ್ಥೈಸಿಕೊಂಡೆ. ಬಲು ಹಿಗ್ಗಿನಿಂದ ಕೈಚೀಲದೊಂದಿಗೆ ಧಾವಿಸಿದೆ. ಆತನೋ! ತಾನು ಕೂಗಿದ ಬೆಲೆಗಳೆಲ್ಲ ಕಾಲು ಕೆಜಿಯವು ! ಎಂದು ತನ್ನ ಯಥಾರ್ಥವಾದ ಸಾಧಿಸಬೇಕೇ ? ಸಾಯಂಕಾಲ, ರಾಯರು ಸಸ್ತಾ ಬೆಲೆಗೆ ತರುತ್ತಿದ್ದ ಗಣೇಶಗುಡಿ ಪೇಟೆಗೆ ಧಾವಿಸಿದೆ. 'ಇಲ್ಲಿ ರೂಪಾಯಿಗೆ ಒಂದು ಗುಡ್ಡೆ ತರಕಾರಿ ಎಲ್ಲಿ ಸಿಗತ್ತೆ?' ಎಂದು ವಿಚಾರಿಸಿದೆ. 'ಎಲ್ಲಿದ್ದೀರಮ್ಮ? ಕಾಸು ಕೊಟ್ರೆ ತರಕಾರಿ ಸಿಗ್ತಾ ಇಲ್ಲ! ರೂಪಾಯಿಗೆ ಏನ್ ಬೆಲೆ ಇವಾಗ ?' ಎಂದು ನನಗೇ

ಪ್ರಶ್ನಿಸಿದ. ರಾಯರು ತರುತ್ತಿದ್ದ ತರಾಕಾರಿಯಾಗಲಿ, ಅಗ್ಗದ ಬೆಲೆಯಾಗಲಿ ಗೋಚರಿಸಲಿಲ್ಲ, ಅಷ್ಟುದೂರ ಹೋದ ತಪ್ಪಿಗೆ ಕಾಲು ಕೆ.ಜಿ. ಈರುಳ್ಳಿ, ಅರ್ಧ ಕೆ.ಜಿ. ಆಲೂಗಡ್ಡೆ, ಅರ್ಧ ಡಜನ್ ಮುದುಕಾಗುವ ಹಂತದಲ್ಲಿದ್ದ ಬಾಳೆಹಣ್ಣು ಖರೀದಿಸಿ ಹಿಂದಿರುಗುವುದರಲ್ಲಿ ಸಾಕಾಗಿ ಬಿಟ್ಟಿತ್ತು.

'ಸಮಪಾಲು ಸಂಘ', 'ಹೋರಾಟದ ಹೆಂಗಳೆ', 'ಬೇಡಿಯಾಚೆಯ ಬಿಡುಗಡೆ', 'ಪ್ರಗತಿ ಪಥದಲ್ಲಿ ಸ್ತ್ರೀ' ಮುಂತಾದ ಒಕ್ಕೂಟಗಳ ಸದಸ್ಯೆಯರಿಗೆ ಫೋನಿಸಿ, ಭೋಜನ ಕೂಟಕ್ಕೆ ಆಮಂತ್ರಿಸಿದೆ. ಸಂದರ್ಭ, ಉಡುಗೂರೆ, ಮೆಮೆಂಟೊಗಳ ಅಭಾವ, ದೂರದರ್ಶನ, ಪ್ರೆಸ್‌ಗಳು ಬರೆದಿರುವುದು ಮುಂತಾದವನ್ನೆಲ್ಲ ವಿಚಾರಿಸಿ ತಿಳಿದು ಕೊಂಡು, ಬರಲಾಗುವುದಿಲ್ಲವೆಂದು ಏನೇನೋ ಕುಂಟು ನೆಪಹೇಳಿ ತಪ್ಪಿಸಿಕೊಂಡರು. ಒಬ್ಬಳು ಕಾಶ್ಮೀರಕ್ಕೆ ಸಂಸಾರ ಸಮೇತ ಹೊರಟಿದ್ದರೆ ಇನ್ನೊಬ್ಬಳು ಪತಿ ಸಮೇತ ಅಂಡಮಾನ್, ನಿಕೋಬಾರ್ ದ್ವೀಪಕ್ಕೆ ಉಡ್ಡಾಣ ಕೈಗೊಂಡಿದ್ದಳು. ಮತ್ತೊಬ್ಬಳು ಮಗಳಿದ್ದ ಸಿಂಗಪುರಕ್ಕೆ ಮಗದೊಬ್ಬಳು ಅಸ್ಸಾಮ್‌ಗೆ ಪತಿಯ ಸಂಶೋಧನೆಗೆ ಜೊತೆ ಕೊಡಲು ಹೊರಟಿದ್ದರು. ವಿವಾಹಿತರ ಹಣೇಬರಹವೇ ಇಷ್ಟು! ಎಂದು ಬೈದುಕೊಂಡು, ಅವಿವಾಹಿತ ಮತ್ತು ತನ್ನಿಮಿತ್ತ ಬಿಡುಗಡೆಯ ಬಿಡುವಿದ್ದ ಗೆಳತಿಯರಿಗೆ, ರವಿವಾರದ ಮಧ್ಯಾಹ್ನದ ಚಹಕ್ಕೆ ಬರಲೇಬೇಕೆಂದೂ, ಇತ್ತೀಚಿನ ಸ್ತ್ರೀಯರ ಸಮಸ್ಯೆಗಳು ಹಾಗೂ ಪರಿಹಾರಗಳನ್ನು ಮುಕ್ತ ಮನಸ್ಸಿನಿಂದ ಚರ್ಚಿಸಬಹುದೆಂದೂ ಫೋನಿಸಿ ಕೇಳಿಕೊಂಡೆ, ಅವರಾರೂ ರವಿವಾರ ಬಿಡುವಾಗಿಲ್ಲವೆಂದೂ, ಇತರೇ ಕಾರ್ಯಕ್ರಮಗಳನ್ನು ಹಮ್ಮಿ ಕೊಂಡಿರುವುದಾಗಿಯೂ ಹೇಳಿದರು. ಉಸಿರ್ಗರೆದು ಸೋಫಾದಲ್ಲಿ ಕುಕ್ಕರಿಸಿದೆ.

ಪ್ರತಿದಿನದ ಅಂಚೆಯಲ್ಲಿ ನನಗೆ, ರಾಯರಿಗೆ, ಕೆಲಬಾರಿಗೆ ನಮ್ಮಿಬ್ಬರಿಗೂ ಅನೇಕ ಆಮಂತ್ರಣಗಳು ಬರುತ್ತಿದ್ದವು. ಒಂದನ್ನಾದರೂ ನಾನು ಕಣ್ತೆರೆದು ನೋಡುತ್ತಿರಲಿಲ್ಲ, ರಾಯರು ಎಲ್ಲಿಯೂ ಕರೆದುಕೊಂಡು ಹೋಗುವುದಿಲ್ಲ ಎಂಬ ನೆವವೇ ಪ್ರಬಲ ಕಾರಣ ವಾಗಿತ್ತು. ಆದರೆ ರಾಯರು ಪ್ರತಿಯೊಂದನ್ನು ಓದಿ ಹೇಳಿ, ಮಹತ್ವದಿದ್ದರೆ, ಹಿನ್ನೆಲೆ ಯನ್ನು ವಿವರಿಸಿ, ಪ್ರತಿಷ್ಠೆಗೆ ಏರ್ಪಟ್ಟ ಕಾರ್ಯಕ್ರಮಗಳ ಗೇಲಿ ಮಾಡಿ, ಪರಿಚಿತರ, ಆಪ್ತರ ಮದುವೆ–ಮುಂಜಿಗಳ ಆಮಂತ್ರಣವಿದ್ದರೆ, ಅಭಿನಂದನೆ, ಶುಭ ಹಾರೈಕೆಗಳ ಪತ್ರಗಳನ್ನು ಟೈಪ್ ಮಾಡಿ, ನಮ್ಮ ಹಸ್ತಾಕ್ಷರಗಳೊಂದಿಗೆ ಕಳಿಸದೇ ಇರುತ್ತಿರಲಿಲ್ಲ. ಅಭ್ಯಾಸ ಬಲದಿಂದ ಇಂದೂ ಹೋಗಿ ಅಂಚೆ ಬಂದಿದೆಯೇ ? ಎಂದು ನುಡಿದಾಗ, ಧಾರವಾಡದ ಸಹಪಾಠಿಯೊಬ್ಬಳ ಮಗನ ಮದುವೆ, ಮಲ್ಲೇಶ್ವರಂನಲ್ಲೇ ನೆರವೇರಲಿದೆ ಎಂದು ಮುದ್ರಿತ ಆಮಂತ್ರಣ ಪತ್ರಿಕೆ ಸಾರುತ್ತಿತ್ತು! ಈ ಶುಭ ಕಾರ್ಯಕ್ಕೆ ಪರಿಚಯದ ಹತ್ತಾರು ಜನರಾದರೂ ಬಂದೇ ಬರುತ್ತಾರೆ. ಅವರನ್ನೆಲ್ಲ ಮಾತನಾಡಿಸಬಹುದು ಎಂದು ಸಂಭ್ರಮದಿಂದ ಸಿದ್ಧಳಾಗತೊಡಗಿದೆ. ಮಗ ಕಳಿಸಿದ ವಿದೇಶಿ ಲಿಪ್‌ಸ್ಟಿಕ್, ಸೆಂಟ್‌ಗಳು ಹೊರಬಂದವು. ಯಾವ ಸೀರೆ ಉಡುವದೆಂಬ ನಿರ್ಧಾರಕ್ಕೆ ಬರಲಾಗದೇ ಹತ್ತಾರು ಸೀರೆಗಳನ್ನು ಗೂರಾಡಿ ಒಂದಕ್ಕೂ ಸರಿಯಾದ ರವಿಕೆ ಇಲ್ಲದಿರುವುದು, ಸರಿಯಾಗಿ ಮ್ಯಾಚ್ ಆಗುತ್ತಿದ್ದವುಗಳು, ಮೈಗೇರಲು ನಿರಾಕರಿಸುತ್ತಿದ್ದವು ಎಂದೆಲ್ಲ ಗಮನಿಸಿ ಗಾಬರಿ

ಯಾದೆ. ವರ್ಷಾನುಗಟ್ಟಲೆ ಬೀಡು ಬಿಟ್ಟು ಹೊರಬರುವ ಅವಕಾಶ ಈಗ ಅವಕ್ಕಿಲ್ಲ ವೆಂದು ನೆನಪಿಸಿಕೊಂಡು ಉಸಿರ್ಗರೆದೆ. ಕೊನೆಗೂ ರಾಯರೇ ಹೂಬಳ್ಳಿಗಳನ್ನು ಚಿತ್ರಿಸಿ ಕೊಟ್ಟ ಗುಲಾಬಿ ಬಣ್ಣದ ಸೀರೆಯುಟ್ಟು ರಿಕ್ಷಾದಲ್ಲಿ ಹೊರಟಾಗ, ರಾಯರಿದ್ದರೆ, ಬೀಗುತ್ತಲೇ ಟಾಟಾ ಹೇಳುವ ಸುಸಂಧಿ ಇರುತ್ತಿತ್ತಲ್ಲ! ಎಂದೆನಿಸದೇ ಇರಲಿಲ್ಲ.

ತ್ರಿಪುರಾಂತಕೇಶ್ವರಿ ಕಲ್ಯಾಣ ಮಂಟಪದ ಬಳಿ ಇಳಿದೆ. ಸ್ವಾಗತ ಮಾಡುವವರು ನಮ್ಮವರು ಅನಿಸಲೇ ಇಲ್ಲ! ಓಹೋ! ಉಭಯ ಪಾರ್ಟಿಗೆ ಇಷ್ಟವಿಲ್ಲದ ಮದುವೆಯಿರ ಬೇಕು ! ಅಂದುಕೊಂಡೆ. ಅಲ್ಲಿ ಸೇರಿದವರೆಲ್ಲ ಭಾರೀ ಭಾರೀ ಬೆಲೆಯ ಕಾಂಜೀವರಂ ಸೀರೆಯುಟ್ಟು ಹೊರೆ ಹೊರೆ ಆಭರಣಗಳನ್ನು ತೊಟ್ಟ ಕೃಷ್ಣವರ್ಣೆಯರು ! ಆಟೋದವನು ತಪ್ಪು ಸ್ಥಳಕ್ಕೆ ಕರೆತಂದನೇ ? ಕಲ್ಯಾಣ ಮಂಟಪಗಳಿಂದ ಬಿರಿಯುತ್ತಿರುವ ಈ ಕಲ್ಯಾಣ ನಗರಿಯಲ್ಲಿ ಹೆಜ್ಜೆ ಹೆಜ್ಜೆಗೂ ಅವು ಕಂಡುಬರುತ್ತವೆ. ಅವನದು ತಪ್ಪು ಇರಲಾರದು ! ಎಂದುಕೊಂಡು ಬ್ಯಾಗಿನಲ್ಲಿಟ್ಟಿದ್ದ ಕರೆಯೋಲೆಯನ್ನು ತೆಗೆದು ಸರಿಯಾಗಿ ನೋಡಿದಾಗ ನಾನು ಬರಬೇಕಾಗಿದ್ದ ಸಮಾರಂಭ, ಮುನ್ನಾ ದಿನವೇ ಮುಗಿದು ಹೋಗಿತ್ತು! ಇನ್ನು ಮಾಡುವುದೇನು ? ಇಷ್ಟು ದೂರ ಬಂದಾಗಿದೆ. ಹತ್ತಿರವೇ ಇರುವ ಅಕ್ಕನ ಮನೆಗಾದರೂ ಹೋಗಿ ಬರೋಣವೆಂದು ಅಲ್ಲಿಗೆ ಹೋದರೆ, ಭಾವನವರಿಗೆ ರುದ್ರಾವತಾರ ಬಂದಿತ್ತು, ಪದ್ಧತಿಯಂತೆ, ಎಲ್ಲರ ಮೇಲೂ ಬೈಗಳ, ಪುಷ್ಪ-ಮಂತ್ರಾಕ್ಷತೆ, ಬೀಳುತ್ತಾ ಇದ್ದವು. ಅನಾಮಂತ್ರಿತಳಾಗಿ, ಆ ವೇಳೆಯಲ್ಲಿ ಹೋದಾಕೆಗೆ, ವಾಕ್ ಪ್ರಹಾರ ಬೇಡವೆಂದು, ಅಕ್ಕನು ಕಣ್ಸನ್ನೆಯಿಂದಲೇ ಹೊರಟು ಹೋಗಲು ಸೂಚಿಸಿದಳು. ನಿರುಪಾಯಳಾಗಿ ಮನೆಗೆ ಹಿಂದಿರುಗಿದೆ. ಹೊಟ್ಟೆ ತಾಳ ಹಾಕುತ್ತಿತ್ತು. ಅಡಿಗೆ ಏನೂ ಮಿಕ್ಕಿರಲಿಲ್ಲ. ಒಂದಿಷ್ಟು ಉಪ್ಪಿಟ್ಟು ಮಾಡಿ ತಿಂದರಾಯಿತು ಎಂದು ಈರುಳ್ಳಿ ಹೆಚ್ಚಲು ಹೋದಾಗ, ರಾಯರು ಚಾಕುಹರಿತ ಮಾಡಿಟ್ಟಿದ್ದೇನೆ ಎಂದು ಹೇಳಿದ್ದರೂ, ಮರೆತದ್ದರಿಂದ ಬೆರಳಿಗೆ ಗಾಯ ಆಗಿಯೇ ಬಿಟ್ಟಿತು. ಮನೆಯಲ್ಲಿ ಪ್ರಥಮ ಚಿಕಿತ್ಸೆಯ ಯಾವತ್ತೂ ಸಾಧನಗಳು ಇದ್ದವು. ಆದರೆ ಅವುಗಳನ್ನು ಇಡುವ ಸ್ಥಳ, ಮೇಲ್ವಿಚಾರಣೆ, ಉಪಯೋಗ, ಚಿಕಿತ್ಸಾ ವಿಧಾನಗಳೆಲ್ಲ ರಾಯರಿಗೇ ಸೇರಿದವುಗಳಾದ್ದ ರಿಂದ ಆ ಕುರಿತು ಎಳ್ಳಷ್ಟೂ ತಲೆಕೆಡಿಸಿಕೊಂಡಿರಲಿಲ್ಲ ! ಮೊದಲ ಬಾರಿಗೆ ನಾನೆಂಥ ಗೃಹಿಣಿ ! ನನ್ನ ಚಿಕ್ಕಪುಟ್ಟ ದೈನಂದಿನ ಅವಶ್ಯಕತೆಗಳತ್ತ ಕೂಡ ಲಕ್ಷ್ಯ ಹಾಕಿಲ್ಲವಲ್ಲ ! ಎಂದು ಹಳಿದುಕೊಂಡೆ.

ಅಂತೂ ಸ್ವಚಿಕಿತ್ಸೆ ಮಾಡಿಕೊಂಡು ಉಪ್ಪಿಟ್ಟು ಕೆದಕಿ, ತಿಂದೂ ಆಯಿತು. ಸಂಜೆ ಮುಗಿದು ರಾತ್ರಿಯೂ ಕಾಲಿಟ್ಟಿತು. ಪುನಃ ನಿದ್ರೆ ಕೈಕೊಟ್ಟಿತು. ಮತ್ತೆ ಊರಿಗೆ ಫೋನಿಸಿ, ಮೈದುನನ ನಿದ್ರೆ ಕೆಡಿಸಿ, ರಾಯರ ಸುಳಿವು ಸಿಕ್ಕಿದೆಯೇ ? ಎಂದು ವಿಚಾರಿಸಿದೆ. ಇಲ್ಲ! ಎಂಬ ಖಚಿತ ಉತ್ತರ. ಆತನಿಗೆ ಇನ್ನು ಈ ವಿಚಾರದಲ್ಲಿ ಆಸಕ್ತಿ ಉಳಿದಿಲ್ಲವೆಂದು ಸ್ಪಷ್ಟ ವಾಯಿತು. ನನ್ನ ಸಮಸ್ಯೆಗೆ ನಾನೇ ಪರಿಹಾರ ಹುಡುಕಿಕೊಳ್ಳಬೇಕು ಎಂದು ನಿರ್ಧರಿಸಿದೆ.

ಮರುದಿನವೇ ಇಂಗ್ಲೀಷ್, ಕನ್ನಡ ವೃತ್ತಪತ್ರಿಕೆಗಳಲ್ಲಿ ಜಾಹೀರಾತು ಕೊಡುವುದು ಎಂದು ನಿಶ್ಚಯ ಮಾಡಿದೆ. ಎದ್ದು ಕುಳಿತು ವಿನಂತಿ ಬರೆಯಲಾರಂಭಿಸಿದೆ. ''ರಾಯರೇ

ಬೇಗ ಹಿಂದಿರುಗಿ ಬನ್ನಿ ! ನೀವಿಲ್ಲದೇ ಗೃಹಕೃತ್ಯಗಳತ್ತ ಮನಸ್ಸು ಹೋಗುತ್ತಿಲ್ಲ!'' ಛೇ ! ಛೇ ! ಇದು ನಿಜಾರ್ಥದ ವಾಕ್ಯ–ಹೆಂಡತಿಗೆ ಬುದ್ಧಿ ಕಲಿಸಿದೆ, ಎಂಬ ಜಂಬ ಬಂದೀತು ಎಂದು ವಾಕ್ಯವನ್ನು ಬದಲಿಸಿ ಬರೆದೆ. 'ನೀವಿಲ್ಲದೇ ಮನೆ ಶೂನ್ಯವಾಗಿದೆ ! ಊಟ–ಉಡಿಗೆಗಳು ಬೇಡವಾಗಿವೆ !' ಅಯ್ಯೋ ! ತುಂಬಾ ನಾಟಕೀಯವಾಯಿತು. ''ನೀವಿಲ್ಲದೇ ಇರಲಾರೆ''. ಬರೆದರೆ ಹೇಗೆ ? ತೀರ ಅಧ್ವಾನ ! ಆತಂತ್ರತೆಯ ಪರಮಾವಧಿ, ಬೇಡ, ಬೇಡ ಇಂಥ ವಿನಂತಿಯ ಒಕ್ಕಣಿಕೆ ಬೇಡವೆಂದು ನಿರ್ಧರಿಸಿಬಿಟ್ಟೆ. ಬದಲಿಗೆ ರಾಯರ ಭಾವಚಿತ್ರಗಳನ್ನು ಪ್ರಕಟಿಸಿ, ಅನೌಪಚಾರಿಕವಾಗಿ ''ಈ ಛಾಯಾಚಿತ್ರದಲ್ಲಿರುವ ನನ್ನ ಪತಿಯ ಇರವನ್ನು ತಿಳಿಸಿದವರಿಗೆ ಯೋಗ್ಯ ಬಹುಮಾನ ಕೊಡಲಾಗುವುದು !'' ಎಂದಿಷ್ಟೇ ಜಾಹೀರಾತು ಕೊಡುವುದೆಂದು ಕೊನೆಗೊಮ್ಮೆ ನಿರ್ಧರಿಸಿದಾಗ ಜೊಂಪು ಹತ್ತಿತು.

ಇಷ್ಟಾದರೂ ನಾಲ್ಕು ಗಂಟೆಗೆ ಎಂದಿನಂತೆ ಎಚ್ಚರವಾಯಿತು. ಮನೆಯ ಏಕಾಂತ ತಪ್ಪಿಸಲು, ಬೆಳಗಿನ ತಿರುಗಾಟವೇ ಮದ್ದು ಎಂದು ಹೊರಟೇಬಿಟ್ಟೆ. ಹಿಂದಿರುಗಿ ಬರುವಷ್ಟರಲ್ಲಿ ಬಾಗಿಲಿಗೆ ಜಡಿದ ಬೀಗ ನಾಪತ್ತೆ ! ಎದೆ ಜೋರಾಗಿ ಬಡಿದುಕೊಳ್ಳ ಲಾರಂಭಿಸಿತು. ೨೪ ಗಂಟೆ ವಾಚ್‌ಮನ್ ಇರುವ ಫ್ಲಾಟ್‌ಗಳ ಸುರಕ್ಷತೆಯಲ್ಲಿ ಕಳ್ಳನೆಲ್ಲಿಂದ ಬಂದಾನು ? ಅಡಿಗೆಮನೆಯ ದೀಪ ಬೇರೆ ಹೊತ್ತಿಕೊಂಡಿದೆ ! ಬಹುಶಃ ನನ್ನದೇ ಮರೆವಿನ ಮಾದರಿಗಳಿರಬೇಕು ಎಂದುಕೊಂಡೆ. ನೆಮ್ಮದಿಯಾಯಿತು. ಕೀ ತಿರುವಿ ಬಾಗಿಲು ತೆರೆಯುತ್ತಿದ್ದಂತೆ ಒಳದೀಪ ಆರಿತು. ದೀಪ ಹೋಗಿರಬೇಕು ಎಂದು ಪರೀಕ್ಷಿಸಲು ಸ್ವಿಚ್ ಹಾಕಲು ಕೈ ಎತ್ತಿದಾಗ ಮೃದುವಾಗಿ ಕೈಯೊಂದು ತಡೆಯುತ್ತದೆ. ಕತ್ತಲೆಯಲ್ಲಿ ಪರಿಚಿತ ಸ್ಪರ್ಶ ! ಹೆದರಿಸುವ ದನಿ. 'ಗೊರ್‌s ಗೊರ್‌ss ! ನಾನು ನಿನ್ನ ಪತಿರಾಯ ! ಕುಡಿದಿರುವೆ ಸಿಂಹಛಾಪ ಚಹಾ !....' ಕಳ್ಳನ ಪಾತ್ರಕ್ಕೆ ನನ್ನ ರಾಯರು ಶುದ್ಧನಾಲಾಯಕು ! ಎಂದುಕೊಂಡು ಜೋರಾಗಿ ನಕ್ಕುಬಿಟ್ಟೆ.

ದೀಪ ಹಾಕಿದೆ. ತಾವಾಗಿಯೇ ರಾಯರು ಪ್ರತ್ಯಕ್ಷರಾಗಿದ್ದರು. ನಾನು ಸೊಲ್ಲೆತ್ತುವ ಮುನ್ನವೇ 'ಪ್ರಾಣಪ್ರಿಯೆ, ನೀನು ಕೆಲ ದಿನ ತಿರುಗಾಡಿ ಬಾ, ಎಂದು ಕಡ್ಡಿ ಮುರಿದು ಹೇಳಿದ್ದರೂ, ನಿನ್ನನ್ನು ಬಿಟ್ಟಿರುವುದಾಗಲಿ, ತಿರುಗಾಟವಾಗಲಿ ಸಾಧ್ಯವಿಲ್ಲ ಎಂದೆನಿಸಿ ಹಿಂದಿರುಗಿ ಬಂದೆ' ಎಂದಾಗ ನನ್ನ ಕಣ್ಣು ತುಂಬಿಬಂದವು. ರಾಯರು ಎಲ್ಲೂ ಹೋಗದೇ ಬೆಂಗಳೂರಿನ ಬನಶಂಕರಿಯಲ್ಲಿರುವ ತಂಗಿಯ ಮನೆಯಲ್ಲೇ ಇದ್ದರು ಎಂದು ಆ ಬಳಿಕ ತಿಳಿದುಬಂದಿತು. ಗೃಹಿಣೀ ಗೃಹಮುಚ್ಯತೇ ! ಎಂಬ ಮಾತು ಪರಂಪರಾಗತವಾಗಿ ಬಂದರೂ ಈ ಗೃಹಸ್ಥ ಮನೆಯಲ್ಲಿಲ್ಲದಾಗ, ಗೃಹಕೃತ್ಯ ಸುಲಭವಲ್ಲ ಎಂದು ರಾಯರು 'ಪರೋಕ್ಷ ಪಾಠ' ಕಲಿಸಿದ್ದರು. ಸ್ವಾವಲಂಬನೆಯತ್ತ ನನ್ನನ್ನು ಹೊರಳಿಸಲು ಯತ್ನಿಸಿದ್ದರು, ಎಂಬುದನ್ನು ಅರಿಯುವಂತೆ ಆಯಿತು ಈ ಘಟನೆಯಿಂದ.

■ ■

## ೧೯. ಹದಿನಾರರಲ್ಲಿ ಒಂದು........

ರಾಯರು ಕೋರ್ಟು, ಕಚೇರಿ, ವ್ಯಾಜ್ಯಗಳಿಂದ ಹರದಾರಿ ದೂರ ಇರುವವರು. ಅಫಿಡಾವಿಟ್, ಹೇಳಿಕೆ ದಾಖಲೆ ನೀಡುವದು ಮುಂತಾದವು ಅವರಿಗೆ ಒಗ್ಗದ ವಿಚಾರಗಳು. ಅಂತೆಯೇ ವರ್ಷಕ್ಕೊಮ್ಮೆ ಆದಾಯದ ಲೆಕ್ಕಾಚಾರ ಒಪ್ಪಿಸಲೇಬೇಕಾಗಿ ಬಂದಾಗ, ಗರಬಡಿದವರಂತೆ ವರ್ತಿಸುತ್ತಾರೆ. ಯಾರಾದರೂ ಚಾರ್ಟರ್ಡ್ ಅಕೌಂಟಂಟ್ ನೆರವು ಪಡೆಯಬಾರದೇ ? ಎಂದು ಸೂಚಿಸಿದಾಗ, ಆತನಿಗೇಕೆ ಸಾವಿರಾರು ತೆತ್ತಬೇಕು?' ಎಂದು ಪ್ರಶ್ನಿಸುವರು. ದಿನನಿತ್ಯವೂ ಜಮಾಖರ್ಚು ಬರೆದರೂ ಆದಾಯಕರ ಖಾತೆಗೆ ಬೇಕಾಗುವ ಯಾವತ್ತೂ ವಿವರಗಳನ್ನು ಸಂಗ್ರಹಿಸುವದು ಸುಲಭ ಸಾಧ್ಯವಲ್ಲ. 'ಪೀಯೂಷ್' ದವರು ಆಮಂತ್ರಿತ ಲೇಖಕ್ಕೆ ಆಗೀಗ ಕೊಡುವ ಗೌರವಧನ, 'ಜನವಾಣಿ' ವಿಮರ್ಶೆಗಾಗಿ ಕೊಟ್ಟ ಫೀ, ಮಯೂರ್‌ದವರು ಪ್ರಕಟಿಸಿದ ಛಾಯಾಚಿತ್ರಗಳಿಗೆ ಕಳಿಸಿದ ಮೊತ್ತ ಸಾಹಿತ್ಯ ಅಕಾಡೆಮಿಯವರು ಗ್ರಂಥ ಮೌಲ್ಯ ಮಾಪನಕ್ಕಾಗಿ ಸಂದಾಯ ಮಾಡಿದ ಕಾಸು, 'ತುಂತುರು', 'ಕರ್ಮಕೋಟಿ' ಯವರು ಕೊಡಮಾಡಿದ ಚಿಲ್ಲರೆ ಹಣದ ಲೆಕ್ಕ ಇಟ್ಟೇ ಹಣ್ಣಾಗುತ್ತಾರೆ. ''ಓಹ್ ! ಆ ತ್ರೈಮಾಸಿಕ ಬೇರೆ ಈ ಚೆಕ್ ಕಳಿಸುವ ಕೃಪೆ ಮಾಡಿದೆಯೇ ? ಬ್ಯಾಂಕ್ ಕಮಿಷನ್ ಕಳೆದು ಉಳಿಯುವ ಹತ್ತು ರೂಪಾಯಿ ಅಗೌರವಧನ ಬೇರೆ ! ಎಂದು ವ್ಯಂಗ್ಯವಾಗಿ ನಾನು ಕಾಮೆಂಟ್ ಮಾಡುತ್ತಲೇ ಇರುವದು ರೂಢಿ. ''ಪುಣ್ಯಕ್ಕೆ ಕನ್ನಡ ಪತ್ರಿಕೆಯವರೆಲ್ಲ ಅತ್ಯಲ್ಪ. ಗೌರವ ಧನ ಕೊಡಮಾಡಿ ಉಪಕಾರವೆಸಗಿದ್ದಾರೆ ! ಇಲ್ಲದಿದ್ದರೆ ಆದಾಯ ಖಾತೆಯವರೇ ಕಬಳಿಸಿ ಹಾಕುತ್ತಿದ್ದರು. ಆದಾಯ ತೆರಿಗೆ ಪಾವತಿ ಮಾಡುವದರಲ್ಲಿ ಕುರಿಕೋಣಗಳು ಬಿದ್ದು ಹೋಗುತ್ತಿದ್ದವು!'' ಎಂದು ರಾಯರು ಎಲ್ಲ ಮುಗಿದ ಮೇಲೆ ನೆಮ್ಮದಿಯ ನಿಟ್ಟುಸಿರು ಬಿಡುವರು.

ಪ್ರತಿವರ್ಷವೂ ಬದಲಾಗುತ್ತಿರುವ ಆದಾಯಕರ ನಿಯಮಾವಳಿಗಳನ್ನು ಅಭ್ಯಸಿಸಲು ಪುಸ್ತಕಗಳನ್ನು ಕೊಂಡು ತರುವರು. ಜೀವ ವಿಮೆಯಲ್ಲಿ ಹಣ ತೊಡಗಿಸಿದರೆ ಎಷ್ಟು ಲಾಭ ? ಬ್ಯಾಂಕಿನಿಂದ ಪಡೆದ ಬಡ್ಡಿಯಲ್ಲಿ ಎಷ್ಟು ರಿಯಾಯತಿ ? ಚಿಕ್ಕ ಉಳಿತಾಯ ಪದ್ಧತಿ ಅದೆಷ್ಟು ನೆರವಿಗೆ ಬರುತ್ತದೆ ? ಎಂದೆಲ್ಲ ಹಣಕಾಸಿನ ವರ್ಷದ ಪ್ರಾರಂಭ ದಲ್ಲಿಯೇ ಅಭ್ಯಸಿಸಿ, ಮನನಮಾಡಿ ಆದಾಯಕರದ ಭಾರದಿಂದ ಮುಕ್ತನಾಗಲು ಕಾರ್ಯೋನ್ಮುಖಿಯಾಗುವರು. ಕೊನೆಯ ದಿನಾಂಕಕ್ಕೆ ಇನ್ನೂ ಎರಡು ವಾರಗಳ ಕಾಲಾವಕಾಶ ಇದ್ದಾಗಲೇ ಎಲ್ಲಾ ಫಾರ್ಮುಗಳನ್ನು ಜಾಗ್ರತೆ ತುಂಬಿ, ತಾವೇ ಅವನ್ನು

ಕೈಯಾರೆ ಆ ಆಫೀಸಿಗೆ ತಲುಪಿಸಿ, ರಶೀದಿ ಪಡೆಯುವರು. ಇಷ್ಟಾದರೂ ನಾಲ್ಕಾರು ವರ್ಷಗಳ ಬಳಿಕ, ಸಕಾಲದಲ್ಲಿ ಫಾರ್ಮುಗಳನ್ನು ತುಂಬದೇ ಇದ್ದುದಕ್ಕಾಗಿ ಮೊಕದ್ದಮೆಯನ್ನು ಏಕೆ ಹೂಡಬಾರದು ? ಎಂದು ಆದಾಯಕರ ಇಲಾಖೆಯವರು ಎಚ್ಚರಿಕೆ ಪತ್ರ ಕಳಿಸದೇ ಇರುವದಿಲ್ಲ ! ಫಾರ್ಮುಗಳನ್ನು ತುಂಬಿ ಸಕಾಲಿಕವಾಗಿ ಕೊಟ್ಟಿದ್ದೇವೆ ಎನ್ನುವದಕ್ಕೆ ಸಾಕ್ಷಿಯನ್ನು ಕಾದಿರಿಸುವದು ಆದಾಯಕರ ಕೊಡುವವರ ಜವಾಬ್ದಾರಿಯಂತೆ ! ಸರಿ, ರಶೀದಿಯ ಪ್ರತಿಮಾಡಿಸಿ ಅವರಿಗೆ ತಲುಪಿಸಿ, ಬಾಯಿ ಮುಚ್ಚಿಸಲು ರಾಯರ ಇನ್ನಷ್ಟು ಓಡಾಟ ಪ್ರಾರಂಭ.

ಒಂದು ವರ್ಷ, ಗೌರವಧನ ಪಡೆದ ಸಂಪೂರ್ಣ ವಿವರಣೆಯನ್ನು ಕೇಳಿ ಪತ್ರ ಬಂದಿತು. ಆವರ್ಷ ಎರಡು ಗೌರವ ಗ್ರಂಥಗಳು ಹಾಗೂ ಒಂದು ಸನ್ಮಾನ ಗ್ರಂಥಕ್ಕೆ ಬರೆದ ಲೇಖಗಳನ್ನು ಬಿಟ್ಟರೆ, ಇನ್ನೇನೂ ಬರೆದಿರಲಿಲ್ಲ ! ಇನ್ನೊಂದು ವರ್ಷ ಡಾಕ್ಟರರಿಗೇಕೆ ಇಷ್ಟೊಂದು ಕಡಿಮೆ ಆದಾಯ ? ಎಂಬ ತೀವ್ರ ಸಂದೇಹದಿಂದ ಹೆಚ್ಚಿನ ಮಾಹಿತಿ ಕೇಳಲಾಯಿತು.ಅಮೇರಿಕೆಯ ನ್ಯೂಯಾರ್ಕ ವಿಶ್ವ ವಿದ್ಯಾಲಯದ ಡಾಕ್ಟರೇಟ್ ಪದವಿ ಯಿಂದ ಕಿಂಚಿತ್ ಲಾಭವಾಗದಿದ್ದರೂ ಕಿರುಕುಳ ತಪ್ಪಲಿಲ್ಲ! ಎಂದು ತಮ್ಮ ಹೆಸರಿನ ಹಿಂದೆ 'ಡಾ||' ಎಂದು ಬಳಸುವದನ್ನೇ ಬಿಟ್ಟುಕೊಟ್ಟರು. ಕೊನೆಗೊಮ್ಮೆ ''ನಿಮ್ಮ ಆದಾಯ ತೀರ ಕಡಿಮೆ ಇರುವದರಿಂದ, ಅನವಶ್ಯಕವಾಗಿ ಅಷ್ಟೊಂದು ಫಾರ್ಮುಗಳನ್ನು ತುಂಬಿ, ಅವನ್ನು ಪರಾಮರ್ಶಿಸುವ ತೊಂದರೆಯನ್ನು ನಮಗೆ ಕೊಡಬೇಡಿ !'' ಎಂದು ಕಡಾಖಂಡಿತವಾಗಿ ಆ ಇಲಾಖೆಯಿಂದ ಹೇಳಿಸಿಕೊಂಡ ಬಳಿಕವೇ ರಾಯರು ನೆಮ್ಮದಿಯಿಂದ ಉಸಿರಾಡಿಸಿದ್ದು.

ರಷ್ಯದಂಥ ಪ್ರಬಲ ರಾಷ್ಟ್ರ, ಆರ್ಥಿಕ ಮುಗ್ಗಟ್ಟಿನಿಂದ ಕುಸಿದು ಬಿದ್ದ ಬಳಿಕ, ಭಾರತಕ್ಕೂ ಅಂಥ ಸ್ಥಿತಿ ಬರಬಾರದೆಂದು ಆ ಶೈಲಿಯಲ್ಲೇ ರೂಪಿತವಾದ ಆರ್ಥಿಕ ನೀತಿಯನ್ನು ಬದಲಿಸಲು ನಮ್ಮ ಅರ್ಥಮಂತ್ರಿಗೆ ನಿವಾರಣೋಪಾಯ ಕೈಕೊಳ್ಳದೇ ಅನ್ಯಮಾರ್ಗವಿರಲಿಲ್ಲ. 'ಅರ್ಥಲೋಕದ ಬ್ರಹ್ಮ'ನೆಂದು ಬೆನ್ನು ತಟ್ಟಿಸಿಕೊಂಡ ಮನ್‌ಮೋಹನ್ ಸಿಂಗ್ ಅವರು ಹಲವಾರು ಉದ್ದಿಮೆಗಳನ್ನು ವಿವಿಧ ಕಟ್ಟಳೆಗಳಿಂದ ಮುಕ್ತ ಮಾಡಿದರು. ಆದರೂ ಸರಕಾರದ ಆರ್ಥಿಕ ಮುಗ್ಗಟ್ಟು ಕಡಿಮೆ ಆಗಲಿಲ್ಲ ! ಬಡವರು, ಹಿಂದುಳಿದವರು, ಅಲ್ಪ ಸಂಖ್ಯಾತರು, ಆದಿವಾಸಿಗಳು ಮುಂತಾದವರ ಉದ್ಧಾರ ಮಾಡುವ ನೆಪದಲ್ಲಿ ರಾಜಕಾರಣಿಗಳು ಸರಕಾರಿ ಬೊಕ್ಕಸ ಬರಿದು ಮಾಡುವ ಪರಂಪರೆ ಮುಂದರಿಯಿತು. ಖಜಾನೆಗೆ ಹಣ ಬೇಕೇ ಬೇಕಲ್ಲ ? ಆದ್ದರಿಂದ ಅರ್ಥ ಮಂತ್ರಿಗಳಿಗೆ ಪ್ರಜೆಗಳಿಂದ ಹಣ ದೋಚಲು ಹೊಸ ಹೊಸ ವಿಚಾರಗಳನ್ನು ರೂಪಿಸಬೇಕಾಗಿ ಬಂದಿತು. ಬ್ಯಾಂಕಿನಿಂದ ವರ್ಷಕ್ಕೆ ಎರಡೂವರೆ ಸಾವಿರ ರೂಪಾಯಿಗಳಿಗಿಂತ ಹೆಚ್ಚಿನ ಬಡ್ಡಿಯನ್ನು ಪಡೆಯುವವರ ಆದಾಯ ಕರದ ಪಾಲನ್ನು ಮೂಲದಲ್ಲಿಯೇ ಕಡಿತ ಮಾಡಿಬಿಡಬೇಕೆಂಬ ಆದೇಶ ಹೊರಟಿತು. ಆದರೆ ಬ್ಯಾಂಕುಗಳೆಲ್ಲ ಸಕಾಲದಲ್ಲಿ ಈ ಕಾನೂನಿನ ಕುರಿತಾದ ಮಾಹಿತಿಯನ್ನು ಗಿರಾಕಿಗಳಿಗೆ ಪೂರೈಸದೇ ಇದ್ದುದ

ರಿಂದ, ತುಂಬ ಜನ, ಗಳಿಸಿದ ಬಡ್ಡಿಯಲ್ಲಿ ಶೇಕಡಾ 10% ರಷ್ಟು ಕಳೆದುಕೊಳ್ಳ ಬೇಕಾಯಿತು. ನ್ಯಾಯವಾಗಿ ನಡೆದುಕೊಂಡರೂ ಒಮ್ಮೆ ಆದಾಯಕರ ಖಾತೆಗೆ ಜಮಾ ಆದ ಮೊತ್ತ ಹಿಂದಿರುಗಿ ಪಡೆಯುವದೆಂದರೆ, ಕೋಳಿ ನುಂಗಿದ ಕಲ್ಲನ್ನು ವಾಪಸ್ ಪಡೆಯಲು ಯತ್ನಿಸಿದಂತೆ!

ಆದಾಯಕರವನ್ನು ಮೂಲದಲ್ಲಿಯೇ ಮುರಿದುಕೊಳ್ಳಲು ಬಡ್ಡಿಯ ಮೊತ್ತವನ್ನು ಕೇವಲ ಒಂದು ನೂರು ರೂಪಾಯಿಗಳಿಗೆ ಇಳಿಸುವ ಸಾಧ್ಯತೆ ಇದ್ದೇ ಇದೆ! ಎಂದರು. ರಾಯರು ಹೌಹಾರಿದರು. ಒಂದೇ ಬ್ಯಾಂಕಿನ ಒಂದೇ ಶಾಖೆಯಲ್ಲಿ ಠೇವಣಿಯಿಟ್ಟರೆ ತೊಂದರೆಗೆ ಆಹ್ವಾನ! ಎಂದು ಯೋಚಿಸಿ ಠೇವಣಿಗಳನ್ನು ಕಾಲುನಡಿಗೆಯಲ್ಲೇ ನಡೆದು ಹೋಗಿ ಬರುವಷ್ಟು ದೂರದ ವಿವಿಧ ಬ್ಯಾಂಕ್ ಶಾಖೆಗಳಿಗೆ ವಿಭಜಿಸಿ ವರ್ಗಾಯಿಸಿದರು. ಇಷ್ಟಾದರೂ ರಾಯರಿಗೆ ಆದಾಯಕರ ಇಲಾಖೆಯ ಕಾರ್ಯನಿರ್ವಹಣೆಯ ಕುರಿತಾದ ಆತಂಕ ಸದಾ ಇದ್ದದ್ದೇ! ಹೀಗಾಗಿ ಆರ್ಥಿಕ ವರ್ಷದ ಪ್ರಾರಂಭದಲ್ಲಿ ಮತ್ತು ಕೊನೆಯಲ್ಲಿ ಆದಾಯಕರ ಮುರಿದುಕೊಳ್ಳಲಾಗಿದೆ, ಎಂದು ಪ್ರಮಾಣ ಮಾಡಿ ಹೇಳುವ '೧೫ ಎಚ್' ಫಾರ್ಮಿನ ಎರಡೆರಡು ಫಾರ್ಮುಗಳನ್ನು ಬ್ಯಾಂಕಿಗೆ ತಲುಪಿಸಿ ರಶೀದಿ ಪಡೆದರು. ಆ ಫಾರ್ಮುಗಳಲ್ಲಿ 'ಈಗಿನ ವೃತ್ತಿ' ಎಂಬ ಕಾಲಂ ಇದ್ದೆಡೆ ''ನಿವೃತ್ತ ಕೀಟ ಶಾಸ್ತ್ರಜ್ಞ'' ಎಂದು ಬರೆಯಲು ಮರೆಯಲಿಲ್ಲ ನಿವೃತ್ತರ ಕುರಿತು ಆದಾಯಕರ ಇಲಾಖೆಯವರು ಹೆಚ್ಚು ತಲೆಕೆಡಿಸಿಕೊಳ್ಳುವದಿಲ್ಲ ಎಂಬುದು ರಾಯರ ಅಂಬೋಣ.

ಸಂದರ್ಭಾನುಸಾರ ರಾಯರು ತಮ್ಮ ಬಹುರೂಪಿ ವ್ಯಕ್ತಿತ್ವವನ್ನು ವ್ಯಕ್ತಪಡಿಸುವದುಂಟು! ಹಿಂದೆಯೇ ಇದ್ದ ಸೊಟ್ಟ ನೌಕರಿಗೆ ರಾಜೀನಾಮೆ ಕೊಟ್ಟು 'ವಿದ್ಯಾವಂತ ನಿರುದ್ಯೋಗಿ' ಎಂದು ಕರೆದುಕೊಂಡಿದ್ದರು. ಸಾಹಿತಿಗಳಿಗೆ ಆದಾಯಕರದಲ್ಲಿ ಹೆಚ್ಚಿನ ರಿಯಾಯತಿ ಇದೆ, ಎಂದು ತಿಳಿದಾಗ 'ಬರಹಗಾರ'ರಾದರು. ಅಷ್ಟಿಷ್ಟು ಹಣದ ಬಡ್ಡಿಯನ್ನು ಆದಾಯಕರದವರು ದೋಚಿಕೊಂಡು ಹೋಗಬಾರದು, ಎಂದು 'ನಿವೃತ್ತ'ರಾದರು. ಸರ್ವೇಸಾಧಾರಣವಾಗಿ ಕೆ. ಎಲ್. ಕಾಮತ್ ಎಂದು ಕರೆಯಲ್ಪಡುವ ರಾಯರು, ಸಾಹಿತಿಗಳಿಗೆ ಸಿಗಲಿರುವ ಸವಲತ್ತುಗಳಿಗಾಗಿ, ಕೃಷ್ಣಾನಂದ ಕಾಮತ ಆಗಿ ಪರಿವರ್ತನೆಗೊಳ್ಳುವರು. ಈ ಬಹುರೂಪಿಯ ಹಿಂದೆ ಅಡಗಿದ ಇಂಗಿತವರಿಯದ ಬ್ಯಾಂಕ್ ಅಧಿಕಾರಿಣಿಯೋರ್ವಳು, ನಿಮ್ಮ ನಿಜವಾದ ಉದ್ಯೋಗ, ಸರಿಯಾದ ಹೆಸರು ಯಾವವು? ಎಂದು ವಿಚಾರಿಸಿಯೇ ಬಿಟ್ಟಳು. ರಾಯರು ಉತ್ತರಿಸುವ ಪೂರ್ವದಲ್ಲಿಯೇ ಅವಳ ಸಹಾಯಕಿ ನೆರವಿಗೆ ಬಂದು ''ನಾನು ಸುಧಾ, ವಾರಪತ್ರಿಕೆ, ಮಯೂರ ಮಾಸ ಪತ್ರಿಕೆಗಳನ್ನು ತಪ್ಪದೇ ಓದುತ್ತಿರುತ್ತೇನೆ. ಇವರು ವಿವಿಧ ಲೇಖಗಳ ವಿಚಿತ್ರ ಮನುಷ್ಯ! ತನ್ನ ತೀರ್ಪನ್ನಿತ್ತಳು. ಪಾಪ! ಆಕೆ 'ವಿಚಿತ್ರ' ಎಂಬ ಅರ್ಥಗರ್ಭಿತ ಶಬ್ದವನ್ನು ಅರಿಯದೇ ಆದರೆ ಸರಿಯಾಗಿಯೇ ಬಳಸಿದ್ದರು.

ಬ್ಯಾಂಕ್ ಠೇವಣಿಯ ಮೇಲಿನ ಆದಾಯಕರ ಹೇರಿಕೆಯ ಮೇಲೆ ಸರಕಾರಕ್ಕೆ ಹೆಚ್ಚಿನ ಲಾಭವಾಗದಿದ್ದರೂ, ಬ್ಯಾಂಕಿನ ಜವಾಬ್ದಾರಿ ಹಾಗೂ ಕೆಲಸಗಳು ವಿಪರೀತ ಏರಿ,

ಮರುವರ್ಷವೇ ಅದನ್ನು ಕೈಬಿಡಲೇಬೇಕಾಯಿತು. ಹಳೇ ಮಂತ್ರಿಗಳು ಕಂಬಿಕಿತ್ತು ಹೊಸಬರ ಆಗಮನವಾಗಿ ಚಿದಂಬರಂ ಬಂದರು. ಅವರಿಗೂ ಬರಿದಾದ ಸರಕಾರದ ಬೊಕ್ಕಸ ತುಂಬಿಸುವ ತರಾತುರಿ ! ಆದರೂ, ಹತ್ತು ಸಹಸ್ರದ ತನಕ ಬಡ್ಡಿಲಾಭದ ರಿಯಾಯತಿ ತೋರಿದರು. ಆದರೆ ಜಾಗೃತ ನಾಗರಿಕರೆಲ್ಲ ನಮ್ಮ ರಾಯರ ಮೇಲ್ಪಂಕ್ತಿಯನ್ನು ಅದಾಗಲೇ ಅನುಸರಿಸಲಾರಂಭಿಸಿದ್ದರಿಂದ, ಆ ಸರಕಾರಕ್ಕೂ ಹೆಚ್ಚಿನ ತೆರಿಗೆ ಲಭಿಸಲೇ ಇಲ್ಲ ! ಸಣ್ಣ ಪುಟ್ಟ ವ್ಯಾಪಾರಿಗಳು ವಾರ್ಷಿಕ ಕರವೆಂದು ನಿರ್ದಿಷ್ಟ ಮೊತ್ತ ಕೊಡಮಾಡಿದರೆ, ಅವರ ಲೆಕ್ಕಾಚಾರದ ತಪಾಸಣೆ ಮಾಡುವದಿಲ್ಲ, ಎಂದು ಆದಾಯಕರ ಖಾತೆ ಘೋಷಿಸಿದರೂ ಯಾವ ವ್ಯಾಪಾರಿಯೂ ಜಗ್ಗಲೇ ಇಲ್ಲ! ಹೀಗಾಗಿ ಹೊಸ ಬಗೆಯ ಆದಾಯಕರದ ಆವಿಷ್ಕಾರ ಮಾಡದೇ ಚಿದಂಬರಂ ಅವರಿಗೆ ನಿರ್ವಾಹವೇ ಇರಲಿಲ್ಲ, ಧನಿಕರಿಗೇ ಬಿಸಿ ತಟ್ಟಿಸಲು ಅವರು ನಿರ್ಧರಿಸಿದರು.

ಆದಾಯಕರದ ದೊಡ್ಡ ಮೊತ್ತವನ್ನು ವಸೂಲಿ ಮಾಡಬಹುದಾದಂತಹ ಧನಿಕರು ಯಾರು ? ಎಂದು ನಿರ್ಧರಿಸುವದೇ ಸರಕಾರಕ್ಕೆ ಕಷ್ಟಕ್ಕಿಟ್ಟುಕೊಂಡಿತು ! ಸ್ವಂತ ಬಂಗ್ಲೆ ಹೊಂದಿದವರು, ಕಾರು ಓಡಿಸುವವರು, ಸದ್ಯದಲ್ಲಿ ವಿದೇಶಕ್ಕೆ ಹೋಗಿ ಬಂದವರು, ಟೆಲಿಫೋನು ಮನೆಯಲ್ಲಿದ್ದವರೆಲ್ಲ ಸಿರಿವಂತರು ಎಂಬ ಮಾನದಂಡ ಘೋಷಿಸಲ್ಪಟ್ಟಿತು. ಈ ನಾಲ್ಕು ಗುಂಪುಗಳಲ್ಲಿ ಎರಡಕ್ಕಾದರೂ ಸೇರಿದವರು, ತಮ್ಮ ವಾರ್ಷಿಕ ಉತ್ಪನ್ನದ ದಾಖಲೆಯನ್ನು ಸರಕಾರಕ್ಕೆ ಪ್ರತಿವರ್ಷ ಒಪ್ಪಿಸಲೇಬೇಕು, ಎಂಬ ಕಾನೂನು ಮಾಡಿದರು. ಇದರಿಂದ ರಾಯರ ಪ್ರಕೋಪ ಹೇಳತೀರದು ! ತಾವು ಮಧ್ಯಮ ವರ್ಗದ ಪ್ರತಿನಿಧಿಯೆಂದೇ ಭಾವಿಸಿಕೊಂಡು ಸರಕಾರದ ಮೇಲೆ ಬೈಗಳ ಸುರಿಮಳೆ ಕರೆದದ್ದೇ ! ''ವೃಥಾ ನೀವೇಕೆ ತಲೆ ಬಿಸಿ ಮಾಡಿಕೊಳ್ಳುತ್ತೀರಿ ? ಸ್ವಂತ ಮನೆ ಹೋಗಲಿ, ಯಾವ ಆಸ್ತಿ–ಪಾಸ್ತಿಯೂ ನಿಮ್ಮ ಹೆಸರಿನಲ್ಲಿಲ್ಲ. ಇಷ್ಟೊಂದು ಕಾರು ಕಂಪನಿಗಳು ಅಸ್ತಿತ್ವಕ್ಕೆ ಬಂದಿದ್ದರೂ, ನಿಮ್ಮ ಅಭಿರುಚಿ–ಅನುಕೂಲಕ್ಕೆ ಹೊಂದುವಂಥ ವಾಹನ ತಯಾರಿಸುವ ಎದೆಗಾರಿಕೆಯನ್ನು ಒಂದೂ ಕಂಪನಿ ಈ ತನಕ ತೋರ್ಪಡಿಸಿಲ್ಲ ! ವಿದೇಶಕ್ಕೆ ಈ ೩೦ ವರ್ಷಗಳಲ್ಲಿ ಹೋಗಿ ಬಂದಿಲ್ಲ ಅಷ್ಟೇ ಅಲ್ಲ ಇನ್ನೂ ಮುಂದೆಯೂ ಹೋಗುವ ಇರಾದೆ ನಿಮಗಿಲ್ಲ ! ದೂರವಾಣಿಯಿಂದ ನೀವಂತೂ ಸದಾ ದೂರವೇ ಇದ್ದೀರಿ ! ಆದ್ದರಿಂದ ಈ ಹೊಸ ಸಿರಿವಂತರೆಂದು ಗಣಿಸಲ್ಪಟ್ಟು ಆದಾಯಕರದ ಲೆಕ್ಕಾಚಾರ ಒಪ್ಪಿಸುವ ಮಾತು ದೂರವೇ ಉಳಿಯಿತು !'' ಎಂದೆಲ್ಲ ಹೇಳಿದಾಗ ಬೆಪ್ಪಾಗಿ ಹೋದರು. ಸರಕಾರವೂ ತೆಪ್ಪಗಾಯಿತು. ಸೂಚಿಸಿದ ನಾಲ್ಕು ಗುಂಪುಗಳಲ್ಲಿ ಎರಡಕ್ಕಾದರೂ ಸೇರ್ಪಡೆಯಾಗಬಹುದಾದ ಧನಿಕರನ್ನು ಗುರುತಿಸುವ ಕಾರ್ಯವೂ ಈ ಸರಕಾರದ ಅಳವಿನದಾಗದೇ , ಈ ನಿಯಮಾವಳಿಯೂ ಮೂಲೆ ಗುಂಪಾಯ್ತು!

ಮತ್ತೇ ಹೊಸ ಸರಕಾರ ಬಂದಿತು. ಯಶವಂತ ಸಿನ್ಹಾ ಅರ್ಥಮಂತ್ರಿಯ ಪೀಠವನ್ನು ಅಲಂಕರಿಸಿದರು. ಗಾಳಿ ತುಂಬಿದ ಸರಕಾರಿ ಬೊಕ್ಕಸವನ್ನು ಭರ್ತಿ ಮಾಡುವದು ಭಯಂಕರ ಕಷ್ಟಕ್ಕಿಟ್ಟುಕೊಂಡಿತು. ಸಮಾಧಾನಿ ಸಮಿತಿ, ಸನ್ಮಾನಿತ

ಸದಸ್ಯರು ಎಂದೆಲ್ಲ ಅತಿ ಶ್ರೀಮಂತರನ್ನು ಗೌರವಪೂರ್ಣವಾಗಿ ಕರೆದು, ಅವರ ಸವಲತ್ತುಗಳನ್ನು ಯಾದಿ ಮಾಡಿದರು. ಕ್ರೆಡಿಟ್ ಕಾರ್ಡ ಪಡೆದಿರುವಿಕೆ, ದುಬಾರಿ ಸಂಘಗಳ ಸದಸ್ಯತ್ವವನ್ನು ಅದಕ್ಕೆ ಸೇರಿಸಿದರು. ಈ ಹೊಸ ಯಾದಿಯಲ್ಲಿ ಒಂದೇ ಒಂದು ಅಂಶವನ್ನು ಅವರು ಹೊಂದಿದ್ದರೂ, ತಮ್ಮ ಉತ್ಪನ್ನದ ವಿವರಗಳನ್ನು ಸರಕಾರಕ್ಕೆ ಒಪ್ಪಿಸಲೇಬೇಕು ! ಎಂಬ ಹುಕುಂ ಹೊರಟಿತು. ಈ ಹೊಸ ಸೂತ್ರಗಳ ಬಲೆಯಲ್ಲಿ ರಾಯರು ಅಪ್ಪಿ ತಪ್ಪಿ ಕೂಡ ಬಂಧಿತರಾಗುವ ಸಾಧ್ಯತೆ ಇರಲಿಲ್ಲ, ಆದರೂ ಕೆರಳಿದರು. ಈಗ ಧನಿಕರ ಪರವಾಗಿ!'' ಸೂತ್ರಗಳನ್ನು ಸಾರುತ್ತಾರೆ...... ಮಕ್ಕಳು ! ಬೇಕಿದ್ದರೆ ನಾನೇ ಇನ್ನೂ ಹತ್ತು ಸೂತ್ರಗಳನ್ನು ರೂಪಿಸಿ ರಾಷ್ಟ್ರದ ಖಜಾಂಚಿಗೆ ಬರೆದು ತಿಳಿಸಬಲ್ಲೆ! ಎಂದು ಗುಡುಗಿದರು. ''ನಿಮಗೆ ಅನ್ವಯಿಸದ, ಆದರೆ ದೇಶಕ್ಕೆ ಲಾಗು ಆಗಬಹುದಾದ ಆ ಸೂತ್ರಗಳು ಯಾವವು ?'' ಎಂದು ಕೆಣಕಿದೆ. ''ಹೊಗೆಬತ್ತಿ ಸೇದುವವರು, ಸುರಾಪಾನ ಮಾಡುವವರು, ಗುಟ್ಕಾ ಜಗಿಯುವವರು, ಎಲಡಿಕೆ ಜರ್ದಾ ಹಾಕುವವರು, ಕುದುರೆ ರೇಸುಗಳಲ್ಲಿ ಪಾಲುಗೊಳ್ಳುವವರು, ಕಂಪ್ಯೂಟರ್ ಬಳಸುವವರು, ಪೇಜ್, ಸೆಲ್‌ಫೋನ್ ಹೊತ್ತು ತಿರುಗುವವರು, ಪ್ರವಾಸದಲ್ಲೂ ಮಾತುಕತೆಯಾಡುತ್ತಲೇ ಫೋನಿಸುತ್ತಿರುವವರು, ಅರೆನಗ್ನ, ಪೂರ್ಣನಗ್ನ ನೃತ್ಯ ನೋಡುವವರು, ಪಾಲುಗೊಳ್ಳು ವವರು, ಇದಕ್ಕಾಗಿಯೇ ಭಾರೀ ಮೊತ್ತ ಸುರಿಯುವವರು ಇವರೆಲ್ಲರಿಂದ ಕರವಸೂಲು ಮಾಡಲು ಯಾರು ಬೇಡವೆನ್ನುತ್ತಾರೆ ?' ತಮ್ಮ ಅರ್ಥ ಪ್ರಣಾಲಿಯನ್ನು ರಾಯರು ಸಾದ್ಯಂತ ಘೋಷಿಸಿದರು.

ಅಂದಿನ ವೃತ್ತಪತ್ರ ಓದುತ್ತಿದ್ದ ರಾಯರು, ತುಂಬ ಹರ್ಷದಿಂದ, 'ನೋಡೇ ! ಮುದಿ ವಯಸ್ಸಿಗೂ ಒಂದು ಆಕರ್ಷಣೆ ಇರುತ್ತದೆ ! ಕೆಲ ಕಾಲದ ಹಿಂದೆ ಬೆಂಗಳೂರು ನಗರ ಸಾರಿಗೆಯವರು, ಅರವತ್ತು ದಾಟಿದವರನ್ನು ಕೇವಲ ನಾಲ್ಕಾಣೆಗೆ ನಗರದಲ್ಲಿ ಎಲ್ಲಿ ಬೇಕೋ ಅಲ್ಲಿಗೆ ಮನಸ್ವೀ ಅಲೆಯಬಹುದೆಂದು ಅನುಕೂಲ ಮಾಡಿ ಕೊಟ್ಟಿರಲಿಲ್ಲವೇ ? ಸೂಟ–ಬೂಟ ಧಾರಿಗಳೂ, ರೋಲೆಕ್ಸವಾಚ್, ಬಂಗಾರ ಸರ, ವಜ್ರದುಂಗುರ ದವರೂ ಈ ರಿಯಾಯತಿ ಬಳಸಿ ಯಶವಂತಪುರದಿಂದ ಜೆ.ಪಿ. ನಗರದ ತುತ್ತತುದಿಯ ವರೆಗೆ ಹಾಯಾಗಿ ಓಡಾಡಿಕೊಂಡಿದ್ದ ದಿನಗಳು ನೆನಪಿವೆಯೇ ? ಈಗ ಭಾರತೀಯ ರೇಲ್ವೆಯೂ ಅಂತಹದೇ ಸವಲತ್ತನ್ನು ಕೊಡಮಾಡಿದೆ. ಅರವತ್ತೈದು ದಾಟಿದ ಯುವಕರು, ಶೇಕಡಾ ಮೂವತ್ತರಷ್ಟು ರಿಯಾಯತಿಯಲ್ಲಿ ಭಾರತದಾದ್ಯಂತ ಹೋಗಿ ಬರಬಹುದಂತೆ ! ವಾತ ನಿಯಂತ್ರಿತ ಡಬ್ಬಿಗೂ ಇದು ಅನ್ವಯಿಸುತ್ತದಂತೆ. ಈಗ ಅರ್ಥ ಮಂತ್ರಿಗೂ ವಿವೇಕೋದಯವಾಗಿ ಹಿರಿಯ ನಾಗರಿಕರನ್ನು ಗೌರವಿಸಲು ಕೆಲ ಸವಲತ್ತು ಕೊಡಮಾಡಿದ್ದಾರೆ ! ವರ್ಷಕ್ಕೆ ಒಂದುವರೆ ಲಕ್ಷದಷ್ಟು ಉತ್ಪನ್ನವಿದ್ದರೂ ಅವರು ಆದಾಯಕರ ಕೊಡಬೇಕಾಗಿಲ್ಲವಂತೆ ! ಇಷ್ಟೆ ಅಲ್ಲ, ಉತ್ಪನ್ನದ ಲೆಕ್ಕಾಚಾರ ಕೂಡ ಒಪ್ಪಿಸ ಬೇಕಾಗಿಲ್ಲವಂತೆ. ಬಡ್ಡಿಗಳಿಸುವದರ ಮೇಲೆ ಬ್ಯಾಂಕಿನವರು ಕಡ್ಡಾಯದ ಆದಾಯಕರ ಮುರಿದುಕೊಳ್ಳುವದನ್ನು ನಿಲ್ಲಿಸಿ ಬಿಟ್ಟಿದ್ದಾರೆ''....... ಎಂದು ಸಂಭ್ರಮದಿಂದ

ಇನ್ನೇನನ್ನೊ ಹೇಳುವವರಿದ್ದರು. ನನ್ನನ್ನು ಎಲ್ಲೂ ಕರೆದೊಯ್ಯದ ಅಸಮಾಧಾನದಲ್ಲೇ ಇರುವ ನಾನು, ಬ್ರೆಕ್ ಹಾಕಿ, ''ಕಳೆದ ಹದಿನೈದು ವರ್ಷಗಳಲ್ಲಿ ನೀವು ತಪ್ಪಿ ಕೂಡಾ ಟ್ರೇನು ಹತ್ತಿಲ್ಲ! ಮರೆತೇ ಹೋಯಿತೇ ? ಇಷ್ಟೆ ಅಲ್ಲದೇ ಆದಾಯವಿಲ್ಲದ ಲೇಖಕ ವರ್ಗದವರಾದ ನೀವು ಆದಾಯ ಕರದಲ್ಲಿ ರಿಯಾಯತಿ ಪಡೆಯುವ ಪ್ರಶ್ನೆಯೇ ಏಳುವದಿಲ್ಲ ?' ಎಂದು ಕೊಂಕು ನುಡಿದೆ. ''ನೀನು ಯಾವ ರಿಯಾಯತಿಗೂ ಬೆಲೆ ಕೊಡದ ಮಹನೀಯಳು ಎಂದು ಗೊತ್ತು! ಸುದೀರ್ಘ ವಿವಾಹ ಜೀವನದಲ್ಲಿ ಕಂಡು ಕೊಂಡ ಗಟ್ಟಿ ಸತ್ಯ ಅದು. ಇಷ್ಟಾದರೂ ನಮಗೆ ಕೊಡಮಾಡಿದ ಸವಲತ್ತುಗಳಿಗೆ ಅಭಿಮಾನ ಇರಬೇಡವೇ ? ಈಗ ನೋಡು, ನಾನು ನಾಲ್ಕು ವರ್ಷ ಬೆವರು ಸುರಿಸಿ ಪಡೆದ ನ್ಯೂಯಾರ್ಕ ವಿಶ್ವ ವಿದ್ಯಾಲಯದ ಡಾಕ್ಟರೇಟು ಪದವಿ ಯಾವ ಪ್ರಯೋಜನಕ್ಕೂ ಬಾರದೇ ಹೋಯಿತು. ಆದರೆ ಆ ಶ್ರಮದ ಸುಖ ನನಗಿದೆ. ಅದರಂತೆ ಹಿರಿಯ ನಾಗರಿಕನಾಗಿ ಸರಕಾರದ ಸಕಲ ಸವಲತ್ತುಗ್ಗಳು ನನ್ನ ಪಾಲಿಗೆ ನಿಷ್ಪ್ರಯೋಜಕ ವಾಗಿದ್ದರೂ, ಅವುಗಳಿಗೆಲ್ಲ ನಾನು ಬಾಧ್ಯಸ್ಥ! ಎಂಬ ನೆಮ್ಮದಿ ಇದೆ....... ಕೇವಲ ಇನ್ನೊಂದು ವರ್ಷದಲ್ಲಿ ನಾನು ಹಿರಿಯ ನಾಗರಿಕನಾಗಿ ಬಿಡುತ್ತೇನೆ ! ಅದನ್ನು ದೊಡ್ಡ ಪ್ರಮಾಣದಲ್ಲಿ ಆಚರಿಸೋಣ. ಆಗದೇ ? ಎಂದರು. ''ಸಾಕುಬಿಡಿ, ವಿವಾಹದ ರಜತ ವರ್ಧಂತಿ, ನಿಮ್ಮ ಷಷ್ಠ್ಯಬ್ದಿಗಳೆಲ್ಲ ಹೇಗೆ ಆಚರಿಸಲ್ಪಟ್ಟವು ಎಂಬುದು ಗೊತ್ತಿಲ್ಲವೇ ? ಇದಂತೂ......... ಹತ್ತರ ಜೋಡಿ ಹನ್ನೊಂದರ ಸವಲತ್ತಿನದು ! ಎಂದಾಗ ಸ್ನಾನಕ್ಕೆ ತಡವಾಯಿತು ಎಂದು ಎದ್ದರು. ಆದಾಯಕರ ತಪ್ಪಿದ ರಾಯರ ಸಂತೋಷವನ್ನು ಹೆಚ್ಚಿಸ ಲೆಂದು ''ಅಲ್ರೀ ನಿಮಗೆ ಈ ಕರಬಾಧೆ ಎಂದೆಂದೂ ಬಾಧಿಸಲಿಕ್ಕಿಲ್ಲ! ನೀವು ಕುಡಿಯುವ ಹಾಲು, ಊಟದ ಹಿರೇಕಾಯಿ, ಬದನೆಕಾಯಿ, ಹಾಗಲಕಾಯಿ, ಮೂಲಂಗಿ, ಸವತೆಕಾಯಿಗಳ ಸೇವನೆ ದುಂದುಗಾರಿಕೆಯಲ್ಲಿ ಬರುತ್ತದೆ ಎಂದು ಯಾವ ಸರಕಾರವೂ ಸಹಸಾ ಘೋಷಿಸಲಾರದು !'' ಎಂದಾಗ ಹೋಹೋ ! ಎಂದು ನಕ್ಕು ಬಿಟ್ಟರು.



## ೨೦. ರಾಯರ ಉಯಿಲು

''ಅಲ್ರೀ ಅದೇನೋ ಮುಗಿಲೇ ತಲೆಯ ಮೇಲೆ ಮುರಿದುಬಿದ್ದಂತೆ. ಹಗಲೂ ರಾತ್ರಿ ವಿಚಾರ ಮಾಡುತ್ತೀರಲ್ರಿ? ಅದಾವ ಸಮಸ್ಯೆ ನಿಮ್ಮ ಚಿತ್ತಶಾಂತಿಗೆ ಸವಾಲಾಗಿದೆ?'' ಎಂದು ಮೈಮರೆತು ಕುಳಿತಿದ್ದ ರಾಯರನ್ನು ವಿಚಾರಿಸಿದಾಗ ಬೆಚ್ಚಿಬಿದ್ದರು. ''ಹ ಹ್ಹ ! ಪರಿಹಾರವಿಲ್ಲದ ಸಮಸ್ಯೆಯೇನಲ್ಲ. ಆದರೂ ಸಕಾಲದಲ್ಲಿ ಕಾರ್ಯೋನ್ಮುಖಿಯಾದರೆ ಎಲ್ಲವೂ ಸರಾಗವಾಗಿ ನಡೆಯಲು ಅನುಕೂಲವಾಗುತ್ತದೆ. ನನಗೀಗ ಇಷ್ಟರಲ್ಲೇ ಅರವತ್ತು ವರ್ಷ ಆಗಲಿದೆ. ಇತರರು ಬದುಕಿದರೂ, ಸತ್ತರೂ ಸುಖ–ಶಾಂತಿ ಸಿಗಲೆಂದು ವಿಜೃಂಭಣೆಯಿಂದ ಷಷ್ಟ್ಯಬ್ದಿ ಆಚರಿಸುತ್ತಾರೆ. ಇದಕ್ಕಾಗಿಯೇ ಇಪ್ಪತ್ತು ಲಕ್ಷ ರೂಪಾಯಿಗಳನ್ನು ಭಸ್ಮ ಮಾಡಿರಿ ಧೀರರೂ ಇದ್ದಾರೆ. ಆದರೆ ನಾನು ಜೀವನದುದ್ದಕ್ಕೂ ಸುಖ–ಶಾಂತಿಯತ್ತ ಆತ್ಮತೃಪ್ತಿಯ ಜೀವನ ನಡೆಸುತ್ತ ಬಂದದ್ದರಿಂದ ಸ್ವರ್ಗದಲ್ಲಿಯೂ ಅವು ನನ್ನವಾಗಬೇಕೆಂಬ ಸ್ವಾರ್ಥವಿಲ್ಲ''. ಏನೇನೋ ಹೇಳಲೆದ್ದರು ನಡುವೆಯೇ ತಡೆದು ''ಹಾಗಾದರೆ ಇಷ್ಟೊಂದು ಏಕೆ ಚಿಂತಿಸಬೇಕು ? ಕೂದಲು ಬಹಳಷ್ಟು ಕಡಿಮೆಯಾದರೂ ಇನ್ನೂ ಕಪ್ಪಗಿವೆ. ನಿಮ್ಮ ಮುಖದ ಮೇಲೆ ಒಂದೂ ಸುಕ್ಕು ಇಲ್ಲ ಎಂದು ಗಮನಿಸಿದವರು. ನಿಮಗೆ ನಲವತ್ತೈದು ಮೀರಿಲ್ಲ ಅಂದುಕೊಳ್ಳುತ್ತಾರೆ. ರಕ್ತದೊತ್ತಡ, ಸಿಹಿಮೂತ್ರ ಕಾಯಿಲೆಗಳು ನಿಮ್ಮಿಂದ ಹರದಾರಿ ದೂರ ! ತಲೆನೋವು ನಿದ್ರಾ ನಾಶಗಳ ಪರಿಚಯವೇ ನಿಮಗಿಲ್ಲ ಒಂದೇ ಗುಳಿಗೆ, ಚುಚ್ಚುಮದ್ದಿನ ಅನುಭವ ನಿಮಗಾಗಿಲ್ಲ. ವೈದ್ಯರ ಹತ್ತಿರ ಹೋಗುವ ಪ್ರಮೇಯವೇ ಬಂದಿಲ್ಲ ! ನಗರದ ಉದ್ದಗಲಕ್ಕೂ ನಡೆದುಕೊಂಡೇ ಹೋಗುತ್ತೀರಿ ನಾಲ್ಕು ದಶಕಗಳ ಹಿಂದೆ ನಿಮ್ಮ ಕಾಲೇಜ ಸ್ನೇಹಿತರಾದವರು. ಇಷ್ಟು ವರ್ಷಗಳಲ್ಲಿ ನಿಮ್ಮಲ್ಲಿ ಬದಲಾವಣೆಯೇ ಇಲ್ಲ ! ಎಂದು ಉದ್ಗರಿಸಿದ್ದು ಮರೆತೇ ಹೋಯೇತೇ ? ಅವರೆಲ್ಲ ಈ ವಿಷಯದಲ್ಲಿ ನಿಮಗಿಂತ ಒಂದು ದಶಕ ಮುಂದೆ ಹೋಗಿದ್ದಾರೆ !'' ಎಂದು ಹೊಗಳಿದಾಗ ಬೆನ್ನಿಗೊಂದು ಗುದ್ದಿ ಗಹಗಹಿಸಿದ್ದರು.

''ನನ್ನ ಸಮಸ್ಯೆ ಇಹಲೋಕದ್ದಲ್ಲ. ಪರಲೋಕಕ್ಕೆ ಹೋದ ಮೇಲೆ ಸಂಭವಿಸ ಬಹುದಾದದ್ದು ! ಆಗ ಬಂಧು–ಬಳಗದವರೆಲ್ಲ ಹದ್ದುಗಳಂತೆ ಬಂದು ಆಸ್ತಿ–ಪಾಸ್ತಿ ಗಳಿಗಾಗಿ ಕಚ್ಚಾಟ–ಹೊಡೆದಾಟ ಸಾಮಾನ್ಯ. ಆದರೆ ನಮ್ಮ ಸಮಸ್ಯೆ ಇತರರಿಗಿಂತ ಭಿನ್ನ. ಮಗಳಂದಿರೇ ಇಲ್ಲದರಿಂದ ಅಳಿಯಂದಿರು ಆಸ್ತಿಯ ಪಾಲಿಗಾಗಿ ಕಾದಾಡುವ ಕಣಕ್ಕೆ ಇಳಿಯುವ ಸಮಸ್ಯೆ ಇಲ್ಲವೇ ಇಲ್ಲ. ನಮ್ಮ ಸರ್ವಸ್ವವೂ ಏಕಮಾತ್ರ ಪುತ್ರನಿಗೆ

ಸೇರಬೇಕಾದ್ದು ನ್ಯಾಯ. ಆದರೆ ಅವನೋ, ನಿಮ್ಮದು ನನಗೆ ಏನೂ ಬೇಕಿಲ್ಲವೆಂದು ಅಮೇರಿಕೆಯಲ್ಲಿ ಒಳ್ಳೆಯ ನೌಕರಿ ಪಡೆದು ಅಲ್ಲಿಯೇ ಸ್ಥಾಪಿತನಾಗಿದ್ದಾನೆ. ನಮ್ಮಲ್ಲಿ ಆಸ್ತಿ–ಪಾಸ್ತಿ ಬೆಳ್ಳಿ–ಬಂಗಾರ, ಶೇರು–ಕಾರುಗಳಿದ್ದರೆ ದಾಯಾದಿಗಳಾದರೂ ತಮ್ಮ ಹಕ್ಕನ್ನು ಚಲಾಯಿಸಲು ಸ್ಪರ್ಧೆ ನಡೆಸುತ್ತಿದ್ದರು. ಆದರೆ ನಮ್ಮಲ್ಲಿ ಸಂಚಯವಾಗಿರುವ ಸರಂಜಾಮುಗಳಲ್ಲಿ ಅವರಿಗೆ ಏನೇನೂ ಆಸಕ್ತಿಯಿಲ್ಲ ! ಅಂತೆಯೇ..... '' ಎಂದು ಹೇಳಲೆತ್ನಿಸಿದಾಗ ಹಿಂದಿನ ಅಸಮಾಧಾನವೆಲ್ಲ ನೆನಪಿಗೆ ಬಂದಿತು. ''ಹಿಂದೆ ಒಂದು ಕಾರು ಕೊಳ್ಳೋಣ ಎಂದರೆ ಜೋಡಿ ಕಾಲೇ ಸಾಕು ಅಂದ್ರಿ. ರೆಫ್ರಿಜಿರೇಟರ್ ಕೊಳ್ಳೋಣ ಎಂದ್ರೆ ಮಣ್ಣಿನ ಮಡಕೆ ತಂದಿಟ್ರಿ ! ಶೇರ್ ಕೊಳ್ಳೋಣ ಎಂದ್ರೆ ಅದು ಜೂಜಾಡಿದಂತೆ ಅಂತ ಹೇಳಿದ್ರಿ. ಒಡವೆ ಮಾಡಿಸ್ರಿ ಅಂದ್ರೆ, ಅದರಲ್ಲಿ ವಿಶ್ವಾಸವಿರಬಾರದು. ವಿದ್ಯೆಯೇ ಭೂಷಣ ಎಂದು ಸಾರಿದ್ರಿ. ಹೋಗಲಿ ಒಳ್ಳೆಯ ಬಟ್ಟೆಯನ್ನಾದ್ರೂ ಕೊಂಡು ಧರಿಸಿರಿ ಅಂದ್ರೆ ಎರಡೇ ಜೋಡಿ ಪ್ಯಾಂಟ್ ಶರ್ಟ್, ಬನಿಯನ್, ಅಂಡರ್‌ವೇರ್‌ಗಳು ಸಾಕು'' ಎಂದು ಬೋಧಿಸಿದ್ರಿ. ಈಗ ನೋಡಿ, ಎಂಥ ಅಸಹಾಯಕ ಸ್ಥಿತಿ ತಂದುಕೊಂಡಿದ್ದೀರಿ!'' ಎಂದು ಸಿಟ್ಟೆಲ್ಲ ತೋಡಿಕೊಂಡಾಗ, ರಾಯರ ಮೇಲೆ ಏನೂ ಪರಿಣಾಮವಾಗಲಿಲ್ಲ!

''ನಮ್ಮಿಬ್ಬರಲ್ಲಿ ಯಾರು ಜಾಣರೆಂದು ಸಾಧಿಸಹೊರಟ ಹಾಗಿದೆಯಲ್ಲ? ನೀನೇ ಜಾಣೆ ಎಂದು ಸಹಸ್ರ ಸಲ ಹೇಳಿದರೂ ನಮ್ಮ ಸಮಸ್ಯೆ ಬಗೆಹರಿಯುವದಿಲ್ಲ ! ಕಳ್ಳರು ಕಾಕರು, ಕಾನೂನು ಅಧಿಕಾರಗಳನ್ನು ದೂರವಿಡಲೆಂದೇ ಬೆಲೆಯುಳ್ಳ ಸಾಮಾನುಗಳನ್ನು ಕೊಳ್ಳದೇ ಇದ್ದದ್ದು ನಿನಗೆ ತಿಳಿದ ವಿಷಯವೇ ! ಸರಸ್ವತಿ ಆರಾಧಕರ ಮನೆಯ ಮೆಟ್ಟಿಲು ದಾಟಿ ಒಳಗೆ ಬರುವ ಸಾಹಸ ಲಕ್ಷ್ಮಿಗೆ ಇಲ್ಲವೇ ಇಲ್ಲ. ನಾವು ನಡೆಸಿದ ಜೀವನ ಪದ್ಧತಿಗೆ ಪರಿತಪಿಸಬೇಕಿಲ್ಲ. ಇನ್ನೊಮ್ಮೆ ಮೊದಲಿನಿಂದ ಜೀವನ ನಡೆಸಿದರೂ ನಾನು ಹಾಗೆಯೇ ಮಾಡುವವನು. ''ಆದರೆ–ಹೋದರೆ'' ಗಳ ಕುರಿತು ತಲೆ ಕೆಡಿಸಿಕೊಳ್ಳುವದು ಬೇಡ. ಯಾರನ್ನು ನಮ್ಮ ಸರಂಜಾಮುಗಳ ಉತ್ತರಾಧಿಕಾರಿಯನ್ನಾಗಿ ಮಾಡುವದೆಂದು ನಿರ್ಧರಿಸೋಣ. ಆಗದೇ ? ಎಂದು ಮನವರಿಕೆ ಮಾಡಿಕೊಡಲು ಯತ್ನಿಸಿದರು.

''ನಿಮ್ಮ ಸಹೋದರರು–ಸಹೋದರಿಯರಿಗೆಲ್ಲ ಯಾರೊಬ್ಬರಿಗೂ ನಿಮ್ಮಲ್ಲಿರುವ ಸಾಮಾನು–ಸರಂಜಾಮುಗಳಲ್ಲಿ ವಿಶ್ವಾಸವಿಲ್ಲ. ಅವರಿಗೆ ರೇಶ್ಮೆ ಸೀರೆ, ಬೆಲೆಯುಳ್ಳ ಬಟ್ಟೆ ಬರೆ, ವಸ್ತ್ರ–ಒಡವೆ, ಪರ್ಸ್ ತುಂಬ ಹಣ ಯಾವುದಕ್ಕೂ ಕೊರತೆಯಿಲ್ಲ. ನಿಮ್ಮ 'ಗುಜರಿ ಗುತ್ತಿಗೆ' ಸಂಗ್ರಹಾಲಯದ ಅಧಿಪತಿಗಳಾಗಲು ಅವರು ಹೇಗೆ ಒಪ್ಪಿಯಾರು ? ಕಸ ಕೆದಕುವ ಹುಡುಗನೂ ನಿಮ್ಮ ಉತ್ತರಾಧಿಕಾರಿಯಾಗಲು ಒಪ್ಪಲಿಕ್ಕಿಲ್ಲ !'' ಎಂದು ಚೆನ್ನಾಗಿಯೇ ಹಂಗಿಸಿ, ಅಡಿಗೆ ಮನೆ ಸೇರಿದೆ.

ಎಲ್ಲರನ್ನೂ ಹಚ್ಚಿಕೊಳ್ಳದ, ಯಾರ ಮನೆಗೂ ಕಾಲಿಡದ ರಾಯರ ಪಾಲಿಗೆ ವರಾನ್ವೇಷಣೆಯ ಕಾಟವೂ ತಪ್ಪಿದ್ದರಿಂದ ಬಲು ನೆಮ್ಮದಿಯಿಂದಲೇ ಇದ್ದರು. ಆದರೆ ಈ ಉತ್ತರಾಧಿಕಾರಿಯ ಶೋಧ ಅವರನ್ನು ಬಲು ಕಷ್ಟಕ್ಕೆ ಇಟ್ಟುಕೊಂಡಿತು. ಪರಿಚಯದ

ಕಿರಿಯ ಕೀಟ–ವಿಜ್ಞಾನಿಯೊಬ್ಬರು ಕೃಷಿ ವಿಶ್ವವಿದ್ಯಾಲಯದಲ್ಲಿದ್ದರು. ಅವರ ಮನಸ್ಸನ್ನು ಗೆಲ್ಲಬಹುದೆಂಬ ನಿರೀಕ್ಷೆಯಿಂದ ಸಂಪರ್ಕ ಬೆಳೆಸಿದರು. ಆತ ಬಹಳ ಆದರದಿಂದ ರಾಯರನ್ನು ಬರಮಾಡಿಕೊಂಡು ಆತಿಥ್ಯ ಒದಗಿಸಿದರು. ''ತಾವು ಅಮೇರಿಕೆಯ ನ್ಯೂಯಾರ್ಕ್ ವಿಶ್ವವಿದ್ಯಾಲಯದಿಂದ ಕೀಟಶಾಸ್ತ್ರದಲ್ಲಿ ಡಾಕ್ಟರೇಟು ಪಡೆದಿದ್ದದಿಂದ ಪ್ರತಿಯೊಬ್ಬ ಕನ್ನಡಿಗನೂ ಅಭಿಮಾನದಿಂದ ಎದೆಯುಬ್ಬಿಸಲೇಬೇಕು. ಇಷ್ಟಾದರೂ ದೇಶಾಭಿಮಾನದಿಂದ ಸ್ವದೇಶಕ್ಕೆ ಮರಳಿದ ಅಪರೂಪದ ವ್ಯಕ್ತಿಯಾಗಿದ್ದಿರಿ. ನಮ್ಮ ಸಹೋದ್ಯೋಗಿಯಾದ ಡಾ. ಸಚಾನರು, ನೀವು ರಾಜಸ್ಥಾನದಲ್ಲಿದ್ದೀರಿ...... ಅಲ್ಲಿ ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ಕಲಿಸುವಾಗ, ಕಿಸೆಯಿಂದ ಹಣ ಖರ್ಚು ಮಾಡಿ, ವೈಜ್ಞಾನಿಕ ಛಾಯಾಗ್ರಹಣಕ್ಕೆ ಬೇಕಾಗುವ ರಾಸಾಯನಿಕಗಳನ್ನು ತರುತ್ತಿದ್ದೀರಿ. ಎಂದು ಹೇಳಿದಾಗ, ನಂಬುವದೇ ಕಷ್ಟವಾಯಿತು ! ಅಲ್ಲದೇ ನಕ್ಸಲರ ಹಾವಳಿ ಶಿಖರಕ್ಕೇರಿದಾಗ ಪಶ್ಚಿಮ ಬಂಗಾಲದ ಹಳ್ಳಿಯೊಂದರಲ್ಲಿ ಕೆಲಸ ಮಾಡಿ ಅಭಿಮಾನಶೂನ್ಯ ಕನ್ನಡಿಗರ ಕಣ್ಣು ತೆರೆಯುವಂತೆ ಮಾಡಿದ್ದೀರಿ'' ಎಂದೆಲ್ಲ ಮುಖಸ್ತುತಿ ಮಾಡಿದಾಗ, ರಾಯರು ಹಿಗ್ಗಿ ಹೋದರು. ತಾವು ಬಂದ ಉದ್ದೇಶವನ್ನು ಸ್ವಲ್ಪದರಲ್ಲಿ ವಿವರಿಸಿದರು. ''ದೇವರು ಸಕಾಲದಲ್ಲಿ ನಿಮ್ಮನ್ನು ನನ್ನ ಹತ್ತಿರ ಕಳಿಸಿದ್ದಾನೆ. ನನಗೆ ಮುಂಬಡತಿ ದೊರೆಯಲು, ಸಂಶೋಧನಾ ಪ್ರಬಂಧಗಳ ಪ್ರಕಟನೆ ಆಗದಿದ್ದುದೇ ಮುಖ್ಯ ಕಾರಣವೆಂದು ವಿಭಾಗದ ಮುಖ್ಯಸ್ಥರು ವಿವರಿಸಿದ್ದಾರೆ. ನಿಮ್ಮ ಸಿದ್ಧ ಪ್ರಬಂಧದ ಪ್ರತಿ ಕೊಡಿ. ನಿಮಗೆ ಈಗ ಅದರ ಪ್ರಯೋಜನ ಏನೇನೂ ಇಲ್ಲವಷ್ಟೇ ? ಅಲ್ಲಲ್ಲಿ ಬದಲಾವಣೆಯೊಂದಿಗೆ ನನ್ನ ಹೆಸರಿನಲ್ಲಿ ಪ್ರಕಟಿಸಲು ಅವಕಾಶ ಕೊಡಿ. ತಮ್ಮ ಆಶೀರ್ವಾದದಿಂದ ಬಡತಿ ಪಡೆಯುತ್ತೇನೆ'' ಎಂದು ತನ್ನ ಅಂತರಂಗವನ್ನು ತೆರೆದಿಟ್ಟಾಗ, ರಾಯರ ಬೆವರಿಳಿಯಿತು. ಮತ್ತೆ ಭೇಟಿ ಮಾಡುವುದಾಗಿ ಹೇಳಿ ಹಿಂದಿರುಗಿದರು.

ಟಾಟಾ ಸಂಸ್ಥೆಯ ವೈಜ್ಞಾನಿಕ ಛಾಯಾಚಿತ್ರಕಾರ ಸುಂದರೇಶನ್‌ರನ್ನು ಒಲಿಸ ಲಾಗುತ್ತದೋ, ಎಂದು ಪ್ರಯತ್ನಿಸಲು ಅವರ ಮನೆಗೆ ಪಾದ ಬೆಳೆಸಿದರು. ''ನಿಮ್ಮ ಪ್ರತ್ಯಕ್ಷ ಭೇಟಿ ಆಗದಿದ್ದರೂ ನಿಮ್ಮ ವೈಜ್ಞಾನಿಕ ಛಾಯಾಗ್ರಹಣದಿಂದಾಗಿ ತುಂಬ ಪರಿಚಿತರು ನೀವು ! ಅದೆಷ್ಟು ಪ್ರಸಂಗಗಳಲ್ಲಿ ನನ್ನಿಂದಾಗದು ಎಂದು ಹೇಳಿದ ಕೆಲಸವನ್ನೆಲ್ಲ ಸಂಶೋಧಕ–ವಿದ್ಯಾರ್ಥಿಗಳೆಲ್ಲ ನಿಮ್ಮಿಂದ ಮಾಡಿಸಿಕೊಂಡು ಬಂದಾಗ, ವಿಭಾಗದ ಮೇಲಧಿಕಾರಿಗಳಿಂದ ಛೀಮಾರಿ ಹಾಕಿಕೊಳ್ಳುವ ಅನೇಕ ಪ್ರಸಂಗಗಳು ಬಂದಿವೆ ! ನಮ್ಮ ವಿಭಾಗದ ಹಲವಾರು ಸಂಶೋಧನ ಪ್ರಬಂಧಗಳಲ್ಲಿ ವಿದ್ಯಾರ್ಥಿಗಳು ತಮ್ಮ ಪ್ರಾಧ್ಯಾಪಕರಿಗೆ ಕೃತಜ್ಞತೆ ಸೂಚಿಸುವದರ ಜೊತೆಗೆ ನಿಮ್ಮ ಹೆಸರನ್ನೂ ಸೇರಿಸಿದ್ದ ರಿಂದ, ವೈಜ್ಞಾನಿಕ ಛಾಯಾಗ್ರಹಣದಲ್ಲಿ ನಿಮ್ಮ ಪ್ರತಿಭೆಯ ಪರಿಣತಿ ತೋರಿಸುತ್ತದೆ. ಅಂತರ್ರಾಷ್ಟ್ರೀಯ ಜರ್ನಲ್‌ಗಳಲ್ಲೂ ನಿಮ್ಮ ಛಾಯಾಚಿತ್ರಗಳು ಪ್ರಕಟವಾಗಿವೆ ಯೆಂದೂ ತಿಳಿಯಿತು. ಎಂದೋ ನಿಮ್ಮಿಂದ ತರಬೇತಿ ಪಡೆಯಬೇಕೆಂದು ನಿರ್ಧರಿಸಿದ್ದೆ. ಈಗ ನೀವಾಗಿ ಬಂದಿದ್ದರಿಂದ ನನ್ನ ಬಹುದಿನದ ಆಕಾಂಕ್ಷೆ ಈಡೇರುವಂತಿದೆ.

ಎಂದಿನಿಂದ ತರಬೇತಿಗೆ ಬರಲಿ ?'' ಎಂದು ನಿಸ್ಸಂಕೋಚವಾಗಿ ತನ್ನ ಬೇಡಿಕೆ ಮುಂದಿಟ್ಟಾಗ ರಾಯರು ಕಂಗಾಲಾಗಿ, ತಮ್ಮ ಬರವಿನ ಕಾರಣವನ್ನೂ ವಿವರಿಸುವ ಗೋಜಿಗೇ ಹೋಗದೇ, ಬಿಡುವಾದಾಗ ತಿರುಗಿ ದಿನಾಂಕ ತಿಳಿಸುತ್ತೇನೆಂದು ಮರಳಿ ಬಂದರು.

ಈ ವಿಜ್ಞಾನಿಗಳಿಗಿಂತ ಸಾಹಿತಿಗಳೇ ಎಷ್ಟೋ ಮೇಲು ! ಎಂದು ಉದಯೋನ್ಮುಖ ಬರಹಗಾರನಾದ ಬಾಲಗೋಪಾಲನನ್ನು ಕಾಣಹೋದರು. ಆತ ಬಹಳ ಸಂತೋಷ ದಿಂದ ಬರಮಾಡಿಕೊಂಡರು. 'ತಮ್ಮ ಮುಖದರ್ಶನ ಮಾಡಿಕೊಳ್ಳಲು, ಅದೆಷ್ಟು ಯುವ ಲೇಖಕರು ಹಾತೊರೆದರೋ ! ನೀವಿಲ್ಲಿ ಬಂದ ವಿಚಾರ ತಿಳಿದು ಎಷ್ಟು ಜನ ಕರುಬುತ್ತಾರೋ ! ನಿಮ್ಮ ಚಿತ್ರವನ್ನಾದರೂ ನೋಡಿ ಸಂತೋಷ ಪಡೋಣವೆಂದರೆ ಯಾವ ಪತ್ರಿಕೆಯಲ್ಲಿಯೂ ತಮ್ಮ ಚಿತ್ರ ಪ್ರಕಟವಾಗಲೇ ಇಲ್ಲ ! ನಿಮ್ಮ ಕೆಲಪುಸ್ತಕಗಳ ಪುಟಗಳನ್ನು ಕಂಠಪಾಠ ಹೇಳುವಷ್ಟು ಬಾರಿ ಓದಿದ್ದೇನೆ ಸಾರ್' ಎಂದು ಉದ್ಗರಿಸಿ ಯಥಾಶಕ್ತಿ ಸತ್ಕರಿಸಿದ. ''ತಮ್ಮ ಸಮಗ್ರ ಸಾಹಿತ್ಯ ಸಂಕಲನವನ್ನು ಸಂಪಾದಿಸಿ ಹೊರತರ ಬೇಕೆಂಬ ಸಂಕಲ್ಪ ಮಾಡಿಕೊಂಡಿದ್ದೇನೆ. ತಮಗೆ ಇಷ್ಟರಲ್ಲಿ ಅರವತ್ತು ವರ್ಷ ಆಗಲಿದೆ ಎಂದು ತಿಳಿಯಲೇ ಇಲ್ಲ! ಈಗೇನು ಬರೆಯುತ್ತಿದ್ದೀರಿ ?'' ಎಂದೆಲ್ಲ ಮಾಮೂಲಿ, ಆದರೆ ಆತ್ಮೀಯ ಪ್ರಶ್ನೆಗಳನ್ನು ಕೇಳಿದಾಗ ಉತ್ತೇಜಿತರಾಗಿ ರಾಯರು ತಾವು ಬಂದ ಉದ್ದೇಶ ಹೇಳಿದರು. ಇದರಿಂದ ಹಿರಿಹಿರಿ ಹಿಗ್ಗಿದ. ಎಂದೂ ಗೋವು ಸಾಕದ ಗೋಪಾಲನು, ''ಸಾರ್, ತಾವು ತಪ್ಪು ತಿಳಿದುಕೊಳ್ಳದಿದ್ದರೆ ಒಂದು ಮಾತು ಹೇಳುತ್ತೇನೆ. ಇದಾಗಲೇ ತಮಗೆ ಮೂರು ಬಾರಿ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ಸಂದಿದೆ. ಇನ್ನು ತಮಗೆ ಕೊಡಲಾಗುವದಿಲ್ಲ ! ಅಲ್ಲದೇ ತಮಗೆ ಆದರ ಆಸೆಯೂ ಇಲ್ಲವೆಂದು ತೋರಿಸಿ ಕೊಂಡೂ ಇದ್ದೀರಿ ! ಈಗ ಪ್ರಕಟವಾಗದೇ ಉಳಿದುಕೊಂಡಿರುವ ಕಾಶ್ಮೀರ, ಹಿಮಾಚಲ ಪ್ರದೇಶ, ಗೋವಾ ರಾಜ್ಯಗಳ ಪ್ರವಾಸ ಕಥನಗಳನ್ನು ನಾನು ನನ್ನ ಹೆಸರಿನಿಂದ ಪ್ರಕಟಿಸಲೇ.....? ಈ ವರ್ಷ ಹೆಸರಿಸುವಂತಹ ಯಾವ ಕೃತಿಯೂ ಈ ಪ್ರಕಾರದಲ್ಲಿ ಬಂದಿಲ್ಲವೆಂದು ಈಗಾಗಲೇ ಪತ್ತೆ ಹಚ್ಚಿದ್ದೇನೆ, ಅಂದರೆ ನನಗೆ ಒಮ್ಮೆಯಾದರೂ ಈ ಬಹುಮಾನ ಲಭಿಸುವ ಸಾಧ್ಯತೆಯಿದೆ !'' ಎಂದು ಅಂಗಲಾಚಿದಾಗ, ಹಸ್ತಪ್ರತಿ ಹುಡುಕಿ ತಿಳಿಸುತ್ತೇನೆ'' ಎಂದು ರಾಯರು ಜಾರಿಕೊಂಡರು.

ಹೆಂಗಸರು ಗಂಡಸರಷ್ಟು ಸ್ವಾರ್ಥಿಗಳಲ್ಲ, ಕಾರಣವಿಲ್ಲದೇ ಸ್ಪರ್ಧೆಗೆ ಇಳಿಯುವ ವರಲ್ಲ ಎಂದು ಭಾವಿಸಿದ್ದರಿಂದ ಬೊಟಿಕ್ ಅಂಗಡಿ ನಡೆಸುತ್ತಿದ್ದ ಶ್ರೀಮತಿ ಮಾಣಿಕ ಶರ್ಮಳನ್ನು ಕಾಣಲು ಹೋದರು. ಆಕೆ ಸಂತೋಷದಿಂದ ಬರಮಾಡಿಕೊಂಡು, ''ತಮ್ಮ ಶ್ರೀಮತಿಯವರು ನನ್ನ ಸ್ನೇಹಿತೆಯಾಗಿದ್ದರೂ ತಮ್ಮ ಭೇಟಿಯ ಯೋಗ ಒದಗಿರಲಿಲ್ಲ ! ಅವರ ರೇಶ್ಮೆ ಸೀರೆಗಳ ಮೇಲೆ ಕ್ರಾಯಿಲಿನ್ ಬಣ್ಣದಿಂದ ತಾವು ರಚಿಸುತ್ತಿದ್ದ ಅತ್ಯಂತ ಸುಂದರ ಚಿತ್ರಾವಳಿಗಳನ್ನು ನೋಡಿ ತುಂಬ ಸಂತೋಷಪಟ್ಟಿದ್ದೆವು. ಕಲಕತ್ತಾದಲ್ಲಿ ಅವರ ಅದ್ವಿತೀಯ ಸೀರೆಗಳ ಸಂಗ್ರಹ ಕಳುವಾದ ವಿಚಾರ ಕೇಳಿ ಕಣ್ಣೀರೂ ಹಾಕಿದ್ದೆ.

ಬೇಲೂರು, ಹಳೇಬೀಡು, ಸೋಮನಾಥಪುರ, ಅಜಂತ ಚಿತ್ರಗಳ ಆಧಾರಿತ ಸೀರೆ ಡಿಝೈಾಯಿನ್‌ಗಳು ಅಪೂರ್ವವಾದವು ! ತಾವು ಕಲೆಯ ವ್ಯಾಪಾರದ ಕಡು ವಿರೋಧಿಗಳಂತೆ. ಆದರೆ ಭಾರತೀಯ ಕಲಾಕೃತಿಗಳಿಗೆ ವಿದೇಶಗಳಲ್ಲಿ ವಿಪರೀತ ಬೇಡಿಕೆ ಯಿದೆ. ಆದ್ದರಿಂದ ತಾವು ದೊಡ್ಡ ಮನಸ್ಸು ಮಾಡಿ ಇಲ್ಲಿ ಕೆಲಬಟ್ಟೆಯ ಮೇಲಾದರೂ ಕುಂಚ ಓಡಿಸುವ ಕೃಪೆ ಮಾಡಬೇಕು !' ಎಂದು ಬೇಡಿಕೊಂಡಳು.

ಕಕ್ಕಾಬಿಕ್ಕಿಯಾದ ರಾಯರು ತಾವು ಬಂದ ಉದ್ದೇಶವನ್ನು ವಿವರಿಸಲು ಯತ್ನಿಸಿದರು. ಇದರಿಂದ ಶ್ರೀಮತಿ ಶರ್ಮಾಗೆ ಹೊಸ ಸ್ಫೂರ್ತಿ ಬಂದಿತು. ''ಹಾಗಿದ್ದರೆ ಒಂದು ಕೆಲಸ ಮಾಡಿ, ನಮ್ಮಲ್ಲಿಯ ನಾಲ್ಕು ಯುವ ಕಲಾವಿದೆಯರನ್ನು ತರಬೇತಿಗೊಳಿಸಿ. ಇದನ್ನು ತಮ್ಮ ಮನೆಯಲ್ಲಿಯೇ ಕೈಕೊಳ್ಳಬಹುದು. ಅಥವಾ ನಮ್ಮ ವಿಶಾಲ ವಾದ ಮನೆಯನ್ನು ಬಳಸಬಹುದು. ಓಡಾಟಕ್ಕೆ ನಮ್ಮ ಕಂಪನಿ ಕಾರೂ ಇದೆ !'' ಎಂದು ಸೂಚಿಸಿದಳು. ಒಬ್ಬಳ ಬದಲಾಗಿ ನಾಲ್ವರು ಉತ್ತರಾಧಿಕಾರಿಗಳ ಸಾಧ್ಯತೆ ಸೂಚಿಸಿದ್ದಕ್ಕೆ ಭಲೆ ! ಎಂದು ತಲೆ ತೂಗಿ ರಾಯರು, ''ಯುವತಿಯರನ್ನು ಶಿಷ್ಯೆಯರಾಗಿ ಸ್ವೀಕರಿಸಲು ಮನೆಯವಳ ಒಪ್ಪಿಗೆ ಪಡೆದು ನಿಮಗೆ ತಿಳಿಸುತ್ತೇನೆ ! ಎಂದು ಮೌಖಿಕ ಆಶ್ವಾಸನೆ ನೀಡಿ ಹೊರಬಿದ್ದರು. ಕೊನೆಯ ಯತ್ನವೆಂದು ಕಲಾಕಾರನಾದ ಕಮಲಾಕರನನ್ನು ಕಾಣ ಹೋದರು. ''ಕೆಲ ಪತ್ರಿಕೆಗಳಲ್ಲಿ, ನಿಮ್ಮ ಶ್ರೀಮತಿಯವರ ಪುಸ್ತಕಗಳಲ್ಲಿ, ಪ್ರಕಟ ವಾದ ಹಾಸ್ಯ ವ್ಯಂಗ್ಯ ರೇಖಾ ಚಿತ್ರಗಳನ್ನು ನೋಡಿ ಈ ಹೊಸ ಕಲಾಕಾರರು ಯಾರು ? ಎಂದು ತಲೆಕೆಡಿಸಿಕೊಂಡಿದ್ದೆ. ನಿಮ್ಮ ರೇಖೆಗಳು ಪರಿಪಕ್ವವಷ್ಟೆ ಅಲ್ಲ, ಪ್ರೌಢವೂ ಆಗಿವೆ ! ನೀವು ಸಾಹಿತ್ಯ, ವೈಜ್ಞಾನಿಕ ಛಾಯಾಗ್ರಹಣ ಇತ್ಯಾದಿಗಳ ಕಡೆಗೆ ಗಮನಹರಿಸದೇ ಇದೊಂದರಲ್ಲೇ ಕೇಂದ್ರೀಕರಿಸಿದರೆ ತುಂಬ ಪ್ರಸಿದ್ಧರಾಗುತ್ತಿದ್ದೀರಿ ! ಅದೆಷ್ಟು ಕಲಾವಿದರು ರಾಜ್ಯ, ಕೇಂದ್ರ ಸರಕಾರಗಳಿಂದ ಪ್ರಶಸ್ತಿ ವೇತನಗಳನ್ನು ಗಿಟ್ಟಿಸಿದರೂ ಅವರಿಗೆ ಬರುವುದು ಮಣ್ಣೂ ಇಲ್ಲ. ವಿಜ್ಞಾನಿಯಾದ ನೀವು ಹೇಗೆ ಇಷ್ಟೊಂದು ಕಲಾಭಿರುಚಿ ಬೆಳೆಸಿಕೊಂಡಿರಿ ? ಎಂದು ಮಾತನಾಡುತ್ತಲೇ ಇದ್ದರು. ಸಮಯ ಸಾಧಿಸಿ ತಾವು ಬಂದ ಕಾರಣವನ್ನು ರಾಯರು ವಿವರಿಸಿದರು. ''ಇದೇನೂ ಮಹಾ ಸಮಸ್ಯೆಯಲ್ಲ ಸಾರ್ ! ಇದರ ಸಂಪೂರ್ಣ ಜವಾಬ್ದಾರಿಯನ್ನು ನನಗೇ ಬಿಟ್ಟುಬಿಡಿ. ನೀವು ವಿವಿಧ ರಾಜ್ಯಗಳಿಗೆ, ದೇಶಗಳಿಗೆ ಭೇಟಿಯಿತ್ತಾಗ, ಅಲ್ಲಿಯ ಜನಜೀವನವನ್ನು ರೇಖಾಚಿತ್ರಗಳಲ್ಲಿ ಮೂಡಿಸಿರಲು ಸಾಕು. ಅದೊಂದು ದೊಡ್ಡ ಸಂಗ್ರಹವೇ ಇದ್ದೀತು. ನನ್ನ ''ಕಮಲ್'' ಕಲಾಲಯದಿಂದ ಪ್ರಕಟಿಸಿ ಬಿಡುತ್ತೇನೆ. ನಿಮಗೆ ಕೃತಜ್ಞತೆಯನ್ನು ಸೂಚಿಸುವ ವಾಕ್ಯವನ್ನು ಮುನ್ನುಡಿಯಲ್ಲಿ ಖಂಡಿತಾ ಸೇರಿಸುತ್ತೇನೆ'', ಎಂದು ಆಶ್ವಾಸನೆಯಿತ್ತ ಕಲಾಭಿಮಾನಿಯನ್ನು ಮತ್ತೆ ಸಂಪರ್ಕಿಸುತ್ತೇನೆಂದು ಬೀಳ್ಕೊಂಡರು.

ಸಂಗೀತ ಮತ್ತಿತರ ಕಲೆಗಳ ಖ್ಯಾತ ವಿಮರ್ಶಕರೆಂದು ಹೆಸರು ಪಡೆದ ತ್ರಿವಿಕ್ರಮರಾವ್ ಅವರನ್ನು ಕಂಡೇ ಹೋಗೋಣವೆಂದು ಅವರ ಮನೆ ಹೊಕ್ಕರು. ''ನಿಮ್ಮ ಸೀಬಿಯ ಚಿತ್ರಕಲೆ, ಚಿಕಣಿ ಚಿತ್ರಗಳು ಕುರಿತ ಲೇಖನಗಳು ಅಪೂರ್ವವಾಗಿವೆ.

'ಕಾವಿಕಲೆ' ಪುಸ್ತಕದ ಮೇಲ್ಮೆಯನ್ನು ಬಣ್ಣಿಸಲು ನನ್ನ ಶಬ್ದ ಭಂಡಾರ ಸಾಲದು. ನಿಮ್ಮಲ್ಲಿ ಇದ್ದಿರಬಹುದಾದ ಅಪ್ರಕಟಿತ ಕಲಾ ಪ್ರಕಾರಗಳ ಚಿತ್ರಗಳು ಮತ್ತು ಮಾಹಿತಿಯನ್ನು ಒದಗಿಸಿದರೆ ಅವನ್ನು ವಿಮರ್ಶಿಸಿ ನಾನೇ ಪ್ರಕಟಿಸುತ್ತೇನೆ'' ಎಂದು ಅದ್ಭುತ ಸಲಹೆ ನೀಡಿದರು. ಬಂದ ದಾರಿಗೆ ಸುಂಕವಿಲ್ಲವೆಂದು ರಾಯರು ಹಿಂದಿರುಗಿದರು.

''ಜನಸಾಮಾನ್ಯರು ಸ್ವಾರ್ಥಿಗಳೆಂದು ಬಲ್ಲೆ. ಆದರೆ ಹೀಗೆ ಧೀಮಂತರೆನಿಸಿ ಕೊಂಡವರೂ ಮಹಾಸ್ವಾರ್ಥಿಗಳೆಂದು ಅರಿಯುವಂತಾಯಿತು. ಆದ್ದರಿಂದ ಇವರಲ್ಲಿ ಯಾರನ್ನೂ ಉತ್ತರಾಧಿಕಾರಿಯನ್ನಾಗಿ ಮಾಡುವ ಗೋಜಿಗೆ ಹೋಗದೆ 'ಉಯಿಲು' ಬರೆದಿಡುವ ನಿರ್ಧಾರ ಕೈಕೊಂಡಿದ್ದೇನೆ. ರಾಯರು ಉದ್ಗರಿಸಿದರು..... ಪರಿಷತ್ತಿನ ವಾರ್ಷಿಕ ವರದಿ. 'ತಾಯ್‌ನುಡಿ' ಸಂಚಿಕೆಗಳನ್ನೆಲ್ಲ ಏನು ಮಾಡುತ್ತೀರಿ ? ಎಂದು ಕೆಣಕಿದೆ. ಅವುಗಳ ಪುಟ್ಟ ಬೆಟ್ಟವೇ ಮನೆಯಲ್ಲಿತ್ತು. ''ಜೈ ಕರ್ನಾಟಕ ವಿಶ್ವವಿದ್ಯಾಲಯ ದಲ್ಲಿ ಜೋರಾಗಿ ಮಳೆ ಬಿದ್ದಾಗೊಮ್ಮೆ ಮಹಾಪೂರ ಬಂದು ಅವರ ವಾಚನಾಲಯದ ಪುಸ್ತಕಗಳೆಲ್ಲ ಬಳಿದು ಹೋಗುವ ಪರಿಪಾಠವಿದೆಯಂತೆ. ಅವರ ಖಾಲಿಯಾದ ಬೀರು, ರ‍್ಯಾಕ್‌ಗಳನ್ನು ತುಂಬಲು ಇವು ಸಮರ್ಪಕವಾದ ಚಾರಿತ್ರಿಕ ಸಂಚಿಕೆಗಳು. ಜೊತೆಗೆ ಕೊನೆಯುಸಿರು ಬಿಟ್ಟ 'ಗ್ರಾಮವಿಕಾಸ', 'ಸಚಿತ್ರ ಭಾರತ' 'ರಸಿಕರಂಜನಿ'ಯ ಪ್ರತಿಗಳನ್ನೂ ಸೇರಿಸುತ್ತೇನೆ. ಅಪರಂಜಿಯ ಪ್ರತಿಗಳನ್ನು ಅದರ ಪ್ರಕಾಶಕರಿಗೇ ಮೀಸಲಾಗಿಡುತ್ತೇನೆ. 'ಕೊರವಂಜಿ' 'ಅಪರಂಜಿಯಾಗಿ' ಅವತರಿಸಿತು. ನಾಳೆ ಅದು ನಗೆ ಕಾರಂಜಿಯಾಗಿ ಪರಿವರ್ತನೆಯಾದಾಗ ಈಗಾಗಲೇ ಪ್ರಕಟಿತ ಲೇಖನಗಳು ಮರು ಮುದ್ರಣಕ್ಕೆ ಸಹಾಯವಾಗಿ ಕನ್ನಡ ಹಾಸ್ಯ ಕಾರಂಜಿ ಸದಾ ಪುಟಿಯುವಂತಾಗುತ್ತದೆ ! ಎಂದು ಅಭಿಮಾನದಿಂದ ಹೇಳಿದರು. ''ನಿಮ್ಮ ಪತ್ರ ರಾಶಿಯ ಗತಿ ಏನು ?'' ಎಂಬ ಪ್ರಶ್ನೆಗೆ ''ಪುರಾತತ್ವ ಇಲಾಖೆಯವರು ಮಾಜಿ ಮೈಸೂರರಸರ ಕಾಗದ ಪತ್ರಗಳನ್ನು ಐದು ಲಕ್ಷ ರೂಪಾಯಿ ಕೊಟ್ಟು ಖರೀದಿಸಿದ್ದಾರಂತೆ ! ಅಲ್ಲಿ ವಿಚಾರಿಸುವದು'' ಎಂದರು. ನನ್ನರಸರ ಕಾಗದ ಪತ್ರಗಳಿಗೆ ಐದು ರೂಪಾಯಿಗಳೂ ಗಿಟ್ಟಲಾರವು ! ಎಂದು ಗೊತ್ತಿದ್ದರೂ 'ಬಡ ರಸಿಕ ಯುವಕನಿಗೆ ಕೊಟ್ಟು ಬಿಡುತ್ತೇನೆ. ಅವನ್ನು ಮಾರಿ, ತನ್ನ ವಿದ್ಯಾರ್ಜನೆಗೆ ಬಂದ ಹಣ ಉಪಯೋಗಿಸಲಿ !' ಎಂದು ತಮ್ಮ ವ್ಯವಹಾರ ಜ್ಞಾನ ಪ್ರದರ್ಶಿಸಿದರು.

ಕೆಲಸಕ್ಕೆ ಬಾರದ ಹತ್ತಾರು ಕ್ಯಾಮರಾಗಳು ಮನೆಯಲ್ಲಿ ಬಿದ್ದಿದ್ದವು. ಅವನ್ನೇನು ಮಾಡುತ್ತೀರಿ ? ಎಂದು ವಿಚಾರಿಸಿದಾಗ ಧರ್ಮಸ್ಥಳದಲ್ಲಿ ದೊಡ್ಡದೊಂದು ವಸ್ತು ಸಂಗ್ರಹಾಲಯ ರೂಪುಗೊಳ್ಳುತ್ತಿದ್ದು ನಿನಗೆ ತಿಳಿದಿರಬಹುದು. ಲಕ್ಷೋಪಲಕ್ಷ ಭಕ್ತಾದಿ ಗಳಿಗೆ ಅನ್ನ ಸಂತರ್ಪಣೆ ಒದಗಿಸುವ ಧಾರಾಳ ಸಂಸ್ಥೆಯಲ್ಲಿ ನನ್ನ ಬಡ ಕ್ಯಾಮರಾಗಳಿಗೆ ಪುಟ್ಟ ಆಶ್ರಯ ಸಿಗಲಾರದೇ ? ಎಂದು ಮರುಪ್ರಶ್ನೆ ಹಾಕಿದರು.

ಗುಜರಿ ಸಾಮಾನುಗಳಿಂದ ತುಂಬಿತುಳುಕುತ್ತಿದ್ದ ಕೋಣೆಗೆ ಕರೆದೊಯ್ದು ತಮ್ಮ ಸಂಗ್ರಹ ತೋರಿಸುತ್ತ ಹೇಳಿದರು. ''ಅದೋ, ದಶಕಗಳಿಂದ ಸಂಗ್ರಹವಾದ ಕೊನೆಯುಸಿರು ಎಂದೋ ಎಳೆದ ಲೇಖನ ಸಾಮಗ್ರಿಯ ದಾಸ್ತಾನು ! ಬರೆಯುವ ಹವ್ಯಾಸವುಳ್ಳ ಮಕ್ಕಳಿಗೆ 'ಉಚಿತವಾಗಿ ಹಂಚಿದರಾಯ್ತು, ಛಾಯಾಚಿತ್ರಗಳಿಗೆ ಬೇಕಾದ

ಆಕಾರ ಕೊಡವಾಗ ಕತ್ತರಿಸಿದ ಚೂರುಗಳು ತುಂಬಿದ ಎಂಟು ಪೆಟ್ಟಿಗೆಗಳಿವೆ. ಬೀಡಿ ಸಿಗರೇಟು ಸೇದುವವರಿಗೆ ಇವು ಅತ್ಯವಶ್ಯ. ಚುಟ್ಟದ ಅಂಗಡಿಯವರಿಗೆ ತಿಳಿಸಿದರೆ ಕ್ಷಣಾರ್ಧದಲ್ಲಿ ಮನೆಗೇ ಬಂದು ಕೃತಜ್ಞತಾಪೂರ್ವಕ ಒಯ್ಯುತ್ತಾರೆ. ಬ್ರೂಕಾಫಿ, ಕಾಲ್ಗೇಟ್ ಟೂಥ್ ಪೇಸ್ಟ್‌ಗಳ ಖಾಲಿ ಟ್ಯೂಬು, ಲಕೋಟೆ, ಪೆಟ್ಟಿಗೆಗಳನ್ನು ಹಿಂದಿರುಗಿಸಿದರೆ ಹೊಸವನ್ನು ಕೊಂಡಾಗ ಬೆಲೆಯಲ್ಲಿ ಕಡಿತ ಮಾಡುವುದರಿಂದ ಅವುಗಳನ್ನು ಹಂಚುವುದು ಸಮಸ್ಯೆಯೇ ಅಲ್ಲ. ಹಾಳಾದ ವಿದ್ಯುತ್ ಬಲ್ಬ್, ಟ್ಯೂಬ್‌ಗಳಿಗೆ ಜೋಡಿಸಿರುವ ಧಾತುಗಳ ತಂತಿಗಳನ್ನು ತಿರುಗಿ ಕರಗಿಸುವುದರಿಂದ ಅವುಗಳನ್ನು ಸಂಗ್ರಹಿಸುವವರೂ ಇದ್ದಾರೆ. ಬೂಟ್, ಚಪ್ಪಲ್ ರಿಪೇರಿಯವನು ಹಳೇ ಪಾದರಕ್ಷೆಗಳನ್ನು ಖುಷಿಯಿಂದಲೇ ಒಯ್ಯುತ್ತಾನೆ. ಇದರಂತೆ ನನ್ನ ಸಕಲ ಸಂಗ್ರಹಕ್ಕೂ ಕಾಯಂ ಬೇಡಿಕೆ ಇದ್ದೇ ಇದೆ !'' ಎಂದು. ತಮ್ಮ ಸ್ವಂತದ ಮೋಡಕಾ ಬಾರ್ಝಾರನ್ನು ಕಣ್ದಣಿ ನೋಡಿ ಸಂತೋಷಪಟ್ಟರು.

ಬೇಡಾದ ಸಾಮಾನು ಕೊಟ್ಟುಬಿಡುವ ಕುರಿತು ಕೊನೆಗೊಮ್ಮೆ ರಾಯರ ಮನಸ್ಸು ಮಾರ್ಪಾಡು ಆದದ್ದನ್ನು ನೋಡಿ ಸಂತೋಷದಿಂದ 'ಹಾಗಾದರೆ ಈಗಲೇ ಈ ಕೆಲಸ ಮಾಡಿ ಮುಗಿಸಬಾರದೇ ? ನಿಮ್ಮ ಕಮ್ಮಟದಲ್ಲಿ ಓಡಾಡಲು ಸ್ಥಳವಾದರೂ ಆದೀತು !' ಎಂದು ಉದ್ಗರಿಸಿದೆ.

''ಅಯ್ಯೋ ಮಂಕೇ ! ನಾನು ಈಗಲೇ ಸ್ವರ್ಗಕ್ಕೆ ಹೊರಟಿಲ್ಲ. ನನ್ನ ಕೈಕಾಲು ಗಟ್ಟಿಯಾಗಿರುವ ತನಕ, ಅಂದರೆ ಇನ್ನೂ ಒಂದೆರಡು ದಶಕಗಳವರೆಗೆ ಕ್ರಿಯಾಶೀಲ ಜೀವನ ನಡೆಸಬೇಕೆಂದು ಆಶಯ ಇಟ್ಟುಕೊಂಡಿದ್ದೇನೆ. ಆದರೆ ಯಮಧರ್ಮರಾಯ ಅದಕ್ಕೂ ಮೊದಲು ಹಾರ್ನ್ ಬಾರಿಸಿ ಕರೆ ಕೊಟ್ಟರೆ ಇರಲಿ, ಎಂದು ಈ ಉಯಿಲಿನ ಏರ್ಪಾಡು ಮಾಡುತ್ತಿದ್ದೇನೆ. ಪರಲೋಕಕ್ಕೆ ಹೋಗುವಾಗ, ನಾನು ಇಹಲೋಕದಲ್ಲಿ ಬಿಟ್ಟುಹೋಗುವ ಚರಾಚರ ಆಸ್ತಿಯಲ್ಲಿ ಕೆಲಭಾಗವನ್ನಾದರೂ ಕಾದಿಡುವಂತೆ ಬರೆದಿಡುತ್ತೇನೆ. ಸ್ವರ್ಗಲೋಕದಲ್ಲಿ ಸುರಾಪಾನ ಮಾಡಿ ಸದಾಕಾಲ ರಂಭೆ–ಊರ್ವಶಿಯರೊಂದಿಗೆ ಚಕ್ಕಂದವಾಡುವುದು ನನ್ನ ಜಾಯಮಾನಕ್ಕೆ ಸರಿಹೋಗದ ಮಾತು. ಆದ್ದರಿಂದ ಅಲ್ಲಿಯೂ ಚಾಕು, ಕತ್ತರಿ, ಕರಗಸ, ಸುತ್ತಿಗೆಗಳಂಥ ಸಲಕರಣೆಗಳು ಬೇಕಾಗುತ್ತವೆ. ಅವನ್ನು ಪೂರೈಸುವ ಏರ್ಪಾಡು ಅಲ್ಲಿ ಇಲ್ಲದಿದ್ದರೆ, ಅವನ್ನು ಭೂಲೋಕದಿಂದ ತರಿಸಲೇಬೇಕಾಗುತ್ತದೆ ಅವನ್ನು ಕಳಿಸುವ ಜವಾಬ್ದಾರಿಯನ್ನು ರಾಜ್ಯ ಸರಕಾರಕ್ಕೆ ವಹಿಸಲಿದ್ದೇನೆ. ಅವರು ಸ್ಪೀಡ್ ಪೋಸ್ಟ್ ಇಲ್ಲವೇ ಕ್ಯೂರಿಯರ್ ಮೂಲಕ ಕಳಿಸಲೇಬೇಕಾಗುವುದು !

ಅರಿಯದ ಲೋಕದಲ್ಲಿಯೂ ನಾನು–ನೀನೂ ಜೊತೆಯಾಗಿ ಬಾಳುವೆ ಮಾಡಿ, ಅಲ್ಲಿಯೂ ''ಕಾಮತರ ಕಮ್ಮಟ'' ನಡೆಸುವಂತಾದರೆ ಅದಕ್ಕಿಂತ ಆನಂದ ಬೇರುಂಟೆ ?''.

■■

